ಪ್ರತಿಭಾ ಗ್ರಂಥಮಾಲೆ, ಧಾರವಾಡ. ಪುಷ್ಪ [illegible]

# ಸಸ್ತ್ರೀಪಿ

(ಸ್ವತಂತ್ರ ಸಾಮಾಜಿಕ ಕಾದಂಬರಿ ಪ್ರಥಮ [illegible])



ಲೇಖಕರು:

ಶ್ರೀ. ನವಗಿರಿನಂದರು



ಎಪ್ರಿಲ್
೧೯೫೧

ಬೆಲೆ:
೩-೮-೦

ಕರ್ನಾಟಕ ಸಾಹಿತ್ಯ ಮಂದಿರ,

# ಅರಿಕೆ

ಪ್ರತಿಭಾ ಗ್ರಂಥಮಾಲೆಯ ಎಂಟನೆಯ ವರುಷದಲ್ಲಿ ಸಲ್ಲಿಸ-ಬೇಕಾದಒಂಬತ್ತುನೂರು ಪುಟ ಸಾಹಿತ್ಯದಲ್ಲಿ ಈಗಾಗಲೆ ೭೭೦ ಪುಟಗಳನ್ನು ನಾಲ್ಕು ಕಿರಣಗಳ ರೂಪದಲ್ಲಿ ಸಲ್ಲಿಸಿದಂತಾಯಿತು. ಇನ್ನುಳಿದ ನೂರುಮೂವತ್ತು ಪುಟಗಳನ್ನು ನವೆಂಬರ ಕೊನೆಯವಾರದಲ್ಲಿ ತಪ್ಪದೆ ರವಾನಿಸುತ್ತೇವೆ. ಮುನ್ನುಡಿಗಾಗಿ ಕಾಯುವ ಪ್ರಸಂಗ ಬಂದಿರದಿದ್ದರೆ ೨-೩ನೇ ಕಿರಣಗಳು ಚಂದಾದಾರರಿಗೆ ಬೇಗನೆ ತಲುಪುತ್ತಿದ್ದವು. ಉಪಾಯ ವಿಲ್ಲ. ಆದರೂ ಹೊಸ ವರುಷವು ಆರಂಭವಾಗಿ ಮೂರೇಮೂರು ತಿಂಗಳಲ್ಲಿ ಇಷ್ಟೊಂದು ಪುಟಗಳನ್ನು ಮುಂಗಡವಾಗಿಯೇ ಕೊಟ್ಟದ್ದನ್ನು ನೆನೆದಲ್ಲಿ ಗ್ರಂಥಮಾಲೆಯ ಕಾರ್ಯತತ್ಪರತೆಯ ಬಗ್ಗೆ ಅರಿವಾಗದಿರದು.

ಶ್ರೀ.ನವಗಿರಿನಂದರ ಈ ಸ್ವಾರಸ್ಯಮಯ ಕಾದಂಬರಿಯು ಸ್ವತಂತ್ರವಾದ ಬೇರೊಂದು ಕಾದಂಬರಿಯಂತೆಯೇ ಇದ್ದರೂ ಶ್ರೀಯುತರು "ಇಂದ್ರಜಾಲ"ದ ಪಾತ್ರಗಳನ್ನೇ ಎತ್ತಿಕೊಂಡು ಅದನ್ನೇ ಒಳ್ಳೇ ಕುಶಲಗಾರಿಕೆಯಿಂದ ಬೆಳೆಸಿಕೊಂಡು ಬಂದಿದ್ದಾರೆ. ಈ ಕಾದಂಬರಿಯನ್ನು ಓದುವವರು ನಮ್ಮ ಗ್ರಂಥಮಾಲೆಯಿಂದಲೇ ಈ ಮೊದಲು ಪ್ರಕಟವಾದ "ಇಂದ್ರಜಾಲ"ವೆಂಬ ರಹಸ್ಯಮಯ ಕಾದಂಬರಿಯನ್ನು ಮೊದಲು ಓದುವದು ಅಗತ್ಯವಾಗಿದೆಯೆಂದು ಸೂಚಿಸದೆ ಇರಲಾರೆವು.

ನಮ್ಮ ಗ್ರಂಥಮಾಲೆಯ ಬಗ್ಗೆ ಒಳ್ಳೇ ಅಭಿಮಾನವನ್ನು ತಾಳಿ ನೆರವಾಗುತ್ತ ಬಂದ ಶ್ರೀ.ನವಗಿರಿನಂದರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ.

—**ಪ್ರಕಾಶಕ**


**ಮುದ್ರಕರು:**
**ಎಚ್. ಬಿ. ನವಲೂರ**
**ಉದಯ ಮುದ್ರಣಾಲಯ**
**ಧಾರವಾಡ.**

**ಪ್ರಕಾಶಕರು:**
**ಬಾಲಚಂದ್ರ ಘಾಣೇಕರ**
**ಪ್ರತಿಭಾ ಗ್ರಂಥಮಾಲೆ**
**ಧಾರವಾಡ.**

# ಸ ತ್ಯೇ ಪಿ

## ೧

ಮಹಿಳಾಭ್ಯುದಯ ಮಂಡಲಿ,
ತಾಂಬರಂ.
ಮದರಾಸು.

ತಾ. ........

"ಪ್ರಿಯ ಶ್ರೀನಿವಾಸರಾಯರ ಚರಣಾರವಿಂದಕ್ಕೆ. ನಿಮ್ಮ ಚಿರ ಕಿಂಕರಿಯಾದ ಸುಂದರಿಯ ಸಾಷ್ಟಾಂಗ ನಮಸ್ಕಾರ ಕ್ಷೇಮ, ನಿಮ್ಮ ಕ್ಷೇಮ ಸಮಾಚಾರಗಳನ್ನು ತಿಳಿಯಲು ಆತುರಳಾಗಿದ್ದೇನೆ. ತರುವಾಯ,

ಸ್ವಾಮಿ,

ನಿಮ್ಮನ್ನು ನನ್ನ 'ಪತಿ' ಎಂದು ಸಂಬೋಧಿಸಲು ನನಗೆ ಅಂಜಿಕೆಯಾಗುತ್ತದೆ. ಆದರೂ ಯಥಾರ್ಥದಲ್ಲಿ ನೀವು ನನ್ನ ಪತಿಯೇ ಅಲ್ಲವೆ? ನೀವು ನನ್ನನ್ನು ತ್ಯಾಜ್ಯಮಾಡಿದ್ದರೂ ನನ್ನ ಪತಿ ನೀವೆ. ಆದುದರಿಂದ ನಾನು ಹೀಗೆ ಸಂಬೋಧಿಸಿರುವುದಕ್ಕಾಗಿ ನನ್ನ ಮೇಲೆ ಸಿಟ್ಟಾಗಬಾರದೆಂದು ಬೇಡಿಕೊಳ್ಳುತ್ತೇನೆ.

ನಾನು ಸಿನೆಮಾರಂಗದಲ್ಲಿ ಎಷ್ಟೇ ಪ್ರಸಿದ್ಧಳಾಗಿದ್ದರೂ, ಬಾಹ್ಯದಲ್ಲಿ ನಿಮ್ಮನ್ನು ಎಷ್ಟೇ ಮರೆತಂತಿದ್ದರೂ, ನನ್ನ ಹೃದಯಾಂತರಾಳದಲ್ಲಿ ನಿಮ್ಮ ನೆನಪು ಅಚ್ಚಳಿಯದೆ ಹಾಗೇ ಇದೆ. ಬರುವ ಜನ್ಮದಲ್ಲಿ ನಾನು ನಿಮಗೆ ತಕ್ಕ ಹೆಣ್ಣಾಗಿ ಹುಟ್ಟಿ, ನಿಮ್ಮನ್ನೆ ಪತಿಯಾಗಿ ಪಡೆಯಬೇಕೆಂದು ಜಗದಂಬೆಯನ್ನು ನಿತ್ಯವೂ ಪ್ರಾರ್ಥಿಸುತ್ತಿದ್ದೇನೆ ಆದರೆ ಈ ಆಸೆ ಈ ಜನ್ಮದಲ್ಲಿ ಈಡೇರಲಾರದೆಂದು ನಾನು ಬಲ್ಲೆ. ನಿಮ್ಮ ಸಹಚಾರಿಣಿಯಾಗಿ ಬಾಳುವ ಭಾಗ್ಯವು ಇನ್ನು ಈ ಜನ್ಮದಲ್ಲಿ ನನಗಿಲ್ಲವೆಂದು ನಾನು ಚೆನ್ನಾಗಿ

ಬಲ್ಲೆ. ಒಂದು ವೇಳೆ ಅಘಟಿತ ಘಟಕನಾದ ದೇವನ ದಯೆಯಿಂದ, ಈ ಜನ್ಮದಲ್ಲೇ ಆ ಭಾಗ್ಯವು ಬಂದರೆ, ಆಹಾ! ನನ್ನಷ್ಟು ಸುಖಿ ಇನ್ನಾರು? ಇಲ್ಲ, ಈ ನೆನಸೇ ನನಗಿಲ್ಲ.

ನಾನು ಕಪ್ಪು ಬಣ್ಣದ ದಪ್ಪ ಮೈಯ ಕುರೂಪಿ. ವಿಕಳ ಪ್ರದರ್ಶನದಲ್ಲಿಯೇ ನನ್ನ ಪ್ರಸಿದ್ಧಿ ಈ ನನ್ನ ರೂಪಕ್ಕೆ ಹೊಣೆಯಾದವನು ಆ ದೇವ ಇದು ನಿಮ್ಮ ಪ್ರೇಮಕ್ಕೆ ನನ್ನನ್ನು ಎರವಾಗುವಂತೆ ಮಾಡಿದರೂ, ನನ್ನ ಹೃದಯವು ಹೆಣ್ಣು ಹೃದಯ. ಇದರಲ್ಲಿ ಪತಿ ಪ್ರೇಮವು ಹೇಗೆ ತುಂಬಿ ಸೂಸುವುದೆಂಬುದನ್ನು ನಾನೊಬ್ಬಳೇ ಬಲ್ಲೆ. ಕವಿಗಳಾದ ನೀವು ಪರೇಂಗಿತಜ್ಞರಾಗಿರುವುದರಿಂದ, ನೀವೂ ಊಹಿಸಬಲ್ಲಿರಿ ಏಕೆ ಬರೆಯುವೆನೆಂದರೆ, ನನಗೆ ಬೇಕಾದುದು ನಿಮ್ಮ ಸುಹೃದಯತೆಯ ಒಲುಮೆ-ಕನಿಕರ ಇಷ್ಟಿದ್ದರೆ ಸಾಕು. ನನ್ನ ಜನ್ಮವು ಸಾರ್ಥಕವಾದೀತು.

ನೀವೀಗ ದ್ವಿತೀಯ ವಿವಾಹ ಮಾಡಿಕೊಂಡಿದ್ದೀರೆಂದು ನನ್ನ ನಂಬುಗೆ. ಮಾಡಿಕೊಳ್ಳದಿದ್ದರೆ ಮಾಡಿಕೊಳ್ಳಬೇಕೆಂದೂ ನನ್ನ ಕೋರಿಕೆ, ಇಚ್ಛೆ, ಒತ್ತಾಯ

ಸ್ವಾಮಿ, ನಾನೀಗ ಸಿನೆಮಾರಂಗದಲ್ಲಿಲ್ಲ. ಅದು ನನಗೆ ಎಷ್ಟೇ ಲಾಭದಾಯಕವಿದ್ದರೂ, ಅದರ ಮೇಲೆ ನನಗೆ ವಿರಕ್ತಿ ಹುಟ್ಟಿರುತ್ತದೆ. ಅಲ್ಲದೆ ಅದು ಉದಾತ್ತದಾಯಕ ಕೀರ್ತಿಯೂ ಅಲ್ಲ. ಅಂತೆಯೇ ಅದರಿಂದ ಮುಕ್ತಳಾಗಿದ್ದೇನೆ 'ಮಹಿಳಾಭ್ಯುದಯ ಮಂಡಲಿ'ಯಲ್ಲಿ ಶಿಕ್ಷಕಿಯಾಗಿ ಸೇರಿದ್ದೇನೆ. ಹುಡುಗಿಯರಿಗೆ ನೈಸರ್ಗಿಕವಾದ ನಾಟ್ಯವನ್ನೂ, ಸಂಗೀತವನ್ನೂ ಕಲಿಸಿಕೊಡುವ ಸೇವೆಯನ್ನು ಮಾಡುತ್ತಿದ್ದೇನೆ ಇದು ನಾನು ಸಿನೆಮಾ ರಂಗದಲ್ಲಿ ಕಲಿತ ಕಲೆ ಆದಾಯಕ್ಕಾಗಿ ನಾನು ಈ ಸೇವೆಯನ್ನು ಕೈಕೊಂಡಿಲ್ಲ. ಪತಿಯಿಂದ ತ್ಯಾಜ್ಯಳಾದವಳಿಂದ ಏನಾದರೊಂದು ಸೇವೆ ಸಾಧಿಸಲೆಂದೇ ಹೀಗಿದ್ದೇನೆ. ಇದಕ್ಕಿಂತ ಹೆಚ್ಚಿನ ಸೇವೆ ಸಾಧಿಸಬೇಕೆಂಬ ಹಂಬಲವೂ ನನಗಿದೆ. ನನ್ನ ಪರೋಕ್ಷ ಸೇವೆಯನ್ನು ನೀವು ಸ್ವೀಕರಿಸುವಿರಾ? ನನ್ನ ದೇವಾಧಿದೇವರು ನೀವೇ. ನನ್ನ ಸರ್ವಸ್ವವೂ ನಿಮ್ಮದು. ನಿಮ್ಮ ಸಾಹಿತ್ಯ ಸೇವೆಗೂ ನನ್ನದೊಂದಿಷ್ಟು ಸೇವೆಯನ್ನು ಸಲ್ಲಿಸಬೇಕೆಂದಿದ್ದೇನೆ. ಅದಕ್ಕಾಗಿ ಇದರೊಂದಿಗೆ ೨೫೦೦೦ ರೂಪಾಯಿಯ ಒಂದು ಚೆಕ್ಕು ಇಟ್ಟಿರುತ್ತೇನೆ. ಇದನ್ನು ನೀವು ದಯ

ಮಾಡಿ ಸ್ವೀಕರಿಸಿಕೊಳ್ಳಬೇಕು. ನನ್ನ ಹಣವನ್ನು ನಿಮ್ಮ ಸ್ವಂತಕ್ಕೆ ಸ್ವೀಕರಿಸಲು ನಿಮಗೆ ಇಷ್ಟವಿಲ್ಲದಿದ್ದರೆ, ಇದನ್ನು ನಿಮ್ಮ ಸಾಹಿತ್ಯ ಸೇವೆಗಾದರೂ ಉಪಯೋಗಿಸಿಕೊಳ್ಳಬೇಕು. ಏನೂ ಪ್ರತಿಫಲವಿಲ್ಲದೆ ನಮ್ಮನ್ನು ಸ್ವೀಕರಿಸಲಿಕ್ಕೂ ಒಪ್ಪದೆ ಇದ್ದರೆ, ನಿಮ್ಮದೊಂದು ಮೂಲ ಪುಸ್ತಕವನ್ನು ನನಗೆ ಕಳುಹಿಸಿರಿ. ನಾನು ಮೂರು ಭಾಷೆಗಳಲ್ಲಿಯೂ ಬರೆಯಿಸಿ ಪ್ರಕಾಶಿಸಲು ತಕ್ಕ ಏರ್ಪಾಡು ಮಾಡುತ್ತೇನೆ. ಅವಕ್ಕೆ ತಕ್ಕ ಪ್ರತಿಭಾವಂತರು ಇಲ್ಲಿದ್ದಾರೆ. ಅಂತೂ ಈ ಚೆಕ್ಕನ್ನು ವಾಪಾಸು ಕಳುಹಿಸಿ ನನ್ನನ್ನು ದುರಂತ ಬಾಧೆಗೆ ಗುರಿಪಡಿಸಬಾರದಾಗಿ ಕೇಳಿಕೊಳ್ಳುತ್ತೇನೆ.

ಸ್ವಾಮಿ, ನನ್ನ ಹೃದಯವನ್ನೆ ತೆರೆದು ಈ ಕಾಗದವನ್ನು ಬರೆದಿದ್ದೇನೆ ನನ್ನ ಮೇಲೊಂದು ಆದರವು ನಿಮ್ಮ ಹೃದಯದಲ್ಲಿದೆ ಎಂಬುದಕ್ಕೆ ಅರಿಗುರುತಾಗಿ ನನಗೊಂದು ಪ್ರತ್ಯುತ್ತರವನ್ನು ದಯಪಾಲಿಸಿರಿ. ಇತಿ—

ನಿಮ್ಮನ್ನೆಂದೂ ಮರೆಯದ ನಿಮ್ಮ
ಚರಣದಾಸಿ---ಸುಂದರಿ"

ಸಾಹಿತಿ ಶೀನು ಇನ್ನೊಮ್ಮೆ ಈ ದೀರ್ಘ ಪತ್ರವನ್ನು ಓದಿದನು. ಮೊದಲ ಬಾರಿ ಓದಲಾರಂಭಿಸಿದಾಗ, ಅದು ಸುಂದರಿಯ ಪತ್ರವೆಂದು ತಿಳಿಯುತ್ತಲೆ, ಅದನ್ನು ಚೂರುಚೂರು ಮಾಡಿಬಿಡೋಣವೆನ್ನಿಸಿತ್ತು. ಸುಂದರಿ ಎಂಬ ಅವಳ ಹೆಸರೆ ಅವನಿಗೆ ಅಸಂಹಿಕೆಯಾಗಿತ್ತು. ಆದರೆ ಅದರೊಂದಿಗಿದ್ದ ಚೆಕ್ಕು ಅವನಿಗೆ ಕುತೂಹಲವನ್ನು ಹುಟ್ಟಿಸಿತ್ತು ಮನಸ್ಸನ್ನು ಕರಗಿಸುವ ಮಾತುಗಳು ಅವನನ್ನು ಮುಂದುವರಿಸಿದ್ದುವು ಓದಿ ಮುಗಿಸಿದಾಗ ಅವನು ಅನುತಾಪ ಪೂರ್ಣ ಹೃದಯನಾಗಿದ್ದನು ಅಂತೆಯೇ ಇನ್ನೊಮ್ಮೆ ಓದಿದನು. ಅದರಿಂದ ಅವನ ಕಠಿನ ಹೃದಯವು ಇನ್ನಷ್ಟು ಮೃದುವಾಯಿತು.

ಶೀನು ಒಬ್ಬ ಸಾಹಿತಿ ಸಾಹಿತಿಗಳ ಮನಸ್ಸು ಸ್ವಾಭಾವಿಕವಾಗಿ ಕಠಿನವಾದುದಲ್ಲ ಯಾವುದೊಂದು ಕಾರಣದಿಂದ ಅಲ್ಲಿ ಕಾಠಿಣ್ಯದ ಪರೆ ಎದ್ದರೂ, ಕೊಂಚ ನೋವಾದ ಮಾತ್ರಕ್ಕೆ ಅದು ಕರಗಿಹೋಗುವಂತಹುದೇ. ಆದರೆ................

ಯೋಚನೆ ಮುಂದುವರಿಯಲಾರಂಭಿಸಿತ್ತು; ಪತ್ರವೂ ಚೆಕ್ಕೂ ಮೇಜಿನ ಮೇಲೆ ಕುಳಿತು, ಅವನ ಯೋಚನೆಯನ್ನು ಹರಿಯಗೊಟ್ಟುವು.

ಪಾಪ ! ಸುಂದರಿಯದೇನು ತಪ್ಪು ? ಅವಳನ್ನು ಅವನ ಕೈಗೆ ಬಿಗಿಸಿದ ರಾಮಾ ಜೋಯಿಸರನ್ನಾದರೂ ದೂರಲೇಕೆ ? ತಪ್ಪೆಲ್ಲಾ ಅವನದೇ ಅವನು 'ಹುಡುಗಿಯನ್ನು ನೋಡುವ' ಗೊಡವೆಗೇ ಹೋಗದೆ, ವೈರಾಗ್ಯ ಭಾವದಲ್ಲಿ ಆ ಮದುವೆಗೆ ಒಪ್ಪಿದ್ದೇ ತಪ್ಪು. ಆ ವೈರಾಗ್ಯಕ್ಕೆ ಕಾರಣ.... ...........? ಆಹಾ! ಚಿಕ್ಕಂದಿನಿಂದಲೂ ಅವನು ಪ್ರೀತಿಸಿ ಬಂದಿದ್ದ ಆ ಕಮಲೆಯ ಭಗ್ನಪ್ರೇಮ ಅವನು ಸ್ವಾಭಾವಿಕವಾದ ಆ ಹಾಳು ದಾಕ್ಷಿಣ್ಯ ಕ್ಕೊಳಗಾಗಿ, ಕಮಲೆಯ ಮೇಲಿನ ಪ್ರೇಮವನ್ನು ಬಚ್ಚಿಟ್ಟುಕೊಂಡು, ಅವಳಿಗೆ ವಿವಾಹವಾದ ಮೇಲೆ ಮಿಡುಕುವುದೆಂದರೆ ಎಂತಹ ತಿಳಿಗೇಡಿತನ! ಆ ಒಂದು ಸಣ್ಣ ಕಿಡಿಯಂತಹ ತಪ್ಪು ಎಂತಹ ಅನರ್ಥಕಾರಿಯಾಯಿತು! ಅವನ ಹೃದಯದಲ್ಲಿ ವಿವಾಹ ವೈರಾಗ್ಯವನ್ನು ಹುಟ್ಟಿಸಿತು. ಆ ವೈರಾಗ್ಯ ದಿಂದ ಕುರೂಪಿ ಸುಂದರಿಯೊಡನೆ ತಂತ್ರದ ಮದುವೆಯಾಯಿತು. ಈ ಮದುವೆಯ ವ್ಯಸನದಿಂದಲೇ ಅವನ ತಾಯಿ ತೀರಿಹೋದಳು ಆ ಕುರೂಪಿಯೊಡನೆ ಬಾಳುವೆ ಮಾಡಲು ಅಂಜಿ, ಅವನು ಊರುಬಿಟ್ಟು ಓಡಿಹೋದನು ಅಜ್ಞಾತವಾಸದಲ್ಲಿ ಅಡಗಿದನು ಆದರೆ ಹೂವು ಅಡಗಿ ದ್ದರೂ ವಾಸನೆ ಅಡಗಿರುವುದೆ? ಅವನು " ಕನ್ನಡ ಗೆಳೆಯ " ಎಂಬ ಸಂಕೇತ ನಾಮದಿಂದ ಕನ್ನಡ ನಾಡಿಗೆ ಪರಿಚಿತನಾದನು. ಆದರಿಂದ ಅವನ ಸುಳಿವು ಹಿಡಿದ ಅವನ ತಮ್ಮ ಕೃಷ್ಣನು, ಬಳ್ಳಾರಿಯಲ್ಲಿ ಅಡಗಿದ್ದ ಅವನನ್ನು ಕಂಡು ಹಿಡಿದು, ಊರಿಗೆ ಕರೆದುಕೊಂಡು ಬಂದಿದ್ದ. ಆಗ ಕೃಷ್ಣನು ಅದೆಂತಹ ಕೆಲಸ ಮಾಡಿಟ್ಟಿದ್ದ ! ಅವನ ಅತ್ತಿಗೆಯನ್ನು— ಶೀನೂನ ಹೆಂಡತಿ ಆ ಕುರೂಪಿ ಸುಂದರಿಯನ್ನು—ಅದೆಂದೋ ಹೊರಗೆ ಅಟ್ಟಿಬಿಟ್ಟಿದ್ದ. ಪಾಪ! ದಿಕ್ಕಿಲ್ಲದ ಆ ಕುರೂಪಿ ಹೆಣ್ಣು ಎಲ್ಲಿಗೆ ಹೋದಾಳು? ಅವಳಿಗೆ ಬಲುತಂತ್ರದಿಂದ ಮದುವೆ ಮಾಡಿಸಿದ ಅದೇ ರಾಮಾ ಜೋಯಿಸರನ್ನೆ ಅವಳು ಮರೆಹೊಕ್ಕಿದ್ದಳು. ಅವರು ಅವಳನ್ನು ಘುದರಾಸಿನ "ಪ್ರಕೃತಿ ಕಳೋದ್ಧಾರಕ ಫಿಲಂ" ಸಂಸ್ಥೆಗೆ ಸೇರಿಸಿಬಿಟ್ಟರು. ಆಹಾ! ಅಲ್ಲಿ ಅವಳು ಎಷ್ಟು ಪ್ರಸಿದ್ಧಳಾಗಿ ಮೆರೆದಳು! ಏನು ಅವಳ ವಿಕೃತ ನಾಟ್ಯ ! ಏನು ಅವಳ ಮಧುರ ಸಂಗೀತ ! ಅವಳ ವಿಕೃತ ನಾಟ್ಯ ಮಧುರ ಗೀತಗಳನ್ನು ನೋಡುವುದು ಕೇಳುವುದು ಎಂದರೆ ಜನರಿಗದೆಷ್ಟು ಕುತೂಹಲ !

ಕಟ್ಟಕಡೆಯ ಬಾರಿ ಶೀನು ಬಳ್ಳಾರಿಯಿಂದ ಹೊರಟು ಬರುವ ಮುನ್ನ ಅವಳ ದರ್ಶನ ಅವನಿಗಾಗಿತ್ತು. ಬಳ್ಳಾರಿಯಲ್ಲೊಂದು ನಾಟ್ಯ ಪ್ರದರ್ಶನಕ್ಕಾಗಿ ಮದರಾಸಿನಿಂದ ಅವಳು ಅಲ್ಲಿಗೆ ಬಂದಿದ್ದಳು. ಆಗ ಅವಳು ಶೀನುವಿನ ಕಾಲಿಗೆ ಬಿದ್ದು ತನ್ನನ್ನು ಸ್ವೀಕರಿಸಿಕೊಳ್ಳುವಂತೆ ಪರಿಪರಿಯಾಗಿ ಬೇಡಿಕೊಂಡಿದ್ದಳು. ತನ್ನೊಡನೆ ಮದರಾಸಿಗೆ ಬಂದು ಸುಖವಾಗಿರಬಹುದೆಂತಲೂ ಪ್ರಾರ್ಥಿಸಿಕೊಂಡಿದ್ದಳು. ಶೀನು ಅಸಹನೀಯವಾಗಿ ನಿರಾಕರಿಸಿ ಬಿಟ್ಟಿದ್ದ. ಅವಳೊಡನೆ ಹೆಚ್ಚು ಮಾತಿಗೂ ಅವಕಾಶ ಕೊಡದೆ ಊರಿಗೆ ಹೊರಟು ಬಂದಿದ್ದ. ಇದು ನಡೆದು ಒಂದು ವರ್ಷದ ಮೇಲೆ ಈಗ ಆಕಸ್ಮಿಕವಾಗಿ ಅವಳ ಪತ್ರವು ಬಂದಿತ್ತು. ೨೫೦೦೦ ರೂಪಾಯಿಯ ಕಾಣಿಕೆ ಬೇರೆ!

ಯೋಚನೆ ಮಾಡಿದಂತೆ ಆ ಪತ್ರದಲ್ಲೇನೂ ವಂಚನೆ ಇಲ್ಲವೆಂದೇ ತೋರಿತು. ಏಕೆಂದರೆ, ಮದರಾಸಿನಂತಹ ಮಹಾನಗರವನ್ನು ಸೇರಿ, ಸಿನೆಮಾರಂಗದಲ್ಲಿ ಮೆರೆದು, ಧನರಾಶಿಯಲ್ಲಿ ಓಲಾಡುತ್ತಿರುವ ಸುಂದರಿ, ಇಷ್ಟು ಕಾಲವಾದರೂ ತೀರ ಬಡವನಾದ ಶೀನು, ಅವಳನ್ನು ತುಚ್ಛೀಕಾರವಾಗಿ ನಿರಾಕರಿಸಿದ ಶೀನುವನ್ನು ಮರೆಯಲಿಲ್ಲವೆಂದರೆ, ಅವಳು ಸಾಮಾನ್ಯ ಸಾವಿರದೊಳಗಿನವಳೆ? ಹಳ್ಳಿಯಲ್ಲಿ ಹುಟ್ಟಿ, ಬೆಳೆದು, ಹಳ್ಳಿಯ ಶಾಲೆಯಲ್ಲಿ ೮ನೇ ಕ್ಲಾಸಿನವರೆಗಷ್ಟೇ ಕಲಿತಿದ್ದ ಅವಳು ಈಗ ಅದೆಷ್ಟು ಸಂಸ್ಕಾರ ಹೊಂದಿಬಿಟ್ಟಿದ್ದಾಳೆ, ಈ ಕೆಲವೇ ವರ್ಷಗಳಲ್ಲಿ! ಈ ಪತ್ರವೇ ಅವಳ ನಾಗರಿಕ ಸಂಸ್ಕಾರವನ್ನು ಬಿಚ್ಚಿ ತೋರಿಸುತ್ತದೆ. ಹಾಗೆಯೇ ಸ್ವಭಾವವೂ ಪರಿವರ್ತನವಾಗಿದೆ. ತುಂಬಾ ಲಾಭದಾಯಕವಾದ ಸಿನೆಮಾರಂಗವನ್ನೆ ತ್ಯಜಿಸಬೇಕಾದರೆ ಅವಳೆಷ್ಟು ತ್ಯಾಗಬುದ್ಧಿಯವಳಾಗಿರಬೇಕು!

ಈಗ್ಗೆ ಮೂರು ತಿಂಗಳ ಹಿಂದೆ ''ಬರ್ಮಾ ಎವಾಕ್ಷಿವೇಶನ್ನಿನ ನಿಧಿಗೆ ಪ್ರಸಿದ್ಧ ಸಿನೆಮಾ ತಾರೆ ಸುಂದರೀಬಾಯಿ ಹತ್ತು ಸಾವಿರ ರೂಪಾಯಿ ದಾನ ಮಾಡಿದ್ದಾಳೆ'' ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ವಾರ್ತೆ ಅವನಿಗೆ ನೆನಪಿತ್ತು. ಅದೀಗ ಮೂರ್ತಿಮಂತವಾಗಿ ಎದ್ದು ನಿಂತಿತು. ಏನು ನೆನಪಿದ್ದೂ ಮನಸು ಕರಗಿದರೇನು? ಇನ್ನು ಅವಳೊಡನೆ ಬಾಳುವೆ ಮಾಡಲು ಸಾಧ್ಯವೇ? 'ವಿಕಳ ಸಿನೆಮಾ ನಟಿ' ಎಂದು ಪ್ರಖ್ಯಾತಳಾದವಳು........ಅಂತಹಳನ್ನು ಮನೆಗೆ ಹೊಗಿಸಿದರೆ

ಊರೆಲ್ಲ ನಗೆಗೀಡಾದೀತು!............ಹಾಗಾದರೆ ಅವಳ ಚೆಕ್ಕು ಪಾತ್ರ ಅವನು ಸ್ವೀಕರಿಸುವುದು ಹೇಗೆ? ತಿರುಗಿ ಕಳುಹಿಸಿದರೂ ಅವಳನ್ನು ಸಂಕಟಪಡಿಸಿದಂತೆ............ಅವಳ ಕೋರಿಕೆಯಂತೆ ಒಂದು ಕಾದಂಬರಿಯನ್ನು ಕಳುಹಿಸಿದರೋ? ಅವಳು ಹೇಗೆ ಪ್ರಕಟಿಸುವಳೋ ಪ್ರಕಟಿಸಲಿ ಅವಳ ಈ ೨೫೦೦ ರೂಪಾಯಿಯನ್ನು ಏನಾದರೂ ಒಂದು ಪ್ರಯೋಜನಕಾರಿಯಾದ ಕನ್ನಡ ಸೇವೆಗೆ ವಿನಿಯೋಗಿಸೋಣ. ಇದೇ ಸರಿ........

## ೨

“ಏನಣ್ಣಾ ಇದು?............ಗಾಥಾಲೋಚನೆ! ಇದೇನು?............ ಚೆಕ್ಕೆ?............”

ಬಂದ ಶಾಲೆಯಿಂದ ಮಧ್ಯಾಹ್ನ ಮನೆಗೆ ಬಂದ ಕೃಷ್ಣನು ಅಣ್ಣನನ್ನು ಕಂಡು ಅಚ್ಚರಿಪಟ್ಟು ಎಚ್ಚರಿಸಿದನು.

"ಆ ಸುಂದರಿಯ ಕಾಗದ ಕೃಷ್ಣ; ಮತ್ತು ಅವಳ ಕಾಣಿಕೆಯಿದು."

"ಹ?"—ಎಂದು ಕೃಷ್ಣನು ಅಚ್ಚರಿಯಿಂದ ಬಾಯಿ ತೆರೆದನು. ಅವನ ಮುಖದಲ್ಲಿ ಸುಂದರಿಯ ಮೇಲಿದ್ದ ಅಸಹ್ಯ-ಕೋಪ ಭಾವವು, ಅವಳ ಕಾಣಿಕೆಯನ್ನು ಕಂಡ ಕೂಡಲೇ ಇಳಿದು ಹೋಗಿ ಅಚ್ಚರಿಯ ಪ್ರಶ್ನೆಯೊಂದೇ ನಿಂತಿತು. ಅಣ್ಣನ ಇದಿರು ಇನ್ನೊಂದು ಕುರ್ಚಿಯ ಮೇಲೆ ಕುಳಿತನು

ಕೃಷ್ಣನು ದೂರದಲ್ಲಿ ಬರುವಾಗಲೇ ಕಂಡು ಹಿಡಿದು, ಅಂಗಳದ ಮೊನೆಗೆ ಓಡಿಹೋಗಿ, ಅವನ ಕೈಕಾಲು ಮೂಸಿ ಬಳಸಿ ಸ್ವಾಗತಮಾಡಿ ಕರೆತಂದ 'ಬೊಳ್ಳು' ನಾಯಿ, ಕೃಷ್ಣನು ಅದರ ಮೈದಡವಿ ಒಳಗೆ ಹೋದ ಮೇಲೆ, ಅತ್ತ ಜಗಲಿಯಲ್ಲಿ ಕಂಬಕ್ಕೊರಗಿ ಕುಳಿತುಕೊಂಡು ಜಪ ಸರ ಹಿಡಿದು ಅರೆನಿಷ್ಠೆಯಲ್ಲಿದ್ದ ದೊಡ್ಡಮ್ಮನ ಮುಂದೆ ಹೋಗಿ 'ಕ್ಯೆಂಕುಯಿಂ' ಕೂಗಿ ಎಚ್ಚರಿಸಿತು. ಎಚ್ಚೆತ್ತ ದೊಡ್ಡಮ್ಮ— "ಓ! ಬಂದನೇ ಕೃಷ್ಣ? ಗಂಟೆ ಹನ್ನೆರಡು ಅಬ್ಬ! ಏನು ಅವಸರವೋ ಬೊಳ್ಳಾ!" ಎನ್ನುತ್ತ ಒಳಗೆ ಹೋಗಿ ಈ ಅಣ್ಣ-ತಮ್ಮಂದಿರ ಊಟದ ಸಿದ್ಧತೆಗೆ ತೊಡಗಿದಳು ಬೊಳ್ಳು ಮತ್ತೆ ಚಾವಡಿಯ ಕಡೆಗೆ ಓಡಿ, ಶೀನೂ-ಕೃಷ್ಣರ ಮುಂದೆ

ಕುಳಿತು, ಜೋಲು ನಾಲಿಗೆಯಿಂದ ನೀರಿಳಿಸಿಕೊಂಡು ಅವರನ್ನೇ ನೋಡುತ್ತ, ಆಗಾಗ 'ಕುಯಿಂ ಕುಯಿಂ' ಎಂದು ಸಣ್ಣ ದನಿಯಿಂದ ಅವಸರ ಪಡಿಸುತ್ತಿತ್ತು. ಈ ಸಹೋದರರು ಅದರ ಆತುರವನ್ನು ಲಕ್ಷ್ಯ ಮಾಡದೆ ಆ ಕುತೂಹಲಕಾರಿಯಾದ ಪತ್ರ ವಿಷಯ ಮಾತುಕತೆಯಲ್ಲಿ ನಿರತರಾಗಿದ್ದರು

ಕೃಷ್ಣನೆಂದ : "ಚಿಂತೆಯಿಲ್ಲಣ್ಣ. ನಿನ್ನ ಮೇಲೆ ಎಷ್ಟು ಅಭಿಮಾನ ಇಟ್ಟಿದ್ದಾಳೆ! ನಾನು ಎಂಥವಳೋ ಏನೋ ಅಂತ ಇದ್ದೆ. ಆದರೆ ಅವಳೊಡನೆ ಸಂಸಾರ ಮಾಡುವ ಆಲೋಚನೆ ಮಾತ್ರ ಬೇಡಣ್ಣ.''

"ಇಲ್ಲ ಅದೆಲ್ಲ ಇನ್ನೆಲ್ಲಿ? ಕಾಗದ ನೋಡಿದರೇನೋ ಅವಳಿಗೆ ಅಂತಹ ಇಚ್ಛೆ ಇರುವ ಹಾಗೇ ಭಾಸವಾಗುತ್ತದೆ. ಇದ್ದೀತು ಪಾಪ! ಆದರೆ ಈಗ ಕರೆದುಕೊಂಡರೆ ಅವಳ ಕೈಯಲ್ಲಿರುವ ಹಣಕ್ಕಾಗಿ ನಾನು ಅವಳನ್ನು ಕರೆದುಕೊಂಡೆನೆಂದು ಊರೆಲ್ಲ ಹೇಳಿಕೊಂಡು ನಕ್ಕಾರು. ಈಗ ಈ ಚೆಕ್ಕಿನ ವಿಷಯ ನಿನ್ನ ಅಭಿಪ್ರಾಯವೇನು ಕೃಷ್ಣ?''

"ನಿನಗೆ ಗೊತ್ತಿಲ್ಲವೇ ಅಣ್ಣ?............ಅವಳೊಬ್ಬಳೇ ಇರುವುದು. ಕೊಳ್ಳೆ ಹಣ ಸಂಪಾದಿಸಿದ್ದಾಳೆ! ಏನೋ ಒಳ್ಳೆ ಬುದ್ಧಿ ಬಂದು ನಿನಗಿಷ್ಟು ಕಳಿಸಿದ್ದಾಳೆ. ನಿನಗೆ ಸುಮ್ಮನೆ ಅವಳ ಹಣ ತೆಗೆದುಕೊಳ್ಳಲು ಸಾಧ್ಯವಿಲ್ಲದಿದ್ದರೆ, ಒಂದು ಪುಸ್ತಕವನ್ನು ಕಳುಹಿಸುವಂತೆ ಬರೆದಿದ್ದಾಳಲ್ಲವೇ? ಕನ್ನಡದಲ್ಲಿ ಎಂತಹ ಒಳ್ಳೆಯ ಪುಸ್ತಕ ಬರೆದರೂ ಇಪ್ಪತ್ತೈದು ಸಾವಿರ ಎಲ್ಲಿ ಸಿಕ್ಕೀತು?"

ಆಗ ಮನೆಯೊಳಗಿನಿಂದ ದೊಡ್ಡಮ್ಮನ ದನಿ ಕೇಳಿತು:– "ಶೀನೂ, ಕೃಷ್ಣಾ! ಊಟಕ್ಕೆ ಬನ್ನಿರ್‍ಯ! ಬಡಿಸಾಯ್ತು."

"ಹೌದು ಹಾಗೇ ಮಾಡುವ" ಎಂದು ಶೀನು ಎದ್ದ.

ಕೃಷ್ಣನೂ ಅವನ ಹಿಂದೆ ಹೋಗುತ್ತ, "ಅಣ್ಣ, ಈ ದಿನ ಬೆಳಗ್ಗೆ ರಾಮಾ ಜೋಯಿಸರು ಅಂಗಡಿಗೆ ಬಂದವರು, ಸಾಯಂಕಾಲ ನಿನ್ನ ಹತ್ರ ಮಾತಾಡ್ಲಿಕ್ಕೆ ಬರ್ತೇನೆಂದರು." ಎಂದು ಹೊಸ ಸಮಾಚಾರ ಹೇಳಿದ.

ಇಷ್ಟರಲ್ಲಿ ಜೊಳ್ಳು ಅಂಗಳಕ್ಕೆ ನೆಗೆದು, ಆನಂದ ನಿರೀಕ್ಷಣೆಯಲ್ಲಿ ಕುಳಿತು ಬಿಟ್ಟಿತ್ತು.

ಶೀನು ಆಶ್ಚರ್ಯದಿಂದ "ಎಲ! ಫಕ್ಕನೆ ಅವರಿಗೆ ನನ್ನ ನೆನಪು ಯಾಕೆ ಬಂತೊ? ನಾನು ಬಂದು ಒಂದು ವರ್ಷವಾದರೂ ಈ ಕಡೆಗೆ ಹಣಿಕಲಿಲ್ಲ."

"ಹ್ಯಾಗೆ ಹಣಿಕಿಯಾರು? ಯಾವ ಮುಖದಲ್ಲಿ? ನಿನಗೆ ಅವರು ಮಾಡಿದ ಮೋಸವೇ ಅಂಥಾದ್ದು. ನನ್ನ ಹತ್ತಿರ ಕೂಡ ಅವರು ಹೆಚ್ಚು ಮಾತಾಡುವುದಿಲ್ಲ. ಏನೋ ಅಂಗಡಿಗೆ ಬರುತ್ತಾರೆ, ಅವರ ಕೆಲಸಮಾಡಿ ಕೊಂಡು ಹೋಗುತ್ತಾರೆ. ಇವತ್ತು ಮಾತ್ರ ನನ್ನೊಡನೆ ಪ್ರತ್ಯೇಕ ಮಾತಾಡಲಿಕ್ಕೆ ನಿಂತು, ನಿನ್ನ ವಿಷಯವೆಲ್ಲ ಕೇಳಿದರು.''

"ಅಂದರೆ?............ಇನ್ನೊಂದೇನಾದರೂ ಹೊಸ ತಂತ್ರ ಹೂಡುವ ಲಕ್ಷಣವೆ?............"

"ಹಾಗಿಲ್ಲಣ್ಣ. ಈಗ ಅವರು ತುಂಬಾ ಮೆತ್ತಗಾಗಿದ್ದಾರೆ. ನಿನ್ನ ಸಂಬಂಧದಲ್ಲಿ ತುಂಬಾ ಪಶ್ಚಾತ್ತಾಪ ಪಡುವ ಹಾಗೇ ಕಾಣುತ್ತದೆ "

ಇಬ್ಬರೂ ತಟ್ಟೆಯ ಮುಂದೆ ಕುಳಿತು ಊಟಕ್ಕೆ ಅಣಿಯಾಗಿದ್ದರು. ಆಗ ದೊಡ್ಡಮ್ಮನು ಬಡಿಸುತ್ತ ಅವರ ಮಾತಿಗೆ ಬಾಯಿ ಹಾಕಿದಳು-- "ಆ ರಾಮಾ ಜೋಯಿಸನ ತಂಟೆ ಮಾತ್ರ ನಿಮಗೆ ಬೇಡ ಮಕ್ಕಳೆ. ಒಮ್ಮೆ ಆದದ್ದು ಸಾಲದೆ? ನನ್ನ ಮಾತು ಕೇಳು ಶೀನು, ನಮ್ಮ ಹಳೇ ಮೇರು ಹನುಮಾಛಾರ‍್ರನ್ನು ಹಿಡಿದರೆ ನಿನಗೆ ಒಳ್ಳೇ ಹೆಣ್ಣು ನೋಡಿ ಮದುವೆ ಮಾಡಿಸಿಯಾರು. ಆ ಮೇಲೆ ಗೌರಿಯ ಮದುವೆ ಕೃಷ್ಣನ ಮದುವೆ ಎಲ್ಲ ಅವರ ಸಹಾಯದಿಂದಲೇ ಮಾಡಿಸುವ " ಎಂದು ಉದ್ದಕ್ಕೆ ಹೇಳಲಾರಂಭಿಸಿದಾಗ ಶೀನು ತಡೆದು— "ಈಗ ಇಲ್ಲಿ ಯಾರಿಗೂ ಮದುವೇ ಮಾತೇ ಇಲ್ಲ ದೊಡ್ಡಮ್ಮ" ಎಂದ.

"ಯಾಕಿಲ್ಲ ಶೀನು? ನೀನು ಮದುವೆ ಮಾಡಿಕೊಳ್ಳಲೇ ಬೇಕಪ್ಪ. ಊರೆಲ್ಲಾ ಹೇಳುತ್ತೆ, ನೀನು ಮದುವೆ ಮಾಡಿಕೊಳ್ಳಲೇ ಬೇಕು ಬೇಕು ಅಂತ............"

ಶೀನು ನಗುತ್ತ— "ಹಾಗೆ ಬೇಕಾದರೆ ನಾನು ಈಗ ಒಂದು ಕಾಗದ ಬರೆಸರೆ. ನನ್ನ ಧರ್ಮಪತ್ನಿ ಸುಂದರಿ ಇದ್ದೇ ಇದ್ದಾಳಲ್ಲ, ನಾಳೆಯೇ ಹೊರಟು ಬರುತ್ತಾಳೆ!"

"ಸರಿ ಸರಿ, ಅವಳು ಬಂದ ಹಾಗೇ, ಸಂಸಾರ ನಡೆದ ಹಾಗೇ! ಯಾಕೆ ಈ ಆಗದ ಮಾತೆಲ್ಲ ಶೀನು?" ಎಂದಳು ದೊಡ್ಡಮ್ಮ.

೩

ಪ್ರಕೃತ ಶೀನು 'ನಿರುದ್ಯೋಗಿ' ಎಂದೇ ಹೇಳಬೇಕು. ಆದರೆ ಅವನು ಜನ್ಮತಃ ಕವಿಯೂ ಸಾಹಿತಿಯೂ ಆದುದರಿಂದ 'ಸತತೋದ್ಯೋಗಿಯೂ' ಆಗಿದ್ದನು. 'ಕವಿ' ಎಂಬ ಪದಾರ್ಥವು ಕುಟುಂಬಭರಣ ಮಾಡತಕ್ಕ ಒಂದು 'ಉದ್ಯೋಗ'ವಲ್ಲವಷ್ಟೆ? ಅಂತಹದೊಂದು ಮುಖ್ಯ ಉದ್ಯೋಗಕ್ಕೆ ಬೇಕಾದ ವಿದ್ಯಾಧಿಕಾರದ 'ಸರ್ಟಿಫಿಕೆಟು'ಗಳೊಂದೂ ಅವನಿಗಿಲ್ಲ. ಬಾಲ್ಯದಲ್ಲಿಯೇ ಪಿತೃವಿಯೋಗವಾಗಿ, ಬಡತನದ ಕಾಟವು ಹೆಚ್ಚಿ, ಅಲ್ಪಸ್ವಲ್ಪ ವಿದ್ಯೆಗೆ ಶರಣಾಗತಿ ಹೊಡೆದು ಅಡುಗೆಯ ಭಟ್ಟನಾಗಿ ಹೊರಟು ಬಿಟ್ಟಿದ್ದ. ಒಂದು ಕೈಯಲ್ಲಿ ಸಟ್ಟುಗ, ಇನ್ನೊಂದು ಕೈಯಲ್ಲಿ ಲೇಖನಿ, ಹೀಗೆ ಸಾಗಿತ್ತು ಅವನ ಬಾಳು. ಅಲ್ಲಿ ವಿದ್ಯೆಯಲ್ಲಿಯೇ ಮನಸ್ಸಿಟ್ಟು ಸ್ವಾರ್ಜಿತವಾಗಿಯೇ ಸಾಧ್ಯವಾದಷ್ಟು ಕಲಿತಿದ್ದ; ಕಲಿಯುತ್ತಲೂ ಇದ್ದ. 'ವಿದ್ಯಾವಂತ' ಎಂಬುದಕ್ಕೆ ಅರಿಗುರುತಾದ ಆಂಗ್ಲವೂ, ಕನ್ನಡಕ್ಕೆ ಬೆನ್ನೆಲುಬಿನಂತಹ ಸಂಸ್ಕೃತವೂ ಅವನಿಗೆ ಸಾಕಷ್ಟು ಅವಗತವಾಗಿದ್ದುವು. ಎಲ್ಲವೂ ಸ್ವಂತವಾದ ಸತತಾಭ್ಯಾಸದ ಫಲ. ಅದೃಷ್ಟವಶದಿಂದ ಅವನ ಲೇಖನಿಯ ಕೀರ್ತಿ ಬಲವಾಯಿತು. ಅದರಿಂದ ಅಲ್ಪಸ್ವಲ್ಪ ದುಡ್ಡೂ ಬರಲಾರಂಭಿಸಿತ್ತು. ಇನ್ನು ಕೀಳು ಕೆಲಸವಾದ ಅಡುಗೆಯನ್ನು ಬಿಟ್ಟು ಬಿಡಬೇಕೆಂದು ಕೃಷ್ಣನು ಒತ್ತಾಯಪಡಿಸಿ ಅವನನ್ನು ಊರಿಗೆ ಕರೆದುಕೊಂಡು ಬಂದಿದ್ದನು. ಏಕಾಂಗಿಯಾದ ತನಗೆ ಬಂದಷ್ಟೇ ಸಾಕು, ಭಾಷಾದೇವಿಯ ಪೂಜೆಯಲ್ಲಿ ಸಿಕ್ಕಿದ ಪ್ರಸಾದವನ್ನು ಸ್ವೀಕರಿಸಿಕೊಂಡು ನೆಮ್ಮದಿಯಾಗಿರೋಣವೆಂದುಕೊಂಡು ಶೀನು ಊರಿನಲ್ಲಿಯೇ ತಳವೂರಿ ಬಿಟ್ಟಿದ್ದನು.

ಈಗ ಆ ಗ್ರಾಮದಲ್ಲಿ ಅವನ ಮೇಲ್ತನದಲ್ಲಿ "ಭಾರತೀ ಭಾಂಡಾರ" ಎಂಬೊಂದು ಪುಸ್ತಕ ಭಾಂಡಾರವು ತೆರೆದಾಗಿತ್ತು. ಊರ ಪ್ರಮುಖರೂ, ಶಾಲೆಯ ಮುಖ್ಯೋಪಾಧ್ಯಾಯರೂ ಆದ ಮಾಧವಶೆಟ್ಟರು ಅದರ

ಅಧ್ಯಕ್ಷರು. ಶೀನು ಮುಖ್ಯ ಕಾರ್ಯದರ್ಶಿ. ಅವನ ಚಟುವಟಿಕೆಗಳಿಂದಾಗಿ, ಆ ಗ್ರಾಮ-ಪರಗ್ರಾಮಗಳ ನಿವಾಸಿಗಳಿಗೆ ವಾಚನಾಭಿರುಚಿ ಅಭಿವೃದ್ಧಿಯಾಗುತ್ತಾ ಬರುತ್ತಿತ್ತು. ಸಾಹಿತ್ಯ ಪ್ರೇಮಿಗಳೂ, ರಸಿಕರೂ ಶೀನುವನ್ನು 'ನಮ್ಮ ಗ್ರಾಮದ ರತ್ನ'ವೆಂದು ಹೇಳಿಕೊಳ್ಳುತ್ತಿದ್ದರು.

ಮಂಗಳೂರಿನಿಂದ ಹೊರಡುವ "ಜನವದಿನೀ" ಎಂಬ ಪತ್ರಿಕೆಯ 'ಸಾಹಿತ್ಯ ವಿಭಾಗ'ಕ್ಕೆ ಶೀನು ಒಬ್ಬ ಖಾಯಂ ಲೇಖಕ. ಅದರಿಂದ ಅವನಿಗೆ ಕಿಂಚಿತ್ ಪ್ರತಿಫಲವೂ ಸಿಗುತ್ತಿತ್ತು. ಶೀನು ಒಬ್ಬ ಕಲೆಗಾರನೂ ಹೌದು. ಮದರಾಸಿನಿಂದ ಹೊರಡುವ 'ಇಂಡಿಯಾ' ಎಂಬ ಪತ್ರಿಕೆಯಲ್ಲಿ ಆಗಾಗ ಅವನ ರೇಖಾ ಚಿತ್ರಗಳು ಬರುತ್ತಿದ್ದುವು. ಮುಖ್ಯವಾಗಿ ಸಾಹಿತ್ಯಾಂಗದಲ್ಲಿಯೇ ಅವನ ಪ್ರಸಿದ್ಧಿ. ಇತ್ತೀಚೆಗೆ ಪ್ರಕಟವಾದ ಅವನ "ತ್ಯಾಗಿ" ಎಂಬ ಪುಸ್ತಕವು ಅವನಿಗೆ ೫೦೦ ರೂಪಾಯಿ ಆದಾಯವನ್ನು ಕೊಟ್ಟಿತ್ತು ಅಪರಿಮಿತವಾಗಿಯಾದರೂ ಬರುವ ಈ ಆದಾಯದ ಬಹ್ವಂಶವನ್ನು ಅವನು "ಭಾರತೀ ಭಾಂಡಾರ"ದ ಅಭಿವೃದ್ಧಿಗೇ ಉಪಯೋಗಿಸುತ್ತಿದ್ದನು.

ಆದರೆ ಎರಡನೇ ಮಹಾಯುದ್ಧವು ಶುರುವಾದುದೇ ಆದುದು. ಸಾಹಿತ್ಯದ ಪ್ರಗತಿಪಥದ ಮೇಲೆ ಎಡವುಗಲ್ಲೊಂದು ಬಿದ್ದಂತಾಗಿತ್ತು. ಬಡ ಕನ್ನಡಕ್ಕೆ ಹೊಸ ಚಿಗುರೇ ಏಳಲಾರದೆ ಹೋಗಿತ್ತು. ಅದು ತೀರಾ ಬಾಡಿ ಬಿದ್ದು ಹೋಗದಂತೆ ಶೀನುವಿನಂತಹ ಅಚ್ಚ ಸಾಹಿತಿಗಳು ಕಷ್ಟೈಶ್ವರದಿಂದ ಅದಕ್ಕೆ ನೀರೆರೆದು ಕಾಪಾಡುತ್ತಿದ್ದರು ಪುಸ್ತಕ ಪ್ರಕಾಶನವು ದುಃಸಾಧ್ಯವಾಗಿದ್ದರೂ, ಜನ್ಮತಃ ಸಾಹಿತಿಯಾದ ಶೀನು ಕೃತಿರಚನೆ ಮಾಡುತ್ತಲೇ ಇದ್ದನು

"ತ್ಯಾಗಿ" ಪ್ರಕಟವಾಗಿ ಅಮೋಘ ಕೀರ್ತಿ ಗಳಿಸಿದ ಮೇಲೆ, ಯುದ್ಧದ ಬೇಗೆಯಿಂದ, ಮತ್ತೆ ಅವನ ಕನ್ನಡ ಕಾದಂಬರಿಗಳ ಮುದ್ರಣವು ದುಃಸಾಧ್ಯವಾಗಿತ್ತು. ನಾಲ್ಕು ತಿಂಗಳ ಕೆಳಗೆ ಅವನೊಂದು ಉತ್ತಮವಾದ ಕಾದಂಬರಿ ಬರೆದು ಮುಗಿಸಿದ್ದ. "ಕಲೆಯ ಕಲ್ಯಾಣ" ಎಂದು ಅದರ ಹೆಸರು. ಅದು ಪ್ರಕಾಶಗೊಂಡು, ನಾಡೆಲ್ಲ ಆನಂದ ಪಡಬೇಕೆಂದು ಅವನಿಗೆ ಸ್ವಾಭಾವಿಕವಾದ ಆತುರವಿದ್ದೇ ಇತ್ತು ಈಗ ಸುಂದರಿಯ ಕಾಗದವು ಆ ಆತುರಕ್ಕೆ ಅನುಕೂಲವಾದ ಗಾಳಿಯಾಗಿ ಬೀಸಿತು

ಯುವಕನೂ ಪ್ರತಿಭಾಶಾಲಿಯೂ ಆಗಿರುವ ಶೀನು ತಕ್ಕ ಹೆಣ್ಣಿನ ಜತೆಯಿಲ್ಲದೆ ಏಕಾಂಗಿಯಾಗಿರುವುದನ್ನು ನೋಡಿ, ಸಾಹಿತ್ಯ ಪ್ರೇಮಿಗಳೂ, ಸುಹೃದಯರೂ ತುಂಬಾ ಅನುತಾಪ ಪಡುತ್ತಿದ್ದರು ಸಾಹಿತಿಯೊಬ್ಬನು ಸರ್ವಸಂಗ ಪರಿತ್ಯಾಗಿಯಾದ ಯೋಗಿಯಂತಿರುವುದೆಂದರೆ ಪರಿತಾಪವಲ್ಲವೆ? ಸಾಹಿತಿ ಸಂಸಾರಿಗನಾಗಿರಬೇಕು; ಸುಖ ದುಃಖಗಳನ್ನು ಅನುಭವಿಸಿ ಪರಿಪಕ್ವ ಮನಸ್ಕನಾಗಿರಬೇಕು. ಹೌದು. ಈ ತತ್ವವು ಶೀನುವಿಗೂ ಗೊತ್ತಿತ್ತು. ತಾನು ಆ ತತ್ವವನ್ನು ಬ್ರಹ್ಮಚಾರಿಯಾಗಿದ್ದೇ ಸಾಧಿಸಿಯೇನೆಂದು ಅವನ ದೃಢನಂಬಿಗೆ ಯಾರು ಕೇಳಿದರೂ ತಾನಿನ್ನು ವಿವಾಹಿತನಾಗಲಾರೆ ಎಂದೇ ಹೇಳುತ್ತಿದ್ದನು ಅವನು ಮಾಡುವ ವಿವಾಹ ಪ್ರಯತ್ನವೆಲ್ಲ ತಮ್ಮ ಕೃಷ್ಣನಿಗಾಗಿತ್ತು. ಆದರೆ ಕೃಷ್ಣನಿಗಿಂತ ಮೊದಲು ಅವರ ತಂಗಿ ಗೌರಿಗೆ ವಿವಾಹವಾಗಬೇಕಲ್ಲವೆ? ಅವಳೂ ವಿವಾಹೋಚಿತ ವಯಸ್ಕಳಾಗಿಯೂ ಇದ್ದಾಳೆ; ಏಕೋ ಅವಳ ಮದುವೆಯ ಯೋಚನೆ ಶೀನುವಿಗೆ ಈಗಿಲ್ಲ.

೪

ಯಾರೋ ಹೊಸಬರು ಮನೆಗೆ ಬರುತ್ತಿರುವರೆಂಬುದಕ್ಕೆ ಅರಿಗುರುತಾಗಿ ಜೊಳ್ಳು "ಒಳ್, ಒಳ್" ಎಂದು ಕೂರೆಯಿತು "ಭಾರತೀ ಭಾಂಡಾರ"ದೊಳಗೆ ಕುಳಿತು ಏನೋ ಓದುತ್ತಿದ್ದ ಶೀನು, ಹೊರಗೆ ಬಂದು ನೋಡಿದನು "ಓಹೋ! ರಾಮಾ ಜೋಯಿಸರು! ಬಹಳ ಅಪರೂಪ! ಬನ್ನಿ ಬನ್ನಿ!"

"ಏನಪ್ಪಾ ಶೀನು? ನಾಯಿ ಕಚ್ಚುತ್ತೆಯೆ?–" ಎಂದು ನಾಯಿಯ ಅಬ್ಬರಿಕೆಗೆ ತಯಂಗಿ ಅಲ್ಲೇ ನಿಂತರು ಜೋಯಿಸರು.

"ಇಲ್ಲ. ಬೊಗಳುವ ನಾಯಿ ಕಚ್ಚುತ್ತೆಯೆ? ಎಯ್ ಜೊಳ್ಳಾ! ಸುಮ್ಮನಿರೋ!" ಎಂದು ಶೀನು ನಾಯಿಯನ್ನು ಕರೆದನು. ಮಾನವ ಸಂಜ್ಞಾಗ್ರಾಹಿಯಾದ ಆ ಪ್ರಾಣಿ, ಕೂಡಲೇ ಸುಮ್ಮನಾಗಿ ಬಾಲವಾಡಿಸುತ್ತ ಅವನ ಬಳಿಗೆ ತಿರುಗಿತು. ಜೋಯಿಸರು ಮುಂದೆ ಬಂದರು

"ನೀವು ಬಹಳ ಅಪರೂಪವವರಾದ್ದರಿಂದ ಈ ನಾಯಿಗೆ ಗುರುತಿಲ್ಲ. ನಿಮ್ಮ ಮಗಳು ಮಲ್ಲಿಕೆಯ ಗುರುತು ಇದಕ್ಕೆ ಚೆನ್ನಾಗಿದೆ ಜೋಯಿಸರೆ"

"ಓಹೊ ! ಚಿಂತೆಯಿಲ್ಲ ನಾಯಿ! ಅವಳು ಆಗಾಗ ಇಲ್ಲಿಗೆ ಪುಸ್ತಕಕ್ಕಾಗಿ ಬರುತ್ತಾಳಲ್ಲವೆ? ಶೀನು! ನಿನ್ನ ಪುಸ್ತಕ ಓದುವುದೆಂದರೆ ನನ್ನ ಮಗಳಿಗೆ ತುಂಬ ಪ್ರೀತಿಯಪ್ಪ" ಜೋಯಿಸರು ಜಗುಲಿಯನ್ನೇರಿದರು.

ಶೀನು ಅವರನ್ನು ಚಾವಡಿಯಲ್ಲಿ ಕೂಡಿಸಿ "ದೊಡ್ಡಮ್ಮ! ಜೋಯಿಸರಿಗೆ ಕೊಂಚ ಬಾಯಾರಿಕೆ ತನ್ನಿ" ಎಂದು ಕರೆದು ಹೇಳಿದನು.

ನೆರೆಯಲ್ಲಿಯೇ ತೋಟದಲ್ಲಿ ಕಂಗೊಳಿಸುವ, ಪುಣ್ಯಾಶ್ರಮದಂತಹ ಹುಲ್ಲು ಛಾವಣಿಯ ಕೊಟ್ಟಿಗೆಯನ್ನು ನೋಡಿ ರಾಮಾ ಜೋಯಿಸರು —
"ಓಹೊ! ಇದೇ ನೀನು ಹೊಸತಾಗಿ ಕಟ್ಟಿಸಿದ ಭಾರತೀ ಭಾಂಡಾರವೊ?"

"ಹೌದು; ಬನ್ನಿ, ನೋಡಿ."

ಜೋಯಿಸರು ಎದ್ದು ಶೀನುವಿನ ಹಿಂದೆ ಅಲ್ಲಿಗೆ ಹೋದರು. ಅದು ಮನೆಯನ್ನು ಬಿಟ್ಟು, ಅದರ ಪಕ್ಕದಲ್ಲಿ ಇರುವ ಚಿಕ್ಕದೊಂದು ಮನೆ. ಎರಡೇ ಕೋಣೆಗಳು; ಒಳಗೆ ಚೆನ್ನಾಗಿ ಗಾಳಿ ಬೆಳಕು ಬೀಳುವಂತೆ ವಿಶಾಲವಾದ ಕಿಟಕಿಗಳು; ಎರಡು ಬೆಂಚಿಗಳು; ಎರಡು ಕುರ್ಚಿಗಳು; ಒಂದು ಮೇಜು; ಒಂದು 'ಪ್ರೈಂಪೀಸು' ಗೋಡೆಯಲ್ಲಿ ಸಕ್ರಮವಾಗಿ ಗಾಂಧಿ, ನೆಹ್ರೂ, ಟಾಗೋರ್ ಮುಂತಾದ ಮಹನೀಯರ ಭಾವಚಿತ್ರಗಳು; ಅಲ್ಲೊಂದು ಶೀನುವೇ ಚಿತ್ರಿಸಿದ ವೀಣಾಪಾಣಿ ವಾಣೀದೇವಿಯ ಚಿತ್ರವು ಬಹಳ ಸುಂದರವಾಗಿತ್ತು. ನಾಲ್ಕು ಅಲಮಾರಿಗಳಲ್ಲಿ ತುಂಬ ಕನ್ನಡ ಪುಸ್ತಕಗಳಿದ್ದುವು ಇನ್ನೊಂದು ಕೋಣೆಯೊಳಗೆ ಒಂದು ಅಲಮಾರಿ, ಒಂದು ಮೇಜು, ಒಂದು ಕುರ್ಚಿ ಇಟ್ಟಿದ್ದುವು ಗೋಡೆಯಲ್ಲಿ ಕೆಲವು ಮಾಸಪತ್ರಿಕೆಗಳು ಅಣಿಗೊಂಡಿದ್ದುವು ಅಲ್ಲಿಯ ಮೇಜಿನ ಮೇಲೆ ಶೀನುವಿನ ಬರೆಯುವ ಸಾಮಗ್ರಿಗಳಿದ್ದುವು ಅಲ್ಲಿ ಕುರ್ಚಿಯಲ್ಲಿ ಕುಳಿತರೆ ಇದಿರೇ ಕಿಟಕಿ; ಕಿಟಕಿಯ ಹೊರಗೆ ಮಲ್ಲಿಗೆಯ ಬಳ್ಳಿ ಸುತ್ತಿದ ಮಾವಿನ ಮರ, ಅದರಾಚೆಗೆ ಸೀತಾಫಲದ ಗಿಡ, ಪಾರಿಜಾತತರು, ತೆಂಗಿನ ಮರಗಳು, ತುಸು ದೂರ ಹಲಸು—ನೇರಳೆ ಮರಗಳು ಮೊದಲಾದ ಮಿತವಾದ ಫಲಪುಷ್ಪಗಳ ತೋಟದ ಹಿತದೃಶ್ಯವು ಮನೋಲ್ಲಾಸದಾಯಕವಾಗಿತ್ತು. ರಾಮಾ ಜೋಯಿಸರು ಇದನ್ನೆಲ್ಲ ನೋಡಿ ತಲೆಯೊಲಿಯುತ್ತ— "ಚಿಂತೆ

ಯಿಲ್ಲ ಶೀನು. ನಿನ್ನಂಥವನಿಗೆ ತಕ್ಕ ಸ್ಥಳವಿದು. ಅಲ್ಲಾ, ಹೆಂಗಸ ರಿಲ್ಲದ ಈ ಮನೆಯಲ್ಲಿ ಈ ಪಾಲಿಗೆ ಬಳ್ಳಿ, ಕಾಯಿಪಲ್ಯ ಮೊದಲಾದ ತೋಟ ಮಾಡಿದ್ದ್ಯಾರಪ್ಪ? ನೀನೇನು?''

''ನಾನೇ. ಸಹಾಯಕ್ಕೆ ದೊಡ್ಡಮ್ಮನೂ ಇದ್ದಾರಲ್ಲ?" ಎಂದನು ಶೀನು.

"ಶೀನು ಬರುತ್ತೀರಾ?'' ಎಂದು ದೊಡ್ಡಮ್ಮ ಕರೆದಳು.

ಜೋಯಿಸರೂ, ಶೀನನೂ ಮನೆಗೆ ಬಂದು ಜಾವಡಿಯಲ್ಲಿ ಕುಳಿತರು. ಜಾವಡಿಯಲ್ಲಿ ಎರಡು ಲೋಟಾ ಕಾಫಿ ಸಿದ್ಧವಾಗಿದ್ದುವು.

"ಕಾಫಿಗೀಫಿಯೆಲ್ಲಾ ಯಾಕಪ್ಪ ? ಎಲ್ಲಾ ಆಗಿಯೇ ನಾನು ಬಂದದ್ದು" ಎಂದು ವಾಡಿಕೆಯ ಉಪಚಾರದಿಂದ ಹೇಳುತ್ತಾ, ಕಾಫಿಯ ಲೋಟವನ್ನೆತ್ತಿಕೊಂಡರು ಜೋಯಿಸರು.

"ನಿಮಗಾಗಿ ಮಾಡಿದ್ದಲ್ಲಾ. ನಾನು ಈಗ ತಾನೇ ತೆಗೆದು ಕೊಳ್ಳುವ ಸಮಯ. ಪರಮಾನ್ನವಾದರೂ ಪರಿಜನರೊಂದಿಗೇ ಕುಡಿಯ ಬೇಕೆಂಬ ಹಾಗೆ ದೊಡ್ಡಮ್ಮ ನಿಮಗೂ ನೀರಿಸಿ ತಂದಿಟ್ಟರು'' ಎಂದು ಶೀನುವೂ ಎತ್ತಿಕೊಂಡನು.

ಜೋಯಿಸರು ಕುಡಿದು ಮುಗಿಸಿದಾಗ ಶೀನು--"ಓಹೋ! ನಿಮಗೆ ವೀಳ್ಯದೆಲೆ ಅಭ್ಯಾಸವೆಂದು ತೋರುತ್ತದೆ..........''

"ಅದಕ್ಕೇನು? ಅದು ಯಾವಾಗಲೂ ನನ್ನ ಸೊಂಟದಲ್ಲಿ ತಯಾ ರುಂಟಲ್ಲ?" ಎಂದು ಜೋಯಿಸರು ಸೊಂಟದಿಂದ ಒಂದು ಸಣ್ಣ ಚೀಲವ ನ್ನೆತ್ತಿ ಬಿಡಿಸಿ, ತಾಂಬೂಲದ ಸಂವರಣೆಗೆ ತೊಡಗಿ--- '' ಶೀನು, ನಾನೊಂದು ಮುಖ್ಯ ವಿಷಯ ಮಾತಾಡಲಿಕ್ಕಾಗಿ ಬಂದದ್ದು. ಹಿಂದೆ ನನ್ನಿಂದ ನಿನಗೊಂದು ದೊಡ್ಡ ಕೆಡುಕಾಗಿ ಹೋಯಿತು. ಅದರಿಂದಾಗಿ ನಿನ್ನನ್ನು ನೋಡಬೇಕು, ಮಾತಾಡಬೇಕು ಎಂದರೆ ನನಗೊಂದು ಶಂಕೆ, ಅಂಕೆ...........''

''ಅದೆಲ್ಲ ಆಯ್ತು, ಹೋಯ್ತು; ಇನ್ಯಾಕೆ ಸ್ವಾಮಿ ಆ ಮಾತು ? ಅದರಲ್ಲಿ ನಿಮ್ಮದಾದರೂ ಅಂತಹ ತಪ್ಪೇನಿದೆ ? ಎಲ್ಲ ತಪ್ಪು ನನ್ನದೇ ಬಿಡಿ! "

"ಆದರೂ ಕಾರಣಕರ್ತ ನಾನೆಂದೇ ಆಯಿತಲ್ಲ? ಏನೋ ಆ ಪಾಪದ ಕುರೂಪಿ ಹುಡುಗಿಗೆ ಒಂದು ಮದುವೆ ಮಾಡಿಸಿ ಪುಣ್ಯಕಟ್ಟಿ ಕೊಳ್ಳಬೇಕಂತ ಮಾಡಿದೆ ಅದು ನಿನಗೆ ಈ ಬಗೆಯ ಏಕಾಂಗಿತ್ವವನ್ನು ತಂದಿತು. ಕಡೆಗೆ ನಾನೇ ಅವಳನ್ನು ಮದರಾಸಿನ ಫಿಲಂ ಕಂಪನಿಗೆ ಸೇರಿಸಿದೆ. ಅವಳ ಮಟ್ಟಿಗೆ ಅವಳಲ್ಲಿ ಚೆನ್ನಾಗಿದ್ದಾಳೆ—ಹೋಗಲಿ. ಈಗ ನಿನ್ನನ್ನು ನೋಡುವಾಗ ನನಗೆ ತುಂಬಾ ಕಷ್ಟವಾಗುತ್ತದೆ ಶೀನು"

"ಹೋಗಲಿ ಬಿಡೀ ಅಂದೆನಲ್ಲ ನಾನೀಗ ಆ ಚಿಂತೆಯನ್ನೆ ಬೇರು ಸಹಿತ ಕಿತ್ತು ಹಾಕಿರುತ್ತೇನೆ."

"ಹಾಗಲ್ಲಪ್ಪ. ನಿನಗಿನ್ನೂ ವಯಸ್ಸು ಮೀರಿಲ್ಲ. ಈಗ ನಿನಗೆ ಇಪ್ಪತ್ನಾಲ್ಕು ತಾನೆ?"

"ನಿಮ್ಮ ಲೆಕ್ಕ ತಪ್ಪಾದೀತೆ?"

"ಈ ವಯಸ್ಸಿನಲ್ಲಿ ನೀನು ಪುನರ್ವಿವಾಹ ಮಾಡಿಕೊಳ್ಳದೆ ಒಬ್ಬಂಟಿಗನಾಗಿರಲೇಬಾರದು. ನಿನ್ನ ತಾಯಿ ಜಲಜಮ್ಮ ಇರುತ್ತಿದ್ದರೆ ಎಂದಿಗೂ ನಿನ್ನನ್ನು ಹೀಗೆ ಬಿಡುತ್ತಿದ್ದಿಲ್ಲ. ಅದೂ ನಿನ್ನಂಥ ಕವಿ-ಸಾಹಿತಿಗಳಿಗೆಲ್ಲ ತಕ್ಕ ಸಹಚಾರಿಣಿ ಅತೀ ಅಗತ್ಯ."

"ಹಾಗೇನಿಲ್ಲ ಜೋಯಿಸರೇ, ಕವಿ-ಸಾಹಿತಿಗಳು ಕಲ್ಪನಾವಿಹಾರಿಗಳು ಅವರು ಕಲ್ಪನೆಯಲ್ಲಿ ಎಂತೆಂತಹುದನ್ನೋ ಸೃಷ್ಟಿಸಿಕೊಂಡು ಅದರೊಂದಿಗೇ ತನ್ಮಯರಾಗಿ ಬಿಡಬಲ್ಲಂತಹರು . ........"

"ಹೌದು ನಿಜ ಅದಕ್ಕೆ ಸುಲಭವಾಗುವಂತೆ ತಕ್ಕ ಸಂಗಾತಿನಿಯೂ ಬೇಕು, ದೇವರಪೂಜೆಗೆ ಮೂರ್ತಿಯನ್ನಿಟ್ಟುಕೊಳ್ಳುವ ಹಾಗೆ"

"ನಿಮ್ಮ ಸಾಮತಿ ಸರಿ. ನನಗೂ ಅಂತಹ ಸಹಚಾರಿಣಿ ಒಬ್ಬಳೇ ಒಬ್ಬಳಿದ್ದಳು – ಕನಸಿನಲ್ಲಿದ್ದಂತೆ. ಎಚ್ಚರದಲ್ಲಿ ಅವಳೀಗ ಪರಸ್ತ್ರೀ!"

"ಸರಿ. ತೆಗೆದಿಯಾ ನಿನ್ನ ಕಾಲ್ಪನಿಕ ವ್ಯವಹಾರವನ್ನು? ಈಗ ಸಹಜ ವ್ಯವಹಾರವನ್ನು ಮಾತಾಡೋಣ. ನಾನು ನಿನಗೆ ತಕ್ಕ ವಧುವೊಬ್ಬಳನ್ನು ನಿರ್ಣಯಿಸಿದ್ದೇನೆ. ನೀನೂ ಚೆನ್ನಾಗಿ ಬಲ್ಲೆ ಆ ಹುಡುಗಿಯನ್ನು—" ಎಂದು ಜೋಯಿಸರು ಶೀನುವಿನ ಮುಖವನ್ನೊಮ್ಮೆ ಅರ್ಥಪೂರ್ಣವಾಗಿ ನೋಡಿ, ಬಾಯಿಯಲ್ಲಿ ತುಂಬಿದ ಜಿಗಟೆ ತುಂಬುಲವನ್ನು ಉಗುಳಲಿಕ್ಕಾಗಿ, ಅಂಗಳದ ಕೊನೆಯ ತೆಂಗಿನ ಕಟ್ಟೆಯ ಕಡೆಗೆ ನಡೆದರು.

ಆಗಲೇ ಕೃಷ್ಣನು ಬಂಡ ಸಾಲೆಯಿಂದ ಸ್ಕ್ಯಾಕಲ್ಲಿನಲ್ಲಿ ರೊಂಯ್ಯನೆ ಬಂದಿಳಿದನು ಸ್ಕ್ಯಾಕಲ್ಲಿನ ಹಿಂದಿನ ಕ್ಯಾರಿಯರಿನಲ್ಲಿ ಒಂದು ದೊಡ್ಡ ಗೋಣೀ ಸಂಚಿಯ ಮೂಟೆಯನ್ನೂ ಕಟ್ಟಿಕೊಂಡು ಬಂದಿದ್ದನು. ಆ ಭಾರ ಹೊತ್ತ ಸ್ಕ್ಯಾಕಲ್ಲನ್ನು ಅವನು ಪ್ರಯಾಸದಿಂದ ತಳ್ಳಿಕೊಂಡು ಬಂದು ಜಗುಲಿಯ ಬದಿಯಲ್ಲಿ ನಿಲ್ಲಿಸಿ ಆ ಮೂಟೆಯನ್ನು ಬಿಚ್ಚಿ ಎತ್ತಿಕೊಂಡು, ಅಂತರ್ಮಾಡಿನ ಬಾಗಿಲಿನಿಂದ ಮನೆಯೊಳಗೆ ಹೊಕ್ಕನು. ಹಾಗು ದೊಡ್ಡಮ್ಮನೊಡನೆ ಚಿಮಣಿ ದೀಪವನ್ನು ಹಚ್ಚಿ ತರಲಿಕ್ಕೆ ಹೇಳಿ ಉಪ್ಪರಿಗೆಯ ಮೇಲಕ್ಕೆ ಹೋದನು. ಅದನ್ನೆಲ್ಲ ಗಮನಿಸುತ್ತ ಜೋಯಿಸರು ಮೆಲ್ಲನೆ ನಡೆತಂದು, ಮತ್ತೆ ಚಾವಡಿಯಲ್ಲಿ ಕುಳಿತು, ಮಾತನ್ನು ಮುಂದು ವರಿಸಿದರು:— "ಅದೇ ಶೀನು, ನನ್ನ ಮಗಳು ಮಲ್ಲಿಕಾ ನಿನಗೆ ಪರಿಚಯದ ಹುಡುಗಿಯೇ ಅಲ್ಲವೆ? ನೀನು ಮನಸ್ಸು ಮಾಡಿದರೆ ಅವಳನ್ನು ನಿನಗೇ ಧಾರೆಯೆರೆದು ಬಿಡುತ್ತೇನೆ." ಎಂದು ಸ್ಪಷ್ಟವಾಗಿ ನುಡಿದು ಬಿಟ್ಟರು

ಶೀನುವಿನ ಮುಖದಲ್ಲಿ ಆಶ್ಚರ್ಯವು ತೇಲಿತು:—"ಮಲ್ಲಿಕೆಯನ್ನೆ? ಮಲ್ಲಿಕಾ ನಿಮ್ಮ ಆ ಭಾವನೆಂಟರು ಜಮೀನುದಾರ ವಾಸುದೇವರಾಯರ ಮಗ ಗೋಪಾಲರಾಯರಿಗೆ ಮೀಸಲಿಟ್ಟ ವಧು ಅಂತ ವರ್ತಮಾನ ವಿತ್ತಲ್ಲ?"

"ಅದು ಹಳೆಯ ವರ್ತಮಾನ ಬಿಡಪ್ಪ. ನನ್ನ ತಂಗಿಯ ಮಗ ಗೋಪಾಲನು ನನ್ನ ಮಗಳ ವಾರಸು ಹಕ್ಕುದಾರನಲ್ಲವೆ? ಅವನಿಗೇ ಕೊಡುವುದಂತ ನನಗೆಲ್ಲಾ ಇಷ್ಟವಿದ್ದದ್ದೇನೋ ನಿಜ. ಆದರೆ ಆ ಗೋಪಾಲ ದೊಡ್ಡ ದೇಶಭಕ್ತ ಅಂದುಕೊಂಡು ಊರೂರು ತಿರುಗುತ್ತಾನೆ. ತಂದೆ-ತಾಯಿಗಳ ಮಾತು ಕೇಳದೆ ಎರಡು ಬಾರಿ ಜೈಲಿಗೂ ಹೋಗಿ ಬಂದ. ಈಗ ದೇಶ ಸಂಚಾರಕ್ಕೆ ಬೇರೆ ಹೊರಟಿದ್ದಾನೆ ಎಲ್ಲಿದ್ದಾನೋ ಪತ್ತೆ ಕೂಡಾ ಇಲ್ಲ. ಸ್ವರಾಜ್ಯ ಸಿಕ್ಕದೆ ಮದುವೆ ಮಾಡಿಕೊಳ್ಳುವುದಿಲ್ಲ ಅಂತ ಪ್ರತಿಜ್ಞೆ ಬೇರೆ ಮಾಡಿಕೊಂಡಿದ್ದಾನಂತೆ! ಇದೆಲ್ಲ ಆಗೋದಾ ಹೋಗೋದಾ? ಅದು ಬಿಡು, ನಾನು ಹೇಳಿದ್ದಕ್ಕೆ ಉತ್ತರ ಕೊಡು."

"ನಕಾರವೇ ನನ್ನ ಖಂಡಿತ ಉತ್ತರ. ನೀವು ನಿಜವಾಗಿ ಮದುವೆಯ ವಿಷಯ ಮಾತಾಡಲಿಕ್ಕೆ ಬಂದಿದ್ದರೆ ನನ್ನ ತಮ್ಮ ಕೃಷ್ಣನ ಮದುವೆ ವಿಚಾರ ಬೇಕಾದರೆ ಮಾತಾಡಿ."

"ತಮ್ಮನ ಮದುವೆಯ ವಿಚಾರಕ್ಕೆ ಈಗೇನು ಅವಸರ ನಿನ್ನ ತಂಗಿಯನ್ನು ಬಿಟ್ಟು? ಅದೆಲ್ಲ ಮಾಡುವ. ಈಗ ನಿನ್ನದು ನಕಾರವೇಕೆ ಶೀನು? ನನ್ನ ಮಗಳು ನಿನಗೆ ತಕ್ಕವಳಲ್ಲವೆಂದು ಭಾವಿಸುವಿಯಾ? ಅಥವಾ ವಧುವಿಗೆ ದ್ವಿತೀಯ ಸಂಬಂಧಿಯಾದ ನಿನ್ನ ಮೇಲೆ ಇಷ್ಟವಿಲ್ಲವೆಂದು ಸಂದೇಹಿಸುವಿಯಾ?"

"ಅಂದರೆ?............ವಧುವಿಗೆ ಇಷ್ಟವಿದೆಯೆಂದು ಅವಳೇ ಬಾಯಿ ತೆರೆದು ಹೇಳಿದಳೇ ಜೋಯಿಸರೆ?"

"ಬಾಯಿಬಿಟ್ಟು ಹೇಳುವರೇನೋ ಹೆಣ್ಣುಗಳು? ಅದನ್ನು ತಿಳಿಯಲು ನನಗೆ ಗೊತ್ತಿಲ್ಲವೆ? ನಾನು ಅದೆಲ್ಲಾ ಸ್ಪಷ್ಟವಾಗಿ ತಿಳಿದುಕೊಂಡೇ ಬಂದಿದ್ದೇನೆ ತಕ್ಕಮಟ್ಟಿಗೆ ವಿದ್ಯೆಯನ್ನೂ ಕಲಿಸಿದ್ದೇನೆ ಸಂದೇಹವಿದ್ದರೆ ನೀನೇ ಅವಳೊಡನೆ ಕೇಳಿ ತಿಳಿದುಕೊ. ಮತ್ತೆಯೆ ನಿಶ್ಚಯ ಮಾಡುವ ಬೇಕಾದರೆ"

"ಅದೇನೂ ಬೇಡ ನೀವು ಹೇಳುವುದೇ ಸಾಕು ಹಾಗೆ ನಿಮಗೂ ಅವಳಿಗೂ ಇಷ್ಟವಿದ್ದರೆ, ನನಗಿಂತ ಚಿಕ್ಕವನೂ ಸುಂದರನೂ ಆದ ವರನೇ ಇದ್ದಾನಲ್ಲ ಇಲ್ಲಿ? ಅದು ನಿಮಗೆ ಇನ್ನೂ ಸಂತೋಷದಾಯಕವಾದೀತೆಂದು ನಂಬುತ್ತೇನೆ."

"ಆದರೆ ನಿನ್ನನು ಖಂಡಿತವಾದ ಉತ್ತರವೋ ಏನು?"

"ಖಂಡಿತವೇ, ಸಂದೇಹವೇ ಇಲ್ಲ. ಯೋಚನೆಯ ಆಳದಿಂದ ಹೊರಟು ಬಂದ ಮಾತು. ನೀವು ಮನಸ್ಸು ಕೊಟ್ಟರೆ ಕೃಷ್ಣನೊಂದಿಗೇ ನಿಮ್ಮ ಸಂಬಂಧ ಬೆಳಿಸೋಣ."

೫

ಈ ಖಂಡಿತ ಮಾತನ್ನು ಕೇಳಿ ರಾಮಾ ಜೋಯಿಸರಿಗೆ ಮತ್ತೇನೂ ಹೇಳಲೂ ತೋರಲಿಲ್ಲ ಶೀನುವಿಗೆ ಪುನರ್ವಿವಾಹ ಮಾಡಿಕೊಳ್ಳುವ ಆಲೋಚನೆ ಇಲ್ಲವೆಂದು ಅವರು ಕೇಳಿದ್ದರು. ಅವರ ಒಬ್ಬಳೇ ಹೆಣ್ಣು ಮಗಳು ಮಲ್ಲಿಕಾ ತುಂಬ ಚೆಲುವೆ. ಈಗಿನ ಕಾಲಕ್ಕೆ ತಕ್ಕಂತೆ S. S. L. C. ವರೆಗೆ ಕಲಿಸಿದ್ದರು. ಈಗ ಅವಳ ವಯಸ್ಸು ಹದಿನೇಳು.

ಅವಳನ್ನು ಅವರ ತಂಗಿಯ ಮಗ ಜಮೀನುದಾರ ಗೋಪಾಲರಾಯ ನಿಗೇ ಕೊಡುವುದೆಂದು ಮೊದಲಿನಿಂದಲೂ ಪ್ರಸ್ತಾಪವಿತ್ತು. ಅವನು ಕಟ್ಟುಚ್ಚ ಸ್ವದೇಶಾಭಿಮಾನಿ. ಹಿರಿಯರ ಮಾತು ಮೀರಿ ದೇಶಸೇವಕನಾಗಿ ಅಲೆಯುತ್ತಿದ್ದ. ಅವನ ಅಪಾರ ಸೊತ್ತನ್ನು ನೋಡಿ ಮಗಳನ್ನು ಕೊಡ ಬೇಕೆಂದಿದ್ದರೂ, ಅವನು ವಿವಾಹದ ಗೊಡವೆಯನ್ನೆ ಬಿಟ್ಟಂತಿರುವು ದನ್ನೂ, ಅವನ ಸ್ವೇಚ್ಛಾಚರಿತ್ರೆಯನ್ನೂ ನೋಡಿದರೆ, ಅದು ಆಗುವಂತಿ ರಲಿಲ್ಲ. ಹಾಗೆಯೇ ಯೋಚನೆ ಮಾಡುತ್ತಿದ್ದಾಗ, ಜೋಯಿಸರಿಗೆ ಏನೋ ಫಕ್ಕನೆ ಶೀನುವಿನ ಸ್ಮರಣೆ ಬಂತು ಇತ್ತೀಚೆಗೆ ಅವನ ವಿಷಯ ದಲ್ಲಿ ಅವರಿಗೆ ಕೊಂಚ ಪಶ್ಚಾತ್ತಾಪವೂ ಇತ್ತು. ಸಾಹಿತ್ಯ ಪ್ರಪಂಚದಲ್ಲಿ ಅವನ ಹೆಸರು ಬೆಳಗುತ್ತ ಬರುವುದನ್ನೂ ಕಾಣುತ್ತಿದ್ದರು. ಅವನೊಂದಿಗೆ ತನ್ನ ಮಗಳ ಮದುವೆಯಾದರೆ ಚೆನ್ನಾಗಿದ್ದೀತೆಂದು ಭಾವಿಸಿದರು. ಅದಕ್ಕೆ ಪುಷ್ಟಿಕರವಾಗಿ ಶೀನುವಿನ ಹೆಸರೆತ್ತಿದರೆ ಮಲ್ಲಿಕೆಯ ಮುಖವು ಅರಳುತ್ತಿದ್ದಿತು ಶೀನುವನ್ನು ಹೊಗಳುವುದೂ, ಅವನು ಬರೆದ ಪುಸ್ತಕ ಗಳನ್ನು ಓದುವುದೂ ಎಂದರೆ ಮಲ್ಲಿಕೆಗೆ ಊಟಬೇಡ ನಿದ್ದೆ ಬೇಡ. ಅಷ್ಟು ಕುತೂಹಲ! ಶೀನುವಿನ ತಂಗಿ ಗೌರಿಯೂ ಅವಳೂ ಒಂದೇ ಶಾಲೆಯ ಸಹಪಾಠಿಗಳು. ಈಗ ಗೌರಿ ಮಂಗಳೂರಿನಲ್ಲಿ ಕಲಿಯುತ್ತಿದ್ದರೂ, ಗೌರಿ ಯೊಂದಿಗೆ ಪಳಗಿದುದರ ಪರಿಣಾಮವಾಗಿ ಮಲ್ಲಿಕೆ ಆಗಾಗ ಶೀನುವಿನ ಮನೆಗೆ ಬರುತ್ತಿದ್ದಳು. ದೊಡ್ಡಮ್ಮನೊಡನೆ ಬಾಯಿತುಂಬ ಮಾತಾಡು ತ್ತಿದ್ದಳು. ಆಗ ಶೀನುವೂ ಅಲ್ಲಿಯೇ ಇರುವನು. ಅವನೊಂದಿಗೆ ಅವಳು ಆ ಪುಸ್ತಕ ಬೇಕು, ಈ ಪುಸ್ತಕ ಬೇಕು ಎಂದು ಕೇಳುವಳು. ಹೀಗೆಯೇ ಸಲಿಗೆಯೂ ಬಳೆದಿತ್ತು.

ಮಲ್ಲಿಕೆ ತುಂಬ ಚುರುಕು ಹುಡುಗಿ. ಹೆಸರಿಗೆ ತಕ್ಕಂತೆ ಅರಳು ಮಲ್ಲಿಗೆಯಂತಹಳೇ. ಅವರಿವರನ್ನು ಕಂಡರೆ ಲಜ್ಜಾಭಾರದಿಂದ ಬಾಗಿ ತೂಗಿ ಮೂಲೆ ಸೇರುವವಳಲ್ಲ ಅವಳು. ಬೇಗನೆ ಪರಿಚಯ ಮಾಡಿ ಕೊಂಡು ಬಾಯಿತುಂಬ ಮಾತಾಡುವವಳು. ಅವಳ ಮಾತಾದರೂ ಗಿಳಿಯ ಕೀಕೀಕಾರದಂತೆ ಕಿವಿಗಿಂಪು. ಅವಳ ನಿಷ್ಕಳಂಕವಾದ ಸರಳ ಭಾವದ ನಡೆನುಡಿಗಳು ಶೀನುವಿಗೆಷ್ಟೋತುಂಬ ಮೆಚ್ಚಿಗೆಯಾಗಿದ್ದುವು. ಅವ ಳೊಡನೆ ಸ್ವಲ್ಪಹೊತ್ತು ಮಾತಾಡಿದರೆ ಅವನೂ ಹನವ್ರೋತ್ಸಾಹದಿಂದ ಕಳೆ

ಗೊಳ್ಳುತ್ತಿದ್ದನು. ಅವನು ಅವಳನ್ನು "ಏನಮ್ಮ ಜವಿಾನ್ದಾರ್ರ ಸೊಸೆ!" ಎಂದು ಆಗಾಗ ಗೇಲಿಕೆಯಾಗಿ ಸಂಬೋಧಿಸುತ್ತಿದ್ದ. ಅವಳು "ಇಲ್ಲ! ಇಲ್ಲ! ನಾನು ಯಾರ ಸೊಸೆಯೂ ಆಗಲಾರೆ." ಎನ್ನುತ್ತಿದ್ದಳು.

ರಾಮಾ ಜೋಯಿಸರು ಹೀಗೆ ಅಕಸ್ಮಾತ್ ಕೇಳಿಯಾರೆಂದು ಶೀನು ಕನಸಿನಲ್ಲಿಯೂ ನೆನೆದಿರಲಿಕ್ಕಿಲ್ಲ. ಅವರು ಹಾಗೆ ಕೇಳುತ್ತಲೇ ಆ ಸುಗುಣ ಪರಿಮಳೆಯಾದ ಮಲ್ಲಿಕೆಯನ್ನು ತನ್ನ ಮನೆಯೊಳಗೇ ಹೊಗಿಸಿ ಬಿಡಬೇಕೆಂದು ಅವನಿಗೊಂದು ಶ್ರದ್ಧೆಯುಂಟಾಗಿ ಬಿಟ್ಟಿತು. ತನಗಲ್ಲ, ತಮ್ಮನಿಗೆ. ಮಲ್ಲಿಕೆಯನ್ನು ಅವನು ತಂಗಿಯಂತೆಯೇ ಕಾಣು ತ್ತಿದ್ದನು. ಇದು ಅವನ ಅಚಲಭಾವ. ರಾಮಾ ಜೋಯಿಸರು ಒಪ್ಪು ವರೆ? ಯಾಕೆ ಒಪ್ಪರು?

ಕೃಷ್ಣನಿಗೆ ಇಪ್ಪತ್ತು ವರ್ಷ ವಯಸ್ಸು. ಧಷ್ಟಪುಷ್ಟನಾಗಿ ಯೌವ ನದ ಕಳೆಯಿಂದೊಪ್ಪುವ ಗೌರಾಂಗಿ. ಬಂಡ ಸಾಲೆಯಲ್ಲಿ ಗುಮಾಸ್ತ ನಾಗಿರುವುದರಿಂದ ವ್ಯಾಪಾರ ಮೊದಲಾದ ಲೌಕಿಕ ವ್ಯವಹಾರಗಳಲ್ಲಿ ಗಟ್ಟಿಗ. ಈ ಯುದ್ಧಕಾಲದಲ್ಲಿ ವ್ಯಾಪಾರದಂತಹ ಅಪಾರ ಧನಾರ್ಜ ನೆಯ ಹಾದಿ ಬೇರಿನ್ನಾವುದಿದೆ? ಮುಂದೆ ಸಾಕಷ್ಟು ಶ್ರೀಮಂತನಾಗ ಬಲ್ಲಷ್ಟು ಅನುಕೂಲ ವಾತಾವರಣದಲ್ಲಿಯೇ ಕೃಷ್ಣನು ಇದ್ದಾನೆ. ಆದರೆ ಕೊಂಚ ಮುಂಗೋಪಿ. ಅವನು ಮಾಡುವ ಕೆಲಸದಲ್ಲಿ "ಹಾಗಲ್ಲ ಹೀಗೆ" ಎಂದಾರಾದರೂ ಹೇಳಿದರೆ ಅವನಿಗೆ ಭಡಕ್ಕನೆ ಕೋಪ ಬರುತ್ತದೆ. ಇದು ಒಳಗಿನ ವಿಷಯ.

ರಾಮಾ ಜೋಯಿಸರು ಒಡನೆಯೇ ಖಂಡಿತವನ್ನು ಹೇಳದೆ— "ನಾನು ಕೃಷ್ಣನ ವಿಷಯವನ್ನು ಯೋಚಿಸಿಲ್ಲ ಶೀನು. ನಿನ್ನ ಹಾಗು ನಿನ್ನ ತಂಗಿ ಗೌರಿಯ ವಿವಾಹವಾಗದೆ ಕೃಷ್ಣನ ಮದುವೆಯ ಪ್ರಸ್ತಾಪವು ಬರಲಿಕ್ಕಿಲ್ಲವೆಂದು ಮಾಡಿದ್ದೆ" ಎಂದರು.

. "ನನ್ನದಂತೂ ಹೇಳಿದೆನಲ್ಲ? ಇನ್ನು ಗೌರಿ. ಅವಳಿಗೂ, ಈಗ ವಿವಾಹ ಮಾಡುವ ಉದ್ದೇಶವಿಲ್ಲ. ಅವಳು ಕಲಿಯಬೇಕೆಂಬ ಒಂದೇ ಕುತೂಹಲದಲ್ಲಿದ್ದಾಳೆ. ಆದ್ದರಿಂದ ಈಗ ಕೃಷ್ಣನ ಮದುವೆಯೇ ಮುಖ್ಯ ವಾಗಿದೆ."

"ಓಹೋ!........ಕೃಷ್ಣನನ್ನು ಕೇಳಿ ನೋಡಿದ್ದೀಯಾ?"

''ಇಲ್ಲ ಇನ್ನು ಮೇಲೆ ಕೇಳಬೇಕಷ್ಟೆ. ನಿಮ್ಮ ಒಪ್ಪಿಗೆಯಾದರೆ ಅವನನ್ನು ಕೇಳಿ ನಾನು ಒಪ್ಪಿಸುತ್ತೇನೆ ''

''ನನ್ನಿಂದೇನೂ ಅಭ್ಯಂತರವಿಲ್ಲ ನೀನು ಇಷ್ಟು ಖಂಡಿತವಾಗಿ ರುವುದಾದರೆ ಮಾಡುವುದೇನು? ಕೃಷ್ಣನಿಗೇ ನೋಡೋಣ.''

ಆಗ ಕೃಷ್ಣನು ಉಪ್ಪರಿಗೆಯ 'ಗುಟ್ಟಿನ' ಕೆಲಸವನ್ನು ಮುಗಿಸಿ ಕೆಳಗೆ ಬರುತ್ತಿದ್ದನು. ಕೆಳಗಿನ ಮಾತುಕತೆಗಳು ಅವನ ಕಿವಿಗೆ ಬಿದ್ದಿ ರಲೇಬೇಕು.

ಅವನು ಚಾವಡಿಗೆ ಬರುತ್ತಲೆ ಜೋಯಿಸರು "ಕೇಳಿದಿಯಾ ಕೃಷ್ಣ, ನಿನ್ನಣ್ಣನು ಹೇಳಿದ್ದನ್ನು?" ಎಂದರು.

"ಏನದು –ನಾನಷ್ಟು ಗಮನಕೊಟ್ಟು ಕೇಳಲಿಲ್ಲ. ಯಾಕೆ, ನಾನು ಕೇಳತಕ್ಕದ್ದೇನಾದರೂ ಇತ್ತೆ?" ಎಂದು ಕೇಳಿದನು ಕೃಷ್ಣ

''ಮತ್ತಿಲ್ಲದೆ? ಕಳ್ಳ ನೀನು! ಉಪ್ಪರಿಗೆಯಲ್ಲಿ ಏನೋ ಸದ್ದಿಲ್ಲದೆ ಅಡಗಿಸಿಡುತ್ತಾ ಇದ್ದಿಯಲ್ಲ?" ಎಂದು ಜೋಯಿಸರು ತಮ್ಮ ಕೆಂಬಾಯಿ ತೆರೆದು ನಕ್ಕರು.

''ಹೌದು ಶೆಟ್ಟರ ಕೈಕೆಳಗೆ ಕೆಲಸ ಮಾಡುವಾಗ ಅವರ ಒಳ ಬೇರದಲ್ಲಿ ನಾನೂ ಸ್ವಲ್ಪ ಭಾಗಿಯಾಗಲೇ ಬೇಕಾಗುತ್ತದಷ್ಟೆ ? ನಾಳೆ ಬಂಡ ಸಾಲೆಗೆ ಮುಣೇಗಾರ್ರು ಚೆಕ್ಕಿಂಗಿಗೆ ಬರುತ್ತಾರಂತ ಸಂಶಯ ಉಂಟಂತೆ. ಅದಕ್ಕೆ ಸ್ವಲ್ಪ ಹೀಗೆ ಮಾಡಬೇಕಾಯಿತು.''—ಕೃಷ್ಣನೆಂದ.

''ಹೌದು ಹೌದು ಲೆಕ್ಕಕ್ಕಿಂತ ಹೆಚ್ಚು ವಸ್ತು ಅಂಗಡಿಯಲ್ಲಿ ದ್ದರೆ ತೀರಿಹೋಯಿತು. ಒಟ್ಟಾರೆ ಈ ಕೆಟ್ಟ ಯುದ್ಧದಿಂದ ಹುಟ್ಟಿದ ಕೇಡುಗಳಯ್ಯ ಇವೆಲ್ಲ. ರೇಶನ್ನು, ಕಂಟ್ರೋಲು ಬಂದು, ಯಾವ ಅಂಗಡಿಯಲ್ಲಿ ಏನು ಕೇಳಿದರೂ ಇಲ್ಲ ಇಲ್ಲ! ಅಕ್ಕಿ ಇಲ್ಲ. ಬೇಳೆಯಿಲ್ಲ, ಕಾಳು ಇಲ್ಲ, ಸಕ್ಕರೆ ಇಲ್ಲ, ಬಟ್ಟೆಯೂ ಇಲ್ಲ ಒಳ್ಳೇ ಇಲ್ಲಾ ಪಲ್ಲವಿ ಬಂತಯ್ಯ!'' ಎಂದು ಜೋಯಿಸರು ಕಾಲಪ್ರವಾಹದ ಹಾಡನ್ನು ಹಾಡ ಲಾರಂಭಿಸಿದರು.

ಕೃಷ್ಣನು:—"ಯಾಕಿಲ್ಲ ಜೋಯಿಸರೇ, ಕೇಳುವ ರೀತಿಯಲ್ಲಿ ಕೇಳಿ ದರೆ ಸಿಕ್ಕುವ ರೀತಿಯಲ್ಲಿ ಸಿಕ್ಕುತ್ತದೆ! ನಿಮಗೆ ಯಾವ ಸಾಮಾನು ಎಷ್ಟು ಬೇಕು ಹೇಳಿ, ನಾನು ಸಿಕ್ಕಿಸುತ್ತೇನೆ." ಎಂದು ಸವಾಲು ಬಿಟ್ಟನು.

ರಾಮಾ ಜೋಯಿಸರಿಗೆ ತಟ್ಟನೆ ಏನೋ ಜ್ಞಾನ ಬೆಳದಂತೆ,—"ಹಾಗಾದರೆ ಕೃಷ್ಣ ! ಮಂಗಳೂರಿನಲ್ಲಿ ಅಕ್ಕಿ ಮುಡಿಗೆ ಮೂವತ್ತಂತೆ ! ಇಲ್ಲಿಯೂ ಮುಂದೆ ಹಾಗಾದೀತಂತ ದಿಗಿಲಾಗುತ್ತದೆ. ಒಂದೆರಡು ಪೊಟ್ಟುಗದ್ದೆ ಇದ್ದವರಿಗೆ ಆಸ್ತಿವಂತರು ಅಂತ ಹೆಸರಾಗಿ, ಅವರಿಗೆ ರೇಶನ್ ಕಾರ್ಡೂ ಇಲ್ಲ; ಬೆಳೆಯೂ ಇಲ್ಲ. ಮನೇಲಿರುವವರನ್ನು ಎಣಿಕೆ ಹಾಕಿ, ಬರುವ ಅರೆಬೆಳೆ ಪೂರಾ ರಿಕ್ವಿಜಿಶನ್ ಮಾಡಿದರೆ ನಾವೆಲ್ಲಾ ಏನಪ್ಪಾ ಉಣ್ಣುವುದು? ಅಗ್ಗದಲ್ಲಿರುವಾಗಲೇ ಸ್ವಲ್ಪ ಅಕ್ಕಿ ಮುಡಿ ಹೆಚ್ಚು ತೆಗೆದು ಹಾಕಲಿಕ್ಕೂ ಭಯ................"

ಕೃಷ್ಣನು ತಡೆದು ನುಡಿದ:— "ನಿಮಗೇನು ಸ್ವಾಮಿ ? ನಿಮ್ಮ ಭಾವನೆಂಟ ಜಮೀನುದಾರರು ನಿಮ್ಮನ್ನು ಬಿಟ್ಟು ಹಾಕಿಯಾರೆ?"

ಜೋಯಿಸರು—"ಅಯ್ಯೋ ಬಿಡಪ್ಪ! ಅವರ ದೊಡ್ಡಸ್ತಿಕೆ ಅವರಿಗಾಯಿತು. ಮೊನ್ನೆ ಒಂದು ಮುಡಿ ಅಕ್ಕಿ ಕೇಳಿದ್ದಕ್ಕೆ, ಮೂವತ್ತೈದು ರೂಪಾಯಿ ಮೊದಲು ಕೊಟ್ಟು ರಾತ್ರಿ ಜನ ಕಳಿಸಿಕೊಡೀ ಅಂದರು. ಅದು ಬಿಡು ! ನಿನ್ನ ಶೆಟ್ಟರ ಹತ್ತಿರ ಹೇಳಿ ಸ್ವಲ್ಪ ಸಲೀಸಾಗಿ ಸಿಕ್ಕುವ ಹಾಗೆ ಮಾಡುವಿಯಾ?"

"ನಮ್ಮ ಶೆಟ್ಟರಾದರೂ ಸಲೀಸಾಗಿ ಯಾಕೆ ಕೊಟ್ಟಾರು ಜೋಯಿಸರೆ? ಮೂವತ್ತರ ಹಾಗೆ ಮೊನ್ನೆ ಐದು ಮುಡಿ ಕೊಟ್ಟಿದ್ದಾರೆ.—"

ಎಂದ ಕೃಷ್ಣನ ಮಾತು ಕೇಳಿ ಜೋಯಿಸರು ದಿಗಿಲು ಬಿದ್ದು—"ಅಯ್ಯೋ! ದೇವರೆ! ಇಲ್ಲಿಯೂ ಆ ಬೆಲೆಯ ಭೂತವು ಬಂತೆ ? ಇನ್ನು ನಾವೆಲ್ಲಾ ಬದುಕಿದ ಹಾಗೆಯೆ!"

"ಅಷ್ಟು ಗಾಬರಿ ಬೀಳಬೇಡಿ ಜೋಯಿಸರೆ. ಬೇಕಾದಷ್ಟು ಹಣ ಸಂಪಾದಿಸುವವರೂ, ಸಂಪಾದಿಸಿ ಬ್ಯಾಂಕಿನಲ್ಲಿಟ್ಟವರೂ ಆದ ನೀವೇ ಹೀಗೆ ಹೇಳಿದರೆ, ಉಳಿದ ಬಡವರ ಪಾಡೇನು ಹೇಳಿ?" ಎಂದನು ಕೃಷ್ಣ.

"ಹಾಗೆ ನನ್ನನ್ನು ಚುಚ್ಚಿ ಮಾತಾಡಬೇಡ ಕೃಷ್ಣ. ನಾನು ನಿಮ್ಮ ವಿಷಯದಲ್ಲಿ ಎಷ್ಟು ಪಶ್ಚಾತ್ತಾಪ ಪಡುತ್ತಿದ್ದೇನೆ ಗೊತ್ತೊ? ಅದನ್ನು ನೆನೆದುಕೊಂಡು ನೀನು ನಿನಗೋಸ್ಕರ ಎಂದಾದರೂ ಹೇಳಿ, ಒಂದು ನಾಲ್ಕು ಮುಡಿ ನನಗೆ ಸುಲಭದಲ್ಲಿ ಸಿಕ್ಕುವಂತೆ ಮಾಡಯ್ಯ. ನಿನ್ನ ಪುಣ್ಯ!"

"ಅಸಾಧ್ಯ ಜೋಯಿಸರಲ್ಲವೇ ನೀವು ?" ಎಂದನು ಕೃಷ್ಣ.

ಈ ವ್ಯವಹಾರಕ್ಕೆ ಏನೂ ಸಂಬಂಧವಿಲ್ಲದ ಶೀನು ಇದು ವರೆಗೆ ಸುಮ್ಮನಿದ್ದವನು ಈಗ ಬಾಯಿ ಹಾಕಿದ:

"ಕೃಷ್ಣನು ನಿಮ್ಮನ್ನು ಹಾಗೆಲ್ಲ ಬಿಟ್ಟು ಹಾಕಲಾರ ಜೋಯಿಸರೆ. ಚಿಂತಿಸಬೇಡಿ"

ಒಡನೆಯೆ ಕೃಷ್ಣನು "ಈಗ ನಿಮ್ಮ ಕೈಯಲ್ಲಿ ರೂಪಾಯಿ ಇದೆಯೆ ?"

"ಎಷ್ಟು ಬೇಕಪ್ಪ ನಿನಗೆ?" ಜೋಯಿಸರ ಪ್ರಶ್ನೆ.

"ಎಂಭತ್ತು ಕೊಡಿರೀಗ. ರಾತ್ರಿ ನಾಲ್ಕು ಆಳುಗಳನ್ನು ಇಲ್ಲಿಗೆ ಕಳಿಸಿ. ನಾಲ್ಕು ಮುಡಿ ಹೊರಿಸುತ್ತೇನೆ. ಆಯಿತೆ?"

"ನಿಜವೆ? ಇಲ್ಲಿಗೇ ಕಳಿಸಲೆ?"—ಆಶ್ಚರ್ಯದಿಂದ ಜೋಯಿಸರು ಕೇಳಿದರು.

"ಇಲ್ಲಿಗೇ ಕಳಿಸಿರಿ. ಆದರೆ ನನ್ನದೆಂದು ತಿಳಿದುಗಿಳಿದು ಬಿಡ ಬೇಡಿ. ನನಗಿದರಲ್ಲಿ ಒಂದು ಕಾಸಿನ ಲಾಭವೂ ಇಲ್ಲ"

"ಅಯ್ಯೋ! ಅದು ನನಗೆ ಗೊತ್ತು. ಹೀಗೆ ಸ್ವಲ್ಪ ಉಪಕಾರ ಬುದ್ಧಿ ಯಾವಾಗಲೂ ಇರಲಿ ಕೃಷ್ಣ." ಎನ್ನುತ್ತಾ ಜೋಯಿಸರು ತಮ್ಮ ಜೇಬಿನೊಳಗಿನಿಂದ ಒಂದು ದೊಡ್ಡ ಪರ್ಸನ್ನು ಎತ್ತಿದರು. ಅದರೊಳಗಿನಿಂದ ಅವರು ಹತ್ತು ಹತ್ತು ರೂಪಾಯಿಯ ನೋಟುಗಳನ್ನು ತೆಗೆಯುವುದನ್ನು ನೋಡಿ ಶೀನು ಆಶ್ಚರ್ಯದಿಂದ—"ಏನು ಸ್ವಾಮಿ, ರೂಪಾಯಿಯ ಕಟ್ಟುಕಟ್ಟಿ ಜೇಬಿನಲ್ಲಿಟ್ಟುಕೊಂಡಿದ್ದೀರಿ?"

ಕೂಡಲೇ ಕೃಷ್ಣನು—"ಜೋಯಿಸರಲ್ಲವೆ ? ಎಲ್ಲಾ ಮುಂತಿಳಿದು ಕೊಂಡೇ ತಂದಿದ್ದಾರೆ!"

"ಹಾಗಲ್ಲಪ್ಪಾ. ಈಗ ಮನುಷ್ಯರಿಗೆಲ್ಲಾ ಹೊಟ್ಟೆಯ ಚಿಂತೆಯೇ ಬಹಳ ಮುಖ್ಯವಾಗಿದೆ. ಅಕ್ಕಿಯೋ ಸಕ್ಕರೆಯೊ ಅಕಸ್ಮಾತ್ ಸಿಕ್ಕುವ ಸಂದರ್ಭ ಬಂದರೆ, ದುಡ್ಡಿಲ್ಲದ ತೊಂದರೆ ಬರಬಾರದಲ್ಲಾ ಅಂತ, ಯಾವಾಗಲೂ ನಾನು ಇದೊಂದು ಅಭ್ಯಾಸವಿಟ್ಟುಕೊಂಡಿದ್ದೇನೆ." ಎಂದು ನುಡಿದು ಜೋಯಿಸರು ಹತ್ತು ರೂಪಾಯಿಯ ೮ ನೋಟುಗಳನ್ನು ಕೃಷ್ಣನಿಗೆ ಕೊಟ್ಟರು.

ಕೃಷ್ಣನು ಅದನ್ನೆಣಿಸಿ ಜೇಬಿನಲ್ಲಿ ಹಾಕಿಕೊಳ್ಳುತ್ತ "ಸರಿ ಹಾಗಾದರೆ ರಾತ್ರಿ ಹತ್ತು ಗಂಟೆಯ ಮೇಲೆ ಜನ ಕಳಿಸಿರಿ" ಎಂದು ಅಂಗಳಕ್ಕಿಳಿದು ಸೈಕಲ್ಲನ್ನು ಎಳೆದುರುಳಿಸಿಕೊಂಡನು.

"ಏನು ಮತ್ತೆ ಅಂಗಡಿಗೋ?" ಜೋಯಿಸರು ಕೇಳಿದರು

"ಹೌದು. ರಾತ್ರಿ ಒಂಭತ್ತು ಗಂಟೆಯವರೆಗೂ ಅಲ್ಲಿರಬೇಕಲ್ಲ?" ಎಂದು ಕೃಷ್ಣನು ಸೈಕಲ್ಲನ್ನು ತಳ್ಳಿಕೊಂಡು ಹಾರಿ ಹತ್ತಿ ಸ್ವಾರೀ ಬಿಟ್ಟನು.

"ಹಾಗಾದರೆ ನಾನೂ ಹೊರಡುತ್ತೇನೆ. ಇಂದು ಬಂದುದಕ್ಕೆ ಒಂದು ವ್ಯಾಪಾರವೂ ಆಗಿಹೋಯಿತು. ಶೀನು, ಕೃಷ್ಣನೊಡನೆ ಮಾತಾಡಿ ಸೆಟಲ್ ಮಾಡಿಬಿಡು. ಮುಹೂರ್ತ ಇಟ್ಟು ಬಿಡುವ." ಎಂದು ಜೋಯಿಸರೂ ಎದ್ದರು.

೬

ಆ ರಾತ್ರಿ ಊಟವಾದ ಮೇಲೆ ಆ ಅಣ್ಣ-ತಮ್ಮಂದಿರು ಚಾವಡಿಯಲ್ಲಿ ಕುಳಿತುಕೊಂಡು ಬಹಳ ಹೊತ್ತು ಮಾತುಕತೆ ನಡೆಸಿದರು. ದೊಡ್ಡಮ್ಮನೂ ನಡುನಡುವೆ ಬಾಯಿ ತೂರಿಸುತ್ತ ಕಡೆಗೆ ಹಾಗೆ ನಿದ್ದೆ ಹೋದಳು. ಕೃಷ್ಣನು ಸುಲಭದಲ್ಲಿ ಮಲ್ಲಿಕೆಯನ್ನು ಮದುವೆ ಮಾಡಿಕೊಳ್ಳಲು ಒಪ್ಪಲಿಲ್ಲ. "ಅಣ್ಣ, ಮಲ್ಲಿಕಾ ನಿನ್ನ ಸ್ವಭಾವಕ್ಕೆ ತಕ್ಕ ಹುಡುಗಿ. ನಿನ್ನ ಸಾಹಿತ್ಯ ಕ್ಷೇತ್ರಕ್ಕೆ ಅವಳೊಂದು ನವಿಲಿನಂತಿದ್ದಾಳೆ. ನಿನ್ನ ಆ ಹಳೆಯ ಪ್ರೇಮದ ಕಮಲೆಗಿಂತ ಇವಳೇನೂ ಕಡಮೆಯಲ್ಲಣ್ಣ." ಎಂದು ಮುಂ-ತಾಗಿ ಅಣ್ಣನನ್ನು ಒತ್ತಾಯಿಸಿದನು.

"ಆ ಕಮಲೆಗೂ ಇವಳಿಗೂ ಎಲ್ಲಿಯ ಸಂಬಂಧ? ನಾನೆಲ್ಲಿ? ಮಲ್ಲಿಕಾ ಎಲ್ಲಿ? ಅವಳು ನನ್ನ ತಂಗಿ ಎಂದೇ ತಿಳಿದಿದ್ದೇನೆ. ಅವಳು ನಿನ್ನ ಮಡದಿಯಾಗಿ ನಮ್ಮ ಮನೆಗೆ ಬರಬೇಕೆಂದು ನನ್ನ ಆಸೆ. ನಿನಗೂ ಅವಳಿಗೂ ಜೋಡು ತುಂಬ ಚೆನ್ನಾಗಿದೆ"

"ನಿನಗೂ ಅವಳು ಸರಿಜೋಡಿಯಾಗಿದ್ದಾಳೆ ಅಣ್ಣಾ"

"ಅದು ಹೇಗೆ? ಇಪ್ಪತ್ತು ವಯಸ್ಸಿನ ನಿನಗೂ ಹದಿನಾರು ವಯಸ್ಸಿನ ಅವಳಿಗೂ ಸರಿಮೇಳವೇ ಹೊರತು ನನಗೆ ಹೇಗೆ?"

"ಇದೇನೂ ದೊಡ್ಡ ವ್ಯತ್ಯಾಸವಲ್ಲಣ್ಣ. ಹೀಗೆ ಎಷ್ಟೋ ಆಗಿದೆ."

"ಆದರೂ ವ್ಯತ್ಯಾಸವು ವ್ಯತ್ಯಾಸ ತಾನೆ?"

"ಹಾಗಾದರೆ ನೀನು ಮದುವೆಯನ್ನೇ ಮಾಡಿಕೊಳ್ಳದೆ ಎಂದೆಂದಿಗೂ ಹೀಗೆಯೇ ಇದ್ದು ಬಿಡುವಿಯಾ?"

"ಹಾಗೆಂದೇ ನಿಶ್ಚಯ ಮಾಡಿದ್ದೇನೆ."

"ಅಂದರೆ ಪ್ರತಿಜ್ಞೆ ಏನಾದರೂ ಮಾಡಿರುವಿಯಾ?"

"ಪ್ರತಿಜ್ಞೆಯೆ? ಭೀಷ್ಮರ ಹಾಗೆ ನಾವು ಪ್ರತಿಜ್ಞೆ ಮಾಡಬಾರದು ಕೃಷ್ಣ."

ಕೃಷ್ಣನು ಸಣ್ಣ ನಗುನಗುತ್ತ—"ಅದೇ ಮತ್ತೆ; ರೂಪ, ವಯಸ್ಸು, ಗುಣ, ಎಲ್ಲದರಲ್ಲಿಯೂ ಸರಿಯಾಗಿ ಬಂದರೆ ನೀನು ವಿವಾಹಮಾಡಿಕೊಳ್ಳಲೂ ಬಹುದು. ಪ್ರತಿಜ್ಞೆ ಮಾಡಿದರೆ ಕಷ್ಟವಲ್ಲವೆ?"

"ಯಾಕೆ ಕೃಷ್ಣ, ನನ್ನನ್ನು ಪ್ರತಿಜ್ಞೆಮಾಡು ಅನ್ನುತ್ತಿಯಾ?"

"ಛೇ ಛೇ. ಕೂಡದೇ ಕೂಡದು. ಎಲ್ಲಾದ್ರೂ ಹಾಗೆಲ್ಲಾ ಮಾಡಿಬಿಡಬೇಡಣ್ಣ."

"ಪ್ರತಿಜ್ಞೆ ಏಕೆ ಮಾಡಲಿ? ನಾನು ಹೆಂಗುಸರ ಲೀಲಾಜಾಲವಾದ ಈ ಸಂಸಾರದ ಮಧ್ಯದಲ್ಲಿಯೇ ಇರುವವನು. ಯಾವ ಕಾಲಕ್ಕೆ ಏನಾಗುವುದೋ ಬಲ್ಲವರಾರು? ಅದನ್ನೆಲ್ಲ ತಾಳಿಕೊಳ್ಳುವಷ್ಟು ಭೀಷ್ಮ ಹೃದಯವು ನನಗೆಲ್ಲಿದೆ? ಮುಖ್ಯವಾಗಿ ನನಗೆ ಪುನರ್ವಿವಾಹದ ಆಲೋಚನೆಯೇ ಇಲ್ಲ. ಇದು ಪ್ರತಿಜ್ಞೆಯಂತೆಯೇ ಗಟ್ಟಿ. ಸುಮ್ಮನೆ ಈ ಚರ್ಚೆ ಏಕೆ? ಒಪ್ಪಿಬಿಡು ಕೃಷ್ಣ."

"ಆಯಿತಣ್ಣ. ನೀನು ಹೇಳಿದಂತೆಯೇ ಆಗಲಿ. ನಿನ್ನ ಮನಃಪೂರ್ವಕವಾದ ಬಯಕೆಗೆ ನಾನೇನೂ ವಿರುದ್ಧವಿಲ್ಲ. ಆ ರಾಮಾಜೋಯಿಸನಿಂದ ಬರಾಬರಿ ವರದಕ್ಷಿಣೇ ಮಾತ್ರ ಸುಲಿಯದೇ ಬಿಡಬಾರದಣ್ಣ. ಯಾಕೆಂದರೆ, ಅವನು ನಿನ್ನ ಮದುವೆಯ ಸಂಬಂಧ ಎಷ್ಟು ಲಂಚ ಹೊಡಿದಿದ್ದಾನೆ!"

"ಛೆ, ಅದನ್ನೆಲ್ಲಾ ನೆನೆಸಿ ಹೀಗೆ ಮಾತಾಡಬಾರದಪ್ಪ. ಯಾರ ಮನಸ್ಸಿಗೂ ನೋವಾಗದಂತೆ ಒಳ್ಳೆಯ ವಿಧದಲ್ಲಿ ಲಕ್ಷ್ಮಿ ನಮ್ಮ ಮನೆಗೆ

ಬರಲಿ ರಾಮಾ ಜೋಯಿಸರಿಗೆ ತಿಳಿಸಿ ಬಿಡುತ್ತೇನೆ ಹಾಗಾದರೆ. ರಜೆಯಲ್ಲಿ ಗೌರಿ ಹೇಗೂ ಮನೆಯಲ್ಲಿರುತ್ತಾಳೆ. ಆಗಲೇ ಮುಹೂರ್ತ ನೋಡಿಬಿಡುವ."

ಹೀಗೆ ಇಲ್ಲಿ ನಿಶ್ಚಯವಾಗುತ್ತಿದ್ದಾಗ, ಅತ್ತ ರಾಮಾ ಜೋಯಿಸರೂ, ತಮ್ಮಷ್ಟಕ್ಕೆ ತಾವೇ ನಿಶ್ಚಯ ಮಾಡಿಬಿಡದೆ, ಮಗಳ ಸಮ್ಮತಿಯನ್ನು ತಿಳಿಯಲೆತ್ನಿಸಿದರು. "ಮಲ್ಲಿಕಾ, ಶೀನುವೊಡನೆ ನಿನ್ನ ಮದುವೆ ಮಾಡುವಾ ಅಂತ ಇದ್ದೆವಷ್ಟೆ? ಅವನು ಇನ್ನುಮೇಲೆ ಮದುವೆಯೇ ಮಾಡಿಕೊಳ್ಳುವುದಿಲ್ಲಾಂತ ಒಂದೇಪಟ್ಟು ಹಿಡಿದಿದ್ದಾನೆ. ಆದರೆ ನಿನ್ನನ್ನು ಅವನ ತಮ್ಮ ಕೃಷ್ಣನಿಗೆ ತಂದುಕೊಳ್ಳಬೇಕಂತ ಅವನ ಇಷ್ಟ ಮತ್ತು ಬಹಳ ಒತ್ತಾಯ ಕೂಡಾ ಮಾಡುತ್ತಾನೆ. ಯಾವುದಕ್ಕೂ ಯೋಚಿಸಿ ಹೇಳುತ್ತೇನೆ ಅಂತ ಬಂದೆ. ನಿನಗೆ ಇಷ್ಟ ತಾನೆ ಅಮ್ಮ?" ಎಂದು ಅವಳ ಮುಖವನ್ನು ನೋಡಿದರು.

ಅವಳ ಮುಖದ ಕಳೆ ತುಸು ಕಂದೇರಿದಂತಾಯಿತು.

"ನನಗೆ ಗೊತ್ತಿಲ್ಲಪ್ಪಾ" ಎಂದಳು.

"ನಿಶ್ಚಯ ಮಾಡಿಬಿಡಲೆ?"

"ನಿಮಗೆ ಸರಿದೋರಿದಂತೆ ಮಾಡಿ ಅಪ್ಪಾ" ಎಂದೆಂದು ಮಲ್ಲಿಕೆ ಒಳಗೆ ಹೋದಳು.

ಅನಂತರ ಪರೀಕ್ಷೆ ಮಾಡಿದಾಗ ಮಲ್ಲಿಕೆ ಎಂದಿನಂತೆ ಉಲ್ಲಸಿತೆ ಯಾಗಿಯೇ ಇದ್ದಳು. ಅವಳ ತಾಯಿಯೂ ಮಗಳ ಮನೋಗತವನ್ನು ಇನ್ನಷ್ಟು ಸ್ಪಷ್ಟವಾಗಿ ಅರಿತುಕೊಂಡು— "ಇವಳಿಗೇನೂ ಅಭ್ಯಂತರ ವಿಲ್ಲ ಕೃಷ್ಣನಿಗೇನಾಗಿದೆ? ಶೀನುವಿಗಿಂತಲೂ ಚೆಂದಾಗಿದ್ದಾನೆ. ಸಂಪಾದನೆಮಾಡಿ ಹುಡುಗಿಯನ್ನು ಕಾಪಾಡುವ ತ್ರಾಣವುಳ್ಳ ಹುಡುಗ. ನಮಗೆ ಸಮೀಪದ ಸಂಬಂಧವೂ ಸಿಕ್ಕಿದಂತಾಯಿತು. ನಿಶ್ಚಯ ಮಾಡಿ ಬಿಡಿ" ಎಂದಳು.

ಹೀಗೆ ಕೃಷ್ಣನ ಮದುವೆ ನಿಶ್ಚಯವಾಯಿತು. ಎಲ್ಲರಿಗಿಂತ ಹೆಚ್ಚಿನ ಸಂಭ್ರಮ ದೊಡ್ಡಮ್ಮನಿಗೆ. ಈ ದೊಡ್ಡಮ್ಮನೆಂದರೆ ಶೀನುವಿನ ತಾಯಿ ಜಲಜಮ್ಮನ ಸ್ವರಿತ ಅಕ್ಕ. ಬಾಲ ವಿಧವೆ. ಏನೋ ಕೊಂಚ 'ಅಶ ನಾರ್ಥ'ವನ್ನು ಪಡೆಯುವ ಅನಾಥ ಹೆಂಗುಸು. ಜಲಜಮ್ಮ ತೀರಿಹೋದ

ಮೇಲೆ ಈ ದೊಡ್ಡಮ್ಮ ಮನೆಗೆ ಆಧಾರಸ್ತಂಭವಾಗಿ ತಮ್ಮಲ್ಲೇ ಇರಬೇಕೆಂದು ಶೀನೂ ಕೃಷ್ಣರು ಒತ್ತಾಯಿಸಿದ್ದರು. ತಾಯಿಯ ಸ್ಥಾನದಲ್ಲಿಯೇ ಅವಳನ್ನು ಇಟ್ಟಿದ್ದರು. ಅವಳಾದರೂ ಅವರನ್ನು ಮಕ್ಕಳಂತೆಯೇ ನೋಡುತ್ತಿದ್ದಳು. ಮಲ್ಲಿಕೆಯಂತಹ ಕನ್ಯಾರತ್ನವು ತನ್ನ ಸೊಸೆಯಾಗಿ ಬರುವಳೆಂದು ತಿಳಿದು ಅವಳು ಬಹಳ ಹಿಗ್ಗಿದಳು. ಆ ಹಿಗ್ಗಿನೆಡೆಯಲ್ಲಿ ಅವಳೊಂದು ಅಡ್ಡರಾಗವನ್ನೂ ತೆಗೆಯದಿರಲಿಲ್ಲ. "ಕಲೀನ ಕೊಟ್ಟು ಸಿರೀನ ತರಬೇಕು—ಅಂತ ಹಿರಿಯರ ಮಾತು. ಮದುವೆ ಈಡು ಬಂದ ತಂಗಿಗೆ ಮದುವೆ ಮಾಡದೆ, ಅಣ್ಣನಿಗೆ ಮದುವೆಯಾಗುವುದು ಅಂದರೆ ಹೊಸ ಕಾಲದ ವೈವಾ! ಹೂಂ! ಇದು ಹುಡುಗೀ ಇಷ್ಟ ಕೇಳಿ ಮದುವೆ ಮಾಡುವ ಕಾಲ!" ಎಂದಳು ದೊಡ್ಡಮ್ಮ.

ಅದಕ್ಕೆ ಶೀನು, "ಹೌದು ದೊಡ್ಡಮ್ಮ. ಹೆಣ್ಣು ಅಂದರೆ ಹದಿನಾಲ್ಕನೇ ವರ್ಷದೊಳಗೆ ಮದುವೆಯಾಗಿ ಇಪ್ಪತ್ತು ವರ್ಷದೊಳಗೆ ಮೂರು ನಾಲ್ಕು ಹೆತ್ತು, ಸಂಸಾರದ ಇಕ್ಕುಳದೊಳಗೆ ಕಟ್ಟಿಂಡು ಬಿದ್ದುಬಿಟ್ಟರೆ, ಹೆಂಗುಸಿನ ಕರ್ತವ್ಯವು ಮುಗಿಯಿತೆಂದು ನೀವೆಲ್ಲ ತಿಳಿದಿದ್ದೀರಿ. ಹಾಗಲ್ಲ ದೊಡ್ಡಮ್ಮ. ಹೆಂಗುಸು ಗಂಡಸಿನಂತೆಯೇ ಆತ್ಮ-ಮನಸ್ಸು, ಇಚ್ಛೆ ಎಲ್ಲಾ ಇರುವ ಪ್ರಾಣಿ. ಜಾಪಾನು ಯುದ್ಧದಲ್ಲಿ ಹೆಂಗುಸರು ಎಂತೆಂಥಾ ಸಾಹಸಗಳನ್ನು ಮಾಡುತ್ತಿದ್ದಾರೆಂದು ಕೇಳಿದರೆ ನೀವು ಆಶ್ಚರ್ಯದಿಂದ ಸ್ತಬ್ಧರಾದೀರಿ! ಮುಖ್ಯವಾಗಿ ಹೆಂಗುಸರ ಹಿತಾಹಿತಗಳನ್ನು ಅವರೇ ತಿಳಿದುಕೊಳ್ಳಲಿಕ್ಕೆ ತಕ್ಕ ಸಂದರ್ಭಗಳನ್ನು ಕಲ್ಪಿಸಿಕೊಡಬೇಕು. ತಿಳಿವಳಿಕೆ ಬರುವಂತೆ ಮಾಡಬೇಕು. ನಮ್ಮ ಗೌರಿ ಸಾಮಾನ್ಯ ಹುಡುಗಿಯಲ್ಲ ಹೋದ ಜನ್ಮದಲ್ಲಿ ತುಂಬಾ ಸರಸ್ವತೀ ಪೂಜೆ ಮಾಡಿದವಳು. ಸಂಗೀತದಲ್ಲಿಯೂ ನಾಟ್ಯದಲ್ಲಿಯೂ ಅವಳಿಗೆಷ್ಟು ಲಾಘವವಿದೆ! ಹಾಗೆಯೇ ಮೇಲೆ ಮೇಲೆ ಕಲಿಯಬೇಕೆಂಬ ಲವಲವಿಕೆಯೂ ಇದೆ. ಹಾಗೆ ಅವಳ ಅಭಿಲಾಷೆ ಅಭಿರುಚಿಗಳಿರುವಾಗ ನಾವೇಕೆ ಅಡ್ಡಗಲ್ಲು ಹಾಕಬೇಕು? ಮದುವೆ ಮದುವೆಯೆಂದು ಏಕೆ ಒತ್ತಾಯಿಸಬೇಕು?" ಎಂದನು.

ದೊಡ್ಡಮ್ಮ— "ಆಯಿತಪ್ಪ. ಏನು ಬೇಕಾದರೂ ಮಾಡಿ. ನಮ್ಮ ಕಾಲದಲ್ಲಿ ಕಾಲಕಾಲಕ್ಕೆ ಹುಡುಗಿಗೆ ಮದುವೇ ಮಾಡದಿದ್ದರೆ ಜಾತಿ

ಹೋಗುತ್ತಿತ್ತು. ಈಗ ಹಾಗೇನಿಲ್ಲ. ಬ್ರಾಹ್ಮಣನು ಶೂದ್ರಳನ್ನು ಮದುವೆ ಮಾಡಿಕೊಂಡರೂ, ಒಂದು ವಿಧವೆಯನ್ನ ಮಾಡಿಕೊಂಡರೂ ಯಾಗೂ ಕೇಳುವವರಿಲ್ಲ. ಹೆಂಗುಸರಿಗೆ ನಾಟ್ಯ-ಕುಣಿತ ಎಲ್ಲಾ ಯಾಕೆ ಕರ್ಮಕ್ಕೆ? ಅವೊತ್ತು ನಮ್ಮ ಶಾಲೆಯಲ್ಲಿ ಗೌರಿ ಡ್ಯಾನ್ಸು ಮಾಡಿದ ಳಲ್ಲಾ? ಹುಡುಗಿಯಾಗಿರುವಾಗ ತುಂಬಾ ಚೆಂದವೇ ಕಾಣುತ್ತೆ. ಬೆಳೆದ ಮೇಲೆ ಅಸಹ್ಯವಲ್ಲವೇ ಸೂಳೇರ ಹಾಗೆ?"

"ಹಾಗೆ ತಿಳಿಯಬಾರದು, ದೊಡ್ಡಮ್ಮ. ನಾಟ್ಯ-ಸಂಗೀತಗಳು ಹೆಂಗುಸಿಗೇ ಮೀಸಲಾದ ಕಲೆಗಳು. ಅದನ್ನು ಕಲಿತವರೆಲ್ಲ ಸೂಳೆಯರೇ ಆಗಬೇಕಿಂದಿಲ್ಲ ಆಟ-ಪಾಟಗಳಿಂದ ಮಕ್ಕಳನ್ನು ಆನಂದಗೊಳಿಸುವ ತಾಯಿಯಂತೆ, ಹೆಂಗುಸು ಸುಂದರವಾದ ನಾಟ್ಯಭಂಗಿಗಳಿಂದಲೂ, ಮಧುರವಾದ ಸಂಗೀತದಿಂದಲೂ ಜನರನ್ನೆಲ್ಲಾ ಆನಂದಗೊಳಿಸುತ್ತಾಳೆ. ಮಾತೃಭಾವದಿಂದ ಅದನ್ನು ಅನುಭವಿಸಿದರೇನೇ ಅದರ ಸಾಫಲ್ಯ. ಉತ್ತಮವಾದ ಸಂಸಾರ ಹೊಂದಿದವರೆಲ್ಲ ಹಾಗೆಯೇ ತಿಳಿಯುತ್ತಾರೆ ಉಳಿದವರು ಬೊಗಳಿದರೆ ಕಲೆಗೇನು ಕೇಡು? ನಾಯಿ ಬೊಗಳಿದರೆ ದೇವ ಲೋಕ ಹಾಳಾದೀತೆ?"

"ಹಾಗಾದರೆ ಗೌರಿ ನಾಟ್ಯ ಸಂಗೀತಗಳಿಂದ ಜನರನ್ನು ಆನಂದ ಗೊಳಿಸುತ್ತ ಮದುವೆ ಮಾಡಿಕೊಳ್ಳದೆಯೇ ಕಾಲ ಕಳೆಯುವಳೋ ಏನೋ!''

"ಅದು ತಿಳುವಳಿಕೆಯುಳ್ಳವಳ ಇಚ್ಛೆಯಂತೆ! ನಾಟ್ಯವೂ ಸಂಗೀತವೂ ಎಲ್ಲರಿಗೂ ಬರುವಂತಹ ಕಲೆಯಲ್ಲ. ಅಪೂರ್ವವಾಗಿ ಹುಟ್ಟುವ ನಮ್ಮ ಗೌರಿಯಂತಹ ಮಹಿಳೆಯರು, ಮದುವೆ ಮಾಡಿಕೊಳ್ಳದೆ, ಆ ಕಲೆಗೇ ತಮ್ಮನ್ನು ಸಮರ್ಪಿಸಿಕೊಂಡರೆ ಅದೇನೂ ತಪ್ಪಲ್ಲ. ಆದ್ದರಿಂದ ಗೌರಿಯ ವಿಷಯ ನಾವೇನೂ ಚಿಂತಿಸಬೇಕಾಗಿಲ್ಲ. ಒಳಿತು ಕೆಡಕುಗಳನ್ನು ತಿಳಿದುಕೊಳ್ಳಬಲ್ಲ ವಿವೇಕ ಅವಳಿಗಿದೆ. ಕಲಿಯಲಿ! ಮೆರೆಯಲಿ! ಕೀರ್ತಿಶಾಲಿನಿಯಾಗಲಿ! ಆದರ್ಶ ಮಹಿಳಾಮಣಿಯಾಗಲಿ!''

"ಆಯಿತು! ಹಾಗೇ ಆಗಲಿ!" ಎಂದು ದೊಡ್ಡಮ್ಮನೂ ದನಿಗೂಡಿಸಿ ಮತ್ತೆ ಸುಮ್ಮನಾಗಿ ಬಿಟ್ಟಳು.

ತಂಗಿ ಗೌರಿಯ ಮೇಲೆ ಶೀನುವಿನ ಪ್ರೀತಿ ಅಪಾರ. ಕೃಷ್ಣನಿಗೂ ಗೌರಿ ತಂಗಿಯೇ. ಅವನಿಗೂ ಪ್ರೀತಿಯುಂಟು ಆದರೆ ಗೌರಿ ಹಿಡಿದ ದಾರಿ ಕೃಷ್ಣನಿಗೆ ಇಷ್ಟವಿರಲಿಲ್ಲ. ಅವಳನ್ನು 'ಆರಂಭ ಶಾಲೆ'ಯ ವಿದ್ಯೆಯಲ್ಲಿಯೇ ನಿಲ್ಲಿಸಿ ಮದುವೆಮಾಡಿ ಕಳುಹಿಸಿ ಬಿಡಬೇಕಿತ್ತೆಂದು ಅವನ ಮತ. ಈ ವಿಷಯದಲ್ಲಿ ಅವನು ದೊಡ್ಡಮ್ಮನಿಗಿಂತ ಹೆಚ್ಚಾಗಿಯೇ ಅಣ್ಣನೊಡನೆ ವಾದಾಡಿದ್ದನು. ಆದರೆ ಶೀನು ಅವನ ವಾದಕ್ಕೆ ತಕ್ಕ ಪ್ರತಿವಾದವನ್ನು ಹೂಡಿ, ಕೃಷ್ಣನ ಬಾಯಿ ಮುಚ್ಚಿಸಿಬಿಟ್ಟಿದ್ದ. ಆದುದರಿಂದ ಗೌರಿ ಆರಂಭ ಶಾಲೆಯಿಂದ ಹೈಸ್ಕೂಲನ್ನು ಪ್ರವೇಶಿಸಿ. ಈಗ ಮಂಗಳೂರಿನ ಕಲಾಶಾಲೆಯನ್ನು ಹೊಕ್ಕಿದ್ದಳು ಎಲ್ಲವೂ ಶೀನೂ ಒಬ್ಬನ ಪ್ರಯತ್ನದಿಂದಲೇ. ಅವಳ ಎಲ್ಲಾ ಖರ್ಚನ್ನೂ ಅವನೇ ವಹಿಸಿ ನಡೆಸುತ್ತಿದ್ದನು. ಮಂಗಳೂರಿನಲ್ಲಿರುವ "ಜನವದನೀ" ಪತ್ರಿಕೆಯ ಅಧಿಕಾರಿಗಳೂ, ಘನ ಶ್ರೀಮಂತರೂ ಆದ ಶ್ರೀ. ಶ್ಯಾಮಸುಂದರರು ಶೀನುವಿಗೆ ತುಂಬಾ ಪರಿಚಿತರು; ಪ್ರೋತ್ಸಾಹಕಾರಿಗಳು ಶೀನು ಗೌರಿಯನ್ನು ಅವರ ಮನೆಯಲ್ಲಿಯೇ ಇರಿಸಿದ್ದನು. ಅವರು ಅವಳನ್ನು ತನ್ನ ಮಕ್ಕಳ ಜತೆಯಲ್ಲಿ ಸ್ವಂತ ಮಗಳಂತೆ ನೋಡಿಕೊಳ್ಳುತ್ತಿದ್ದರು. ಅವರ ಮಗಳು ವಸಂತಿ ಗೌರಿಯ ಓರಿಗೆಯ ಗೆಳತಿಯಾಗಿದ್ದಳು. ಶೀನುವೂ ಆಗಾಗ ಮಂಗಳೂರಿಗೆ ಹೋಗಿ ತಂಗಿಯನ್ನು ನೋಡಿಕೊಂಡು ಬರುತ್ತಿದ್ದ.

ಗೌರಿ ಈಗ ಇಂಟರಿನಲ್ಲಿ ಓದುತ್ತಿದ್ದಳು "ಮಂಜುಳ ಕಲಾನಿಲಯ"ಕ್ಕೂ ಸೇರಿ ನಾಟ್ಯವನ್ನೂ ಸಂಗೀತವನ್ನೂ ಪ್ರತ್ಯೇಕವಾಗಿ ಕಲಿಯುತ್ತಿದ್ದಳು. ವಸಂತಿಯೂ ಅವಳ ಜತೆಯಲ್ಲಿಯೇ ಕಲಿಯುವ ವಿದ್ಯಾರ್ಥಿನಿ. ಒಮ್ಮೆ ಮಂಗಳೂರಿನ "ಮಂಜುಳ ಕಲಾನಿಲಯ"ದವರು ಸಾರ್ವಜನಿಕರ ಮುಂದೆ ಪ್ರದರ್ಶಿಸಿದ ನಾಟ್ಯದಾಟದಲ್ಲಿ ಗೌರೀ-ವಸಂತಿಯರ ಹೆಸರು ಬೆಳಕಿಗೆ ಬಿದ್ದಿತ್ತು. ಅವರ ಸುಂದರ ಭಾವಚಿತ್ರಗಳು ಪತ್ರಿಕೆಯಲ್ಲಿ ಪ್ರಕಟವಾಗಿದ್ದುವು. ಇಂತಹ ಅಭಿರುಚಿಯುಳ್ಳ ತಂಗಿಯನ್ನು ಬಲವಂತದಿಂದ ವಿವಾಹ ಬಂಧನದಲ್ಲಿ ಬಿಗಿದು ಹಾಕಲು ಸಾಹಿತಿ ಶೀನು ಹೇಗೆ ಒಪ್ಪಿಯಾನು?

ಅವನ ಪೋಷಕರಾದ ಶಾಮಸುಂದರರೂ ಅದೇ ಬಗೆಯ ಮನೋಭಾವವುಳ್ಳವರು. "ಗೌರೀ ವಸಂತಿಯರು ಅವರ ಇಷ್ಟ ಪೂರ್ತಿಯಾಗು

ವಷ್ಟು ಕಲಿಯಲಿ; ಅವರ ಜ್ಞಾನವು ವೃದ್ಧಿಯಾಗಲಿ. ನಂತರ ಅವರ ಇಷ್ಟಾನುಸಾರವಾಗಿಯೇ ಮದುವೆ ಮಾಡೋಣ" ಎಂದು ಹೇಳಿ ಗಟ್ಟಿಯಾಗಿ ಬಿಟ್ಟಿದ್ದರು ಶಾಮಸುಂದರರು.

೨

ಕೃಷ್ಣನ ಮದುವೆ ನೆರವೇರಿತು. ಮಲ್ಲಿಕೆ ಕೃಷ್ಣನ ಅರ್ಧಾಂಗಿನಿಯಾದಳು. ಅದೇನು ನಾವು ತುಂಬಾ ವರ್ಣಿಸುವಷ್ಟು ಮಹಾವೈಭವದ ಮದುವೆಯಲ್ಲ. ಎಂತೆಂತಹ ಮದುವೆಯ ವೈಭವಗಳನ್ನು ಓದಿರುವ ಓದುಗರಿಗೆ, ಇದು ಸಾಮಾನ್ಯವಾದೊಂದು ಮದುವೆ ಮಾತ್ರವೇ ಆಯಿತು. 'ರೇಶನ್' ಕಾಲವಲ್ಲವೆ? ಲೆಕ್ಕಕ್ಕೆ ತಕ್ಕಷ್ಟೇ ಮಂದಿಗೆ ಅನ್ನ ಹಾಕಬೇಕೆಂಬ ಕಾನೂನು ಜ್ಯಾರಿಯಲ್ಲಿರುವ ಸಮಯ. ಕಾಳಸಂತೆಯಿಂದಾದರೂ ಸಾಮಾನು ದೊರಕಿಸಿಕೊಂಡು, ಲೆಕ್ಕಕ್ಕೆ ಮಿಕ್ಕಿದ ಜನಕ್ಕೆ ಅನ್ನ ಹಾಕಿಬಿಟ್ಟರೆ, ದಂಡನೆಗೇ ಗುರಿಯಾಗಬೇಕು. ಅಂತಹ ಕಾಟದ ಕೆಲಸಕ್ಕೆಲ್ಲ ಶೀನುವೂ ರಾಮಾ ಜೋಯಿಸರೂ ಮನಸ್ಸು ಮಾಡಲೇ ಇಲ್ಲ. ತೀರ ಬೇಕಾದ ಹಲಕೆಲವರಿಗೆ ಮಾತ್ರವೇ ಹೇಳಿಕೆ ಮಾಡಿದ್ದರು. ಮದುವೆ-ಮಂಗಳಕಾರ್ಯವೆಂದು ದೊಡ್ಡ ದೊಡ್ಡ ದೀಪಗಳನ್ನಾದರೂ ಹಚ್ಚಲಿಕ್ಕುಂಟೆ? 'ಬ್ಲ್ಯಾಕ್ ಔಟ್' ಜ್ಯಾರಿಯಲ್ಲಿತ್ತು. ದೀಪದ ಬೆಳಕು ಹೊರಗೆ ಕಾಣದಂತಿರಬೇಕು. ಆದುದರಿಂದ ಗ್ಯಾಸ್‌ಲೈಟು ಕೂಡ ಇಲ್ಲದೆ, ಕೃಷ್ಣನ ಮದುವೆ ಇತ್ತೀಚಿನ ಕ್ರಮದಂತೆ, ಒಂದೇ ದಿನದಲ್ಲಿ ಆಯಿತು. ಬೆಳಗ್ಗೆ ಹೊಸ ಗಂಟೆ ೯ ಕ್ಕೆ ರಾಮಾ ಜೋಯಿಸರ ಮನೆಗೆ ಮದುಮಗನ ದಿಬ್ಬಣ ಬಂತು ಮಧ್ಯಾಹ್ನ ಹೊಸ ಗಂಟೆ ೧ಕ್ಕೆ ಧಾರಾ ಮುಹೂರ್ತ. ಮರುದಿನ ರಾತ್ರಿ ಶೀನುವಿನ ಮನೆಯಲ್ಲಿ ಗೃಹಪ್ರವೇಶ. ಹೀಗೆ ಮದುವೆಯ ಶಾಸ್ತ್ರವು ಚುಟುಕಾಗಿ ಮುಗಿದುಹೋಯಿತು.

ಕೃಷ್ಣನ ಮನಸ್ಸಿನಲ್ಲಿ ತನ್ನ ಮದುವೆ ಸಾಕಷ್ಟು ಗೌಜಿಯಿಂದಲೇ ನಡೆಯಬೇಕೆಂದಿತ್ತು. ರೇಶನ್-ಕಂಟ್ರೋಲುಗಳ ಭಯವಿದ್ದರೂ, ಲಂಚ ಮುಂತಾದ ಒಳತಂತ್ರದಿಂದ ಅದನ್ನು ಮೀರಬಹುದೆಂಬ ಧೈರ್ಯ ಅವನಿಗಿತ್ತು. ಆದರೆ ಅದಕ್ಕೆ ಸಾಕಷ್ಟು ಸ್ವಂತ ಹಣವು ಅವನ ಬಳಿಯಲ್ಲಿದ್ದಿಲ್ಲ.

ಅದಕ್ಕಾಗಿ ಅವನು ೧೦೦೦ ರೂಪಾಯಿಯನ್ನು ಶೀನುವೊಡನೆ ಕೇಳಿದ್ದನು. ಆಗ ಶೀನು ತನ್ನ ಲೆಕ್ಕವನ್ನು ಅವನಿಗೆ ತೋರಿಸಿ— "ನನ್ನಲ್ಲಿ ಅಷ್ಟಿಲ್ಲ ಕೃಷ್ಣ. ಏನೋ ಅಲ್ಪಸ್ವಲ್ಪವಾಗಿ ಬರುತ್ತಾ ಇರುವುದನ್ನು ಖರ್ಚು ಮಾಡುತ್ತಲೇ ಇದ್ದೇನಲ್ಲ? ಆದರೆ ಮದುವೆಯ ಖರ್ಚನ್ನೆಲ್ಲ ನಾನೇ ಸಾಧಿಸುತ್ತೇನೆ. ನಿನ್ನ ಹಣ ಐನೂರು ರೂಪಾಯಿ ಹಾಗೇ ಇರಲಿ. ಕಾಲಸ್ಥಿತಿಗೆ ಮೀರಿ ಗೌಜಿ ಗದ್ದಲಕ್ಕೆ ಹೋಗುವ ಗೊಡವೆ ಮಾತ್ರ ಬೇಡ ............'' ಎಂದು ತಿಳಿಸಿ ಹೇಳಿದನು.

ಕಡೆಗೆ ಕೃಷ್ಣನು— "ಆ ಸುಂದರಿಯಿಂದ ಬಂದುದರಲ್ಲಿ ಒಂದು ಸಾವಿರ ಖರ್ಚು ಮಾಡಿದರೆ ಏನಾಗುತ್ತದೆ ಮಹಾ?'' ಎಂದು ಕೇಳಿಯೇ ಬಿಟ್ಟಿದ್ದನು.

"ಅದನ್ನು ಮುಟ್ಟಲಾರೆ ನಾನು. ಅದನ್ನೊಂದು ಬೇರೆ ಸಾಹಿತ್ಯದ ಸೇವೆಗಾಗಿ ಮೀಸಲಿಟ್ಟಿದ್ದೇನೆ.''

"ಅದೆಂತಹ ಸಾಹಿತ್ಯ ಸೇವೆಯೋ ಯಾರೂ ಮಾಡದಂಥಾದ್ದು?" ಎಂದೆಂದ ಕೃಷ್ಣನ ದನಿಯಲ್ಲಿ ಕೋಪದ ವಿಷವು ಬೆರೆತಿದ್ದುದು ಸ್ಪಷ್ಟವಾಗಿ ಗಿಯೇ ಕಂಡಿತು.

ಆದನ್ನು ಲಕ್ಷ್ಯಮಾಡದೆ ಶೀನು ಹೇಳಿದ:— ''ಅದೊಂದು ನನ್ನ ಕನಸು. ಅದನ್ನು ನಿಜರೂಪಕ್ಕಿಳಿಸುವುದಕ್ಕೇ ಆ ಹಣ ಮೀಸಲು. ಅದನ್ನು ಮುಟ್ಟಲು ನನಗೂ ಅಧಿಕಾರವಿಲ್ಲ, ನಿನಗೂ ಅಧಿಕಾರವಿಲ್ಲ.'' ಎಂದು ಖಂಡಿತ ಸ್ವರದಿಂದ ಹೇಳಿಬಿಟ್ಟನು.

ಕೃಷ್ಣನ ಗುಣವು ತುಂಬ ವಿಚಿತ್ರ ಸುಂದರಿಯ ಆ ೨೫ ಸಾವಿರ ರೂಪಾಯಿ ಕೈಗೆ ಸಿಕ್ಕಿದಂದೇ ಅದರಲ್ಲಿ ಅರ್ಧ ಭಾಗವನ್ನು ಶೀನು ಕೃಷ್ಣನಿಗೆ ಕೊಡಬೇಕಿತ್ತು; ಆಗ ಕೃಷ್ಣನು ''ನನಗೆ ಬೇಡಣ್ಣ—ಬೇಡಣ್ಣ" ಎಂದು ಹೇಳುತ್ತಿದ್ದ. ಅವನು ಒತ್ತಾಯಮಾಡಿ ಕೊಡಬೇಕಿತ್ತು. ಆಗ ಕೃಷ್ಣನ ಮನಸ್ಸು ತುಂಬಾ ಪ್ರಸನ್ನವಾಗುತ್ತಿತ್ತು. ಆ ಅಸಮಾಧಾನವನ್ನು ತಡೆದು ತಡೆದು, ಕಡೆಗೆ, ೧೦೦೦ ರೂ. ಕೇಳಿದರೂ, ಶೀನಣ್ಣನ ಆ ಖಂಡಿತ ಉತ್ತರವನ್ನು ಕೇಳಿ, ''ಆಯಿತಣ್ಣ ಹಾಗಾದರೆ! ನಿನ್ನ ಹಣ ನಿನ್ನ ಬಳಿಯಲ್ಲೇ ಇರಲಿ. ನನ್ನ ಮದುವೆ ನನ್ನ ಸ್ವಂತ ಖರ್ಚಿನಿಂದಲೇ ಆಗಲಿ." ಎಂದು ಖಂಡಿತವಾಗಿ ಹೇಳಿ, ತನ್ನ ಸಂಪಾದನೆ ೫೦೦ ರೂಪಾಯಿ

ಯನ್ನು ತಂದು ಶೀನಣ್ಣನ ಕೈಯಲ್ಲಿ ಇಟ್ಟೇಬಿಟ್ಟನು! ತಮ್ಮನ ಮನಸ್ಸು ನೊಂದಿತೆಂದು ಶೀನುವಿಗೆ ವ್ಯಸನವಾಯಿತು. "ಹೀಗೆಲ್ಲಾ ನನ್ನ ಮೇಲೆ ಕೋಪಿಸಬಹುದೆ? ನನಗೆ ಒಬ್ಬಳು ತಂಗಿಯೂ, ನೀನೊಬ್ಬ ತಮ್ಮನೂ ಹೊರತು ಬೇರೆಯಾರಿದ್ದಾರೆ? ನಿನ್ನ ಈ ಹಣ ನಿನಗೆ ಅಪದ್ಧನವಾಗಿ ಬ್ಯಾಂಕಿನಲ್ಲಿ ಕಟ್ಟು. ಎಲ್ಲಾ ನಾನು ನೋಡಿಕೊಳ್ಳುತ್ತೇನೆ..........." ಎಂದು ಎಷ್ಟು ಸಮಾಧಾನ ಹೇಳಿದರೂ ಕೃಷ್ಣನು ಕೇಳಲೇ ಇಲ್ಲ. ಇನ್ನು ಹೆಚ್ಚು ಮಾತಾಡಿದರೆ ಮನೆಯೂ ಮನವೂ ಮುರಿದೀತೆಂದು ಶೀನು ಬಾಯಿ ಮುಚ್ಚಿಬಿಟ್ಟಿದ್ದನು. ಆದರೆ ಶೀನು ಕೃಷ್ಣನಿಗೆ ಹೇಳದೆ, ಮಂಗಳೂರಿನಿಂದ ಬಂಗಾರದ ಒಂದು ಗೋದಿ ಮಣಿಹಾರವನ್ನೂ ಒಂದು ಜತೆ ಬಳೆಯನ್ನೂ ತಂದು ಮಲ್ಲಿಕೆಗೆ ತೊಡಿಸಿ, ಆ ೫೦೦ ರೂಪಾಯಿಯನ್ನು ಕೃಷ್ಣನಿಗೇ ವಾಪಾಸು ಕೊಟ್ಟಂತೆ ಮಾಡಿಬಿಟ್ಟಿದ್ದನು. ಇದು ಕೃಷ್ಣನಿಗೆ ಆಶ್ಚರ್ಯವನ್ನುಂಟು ಮಾಡಿತ್ತು. ಮಲ್ಲಿಕೆಯ ಮುಖವು ಆನಂದದಿಂದ ಅರಳಿತ್ತು.

ಈ ಆನಂದಾಶ್ಚರ್ಯಗಳು ಇಮ್ಮಡಿಯಾಗುವಂತೆ ಧಾರೆಯ ಸಮಯದಲ್ಲಿ ಒಂದು ಚಿಕ್ಕ ಪಾರ್ಸಲು ಶೀನುವಿನ ಹೆಸರಿಗೆ ಬಂದಿತ್ತು. ಶೀನು ಅದನ್ನು ರಹಸ್ಯವಾಗಿಯೇ ಒಡೆದಿದ್ದನು. ಅದರೊಳಗೆ ಒಂದು ನಾಜೂಕಾದ ಮುತ್ತಿನ ಪದಕದ, ಬಂಗಾರದೊಂದು ಚೈನು ಸರವೂ, ಒಂದು ಹೊಸ ರಿಸ್ಟ್‌ವಾಚೂ ಇದ್ದುವು. "ವೈದುನ ಕೃಷ್ಣರಾಯರ ವಿವಾಹ ಕಾಲದಲ್ಲಿ ಸುಂದರಿಯ ಕಾಣಿಕೆ" ಎಂಬ ಚಿಕ್ಕ ಒಕ್ಕಣೆಯ ಪತ್ರವೂ ಅದರೊಳಗಿತ್ತು.

"ಯಾರಿಂದ? ಏನದು?" ಎಂದು ಅನೇಕರು ಕೇಳಿದ್ದರು. ಶೀನು ಯಾರಿಗೂ ಏನೊಂದೂ ಹೇಳದೆ, ಆ ವಸ್ತುಗಳನ್ನು ವಧೂವರರಿಗೆ ತೊಡಿಸಿ, "ಮದರಾಸಿನಲ್ಲಿರುವ ಸುಂದರರಾಯರು ಓದಿಸಿದ್ದು" ಎಂದು ಅರಿಕೆ ಪಡಿಸಿದ್ದನು. "ಯಾವ ಸುಂದರರಾಯರು?" ಎಂದು ಕೇಳಿದವರಿಗೆ "ಅವರೊಬ್ಬರು ನನ್ನ ಮಿತ್ರರು" ಎಂದು ಹೇಳಿ ಹಾರಿಸಿಬಿಟ್ಟಿದ್ದನು.

ಇದೊಂದು ಎಲ್ಲರಿಗೂ ವಿಶೇಷದ ಸುದ್ದಿಯಾಯಿತು. "ನಮ್ಮ ಮದುವೆಗೆ ಮದರಾಸಿನಿಂದ ದೊಡ್ಡ ಕಾಣಿಕೆ ಬಂತು!" ಎಂದು ವಧೂ-ವರರಿಗೂ ಹೆಚ್ಚಳವೆನಿಸಿತ್ತು.

ಆ ಸುಂದರರಾಯರು ಯಾರೆಂದು ನಮಗೆ ಗೊತ್ತಾಗಿರುವಂತೆಯೇ ಕೃಷ್ಣನಿಗೂ ಗೊತ್ತಾಗಿತ್ತು ಆ ಮೇಲೆ ಅವನು ಗುಟ್ಟಿನಲ್ಲಿ ಅಣ್ಣನನ್ನು ಕುರಿತು—"ಏನಣ್ಣ ಸುಂದರಿಗೂ ಲಗ್ನಪತ್ರಿಕೆ ಕಳಿಸಿದ್ದಿಯಾ?'' ಎಂದು ಕೇಳಿದ್ದನು

"ಹೌದು, ಕಳಿಸಿದ್ದೇನೆ.''

"ನನಗೆ ಹೇಳಲೇ ಇಲ್ಲ ?"

"ಹೇಳಿದ್ದರೆ ನೀನು ಅವಳಿಗೆ ಕಳಿಸಬೇಡವೆಂದು ಹೇಳುತ್ತಿದ್ದಿ ಅಲ್ಲವೆ?"

"ಹೌದು. ಅವಳು ಫಕ್ಕನೆ ಹೊರಟುಗಿರಟು ಬಂದುಬಿಡುತ್ತಿದ್ದರೆ ಎಷ್ಟು ನಗೆಗೀಡಾಗುತ್ತಿತ್ತೊ!''

"ಒಂದು ವಿಧವಾಗಿ ನಗೆಗೀಡಾಗುತ್ತಿತ್ತೆಂಬುದೂ ನಿಜ. ಅದನ್ನೆಲ್ಲ ಸೈಸಿಕೊಂಡೇನೆಂಬ ಧೈರ್ಯದಿಂದಲೇ ಅವಳಿಗೂ ಒಂದು ಕಾಗದ ಹಾಕಿದ್ದೆ. ಅವಳು ಬರಲಿಕ್ಕಿಲ್ಲ ಎಂಬ ನಂಬುಗೆಯಿಂದಲೇ ನಾನು ಹಾಕಿದ್ದು. ಹಾಗೇ ಆಯಿತು ಅವಳು ಅನರ್ಘವಾದ ಕಾಣಿಕೆಯನ್ನು ಕಳಿಸಿದಳೋ ಇಲ್ಲವೋ! ಅದಕ್ಕಾಗಿ ಅವಳಿಗೆ ನಾವು ತುಂಬಾ ಕೃತಜ್ಞರಾಗಿರಬೇಕಾದದ್ದು ನ್ಯಾಯವೇ ಅಲ್ಲವೆ?''

"ಅದೆಲ್ಲ ಹೌದು. ಅವಳ ಒಳಗುಟ್ಟು ಏನುಂಟೋ ಯಾರಿಗೆ ಗೊತ್ತು ! ಅಂತೂ ಸದ್ಯ ಬಾರದೆ ನಮ್ಮ ಮರ್ಯಾದೆ ಉಳಿಸಿದಳಲ್ಲ. ಅವಳಿಗೆ ಕಾಗದ ಬರೆಯುವಾಗ ನನ್ನ ಅಭಿನಂದನೆಗಳನ್ನೂ ತಿಳಿಸಿಬಿಡಣ್ಣ " ಎಂದು ಕೃಷ್ಣನು ಬಹಿರಂಗದಲ್ಲಿ ಹೇಳಿದರೂ, ತನ್ನೊಳಗೆ— "ಏನು ಕೃತಜ್ಞತೆಯೊ! ಹಣದ ರಾಶಿಯಲ್ಲೇ ಕುಳಿತಿದ್ದಾಳೆ! ಕಳಿಸಿದಳು! ಆದರೆ ಇವನೆಂತಹ ಅಣ್ಣ? ಒಳ್ಳೆಯ ಮದುವೆಮಾಡಿಕೊಂಡು ಸುಖವಾಗಿರುವುದನ್ನು ಬಿಟ್ಟು. ಅವಳ ಸಂಬಂಧವನ್ನೇ ಹಚ್ಚಿಕೊಳ್ಳುತ್ತಿದ್ದಾನಲ್ಲ ? ಏನೋ ! ಉಪದ್ರವಿಲ್ಲದೆ ಲಾಭಮಾತ್ರವಾದರೆ ಸಾಕು ! " ಎಂದುಕೊಂಡನು.

''ನನ್ನ ಹೆಂಡತಿ ಸುಂದರಿ ಕಳುಹಿಸಿದ ಕಾಣಿಕೆ'' ಎಂದು ಸ್ಪಷ್ಟವಾಗಿ ಹೇಳಲು ನನಗೆ ಬಾಯಿ ಬರಲಿಲ್ಲವಲ್ಲ, ಎಂದು ಶೀನು ತನ್ನೊಳಗೆ

ತಾನೇ ಮಿಡುಕಿಕೊಳ್ಳುತ್ತಿದ್ದನು. ಅಪರೋಕ್ಷವಾಗಿ ಕಾಣುವ ಅವಳ ಸೌಜನ್ಯತೆಯಿಂದ ಅವನ ಸುಹೃದಯವು ಕರಗಿ ಕರಗಿ ಹೋಗುತ್ತಿತ್ತು. ತಮ್ಮನ ಲಗ್ನದ ವಿಷಯವನ್ನೂ ಅವಳಿಗೆ ತಿಳಿಸದಿರಲು ಅವನಿಂದಾಗದೆ ಹೋಗಿತ್ತು. "ಪರಂತು ಅವಳು ಬರಲಿಕ್ಕಿಲ್ಲ. ಬಂದರೂ ಸಮಯಾನು ಸಾರವಾಗಿ ನೋಡಿಕೊಳ್ಳೋಣ" ಎಂದುಕೊಂಡು ಅವಳಿಗೆ ಆಮಂತ್ರಣ ಕಳುಹಿಸಿದ್ದನು.

ಮದುವೆಯ ಮರುದಿನ ಸುಂದರಿಯ ಕಾಗದವೊಂದು ಶೀನುವಿಗೆ ಬಂದಿತ್ತು. ಅದರಲ್ಲಿ ಹೀಗೆ ಬರೆದಿದ್ದಳು,

''...............ಕೃಷ್ಣ ವೈದುನನ ವಿವಾಹವೆಂದು ತಿಳಿದು ಬಹಳ ಸಂತೋಷವಾಯಿತು. ರಾಮಾ ಜೋಯಿಸರ ಮಗಳು ಮಲ್ಲಿಕೆಯನ್ನು ನಾನು ಚೆನ್ನಾಗಿ ಬಲ್ಲೆ. ನಾನು ಹಿಂದೆ ರಾಮಾ ಜೋಯಿಸರ ಮನೆಯ ಲ್ಲಿದ್ದಾಗ ಹುಡುಗಿ ಮಲ್ಲಿಕೆಯನ್ನು ನೋಡಿದ್ದೇನೆ. ಒಳ್ಳೆಯ ಹುಡುಗಿ. ಕೃಷ್ಣನಿಗೆ ಸರಿಯಾದ ಜತೆ. ವಧೂವರರಿಗೆ ನನ್ನ ಹೃತ್ಪೂರ್ವಕವಾದ ಆಶೀರ್ವಾದದೊಂದಿಗೆ, ನಿನ್ನೆ ನಾನು ಕಳುಹಿಸಿದ ಸಣ್ಣ ಕಾಣಿಕೆಗಳು ಯಥಾಸಮಯದಲ್ಲಿ ನಿಮಗೆ ಸಿಕ್ಕಿದ್ದೀತು

ನೀವು ನನ್ನನ್ನು ಮರೆಯದೆ ಆಮಂತ್ರಣವನ್ನು ಕಳುಹಿಸಿದ್ದೀರಿ. ನಾನು ಆ ಮದುವೆಗೆ ಬಂದು ನಿಮ್ಮ ಮನಸ್ಸನ್ನು ಕಲಕಲಾರೆ. ಅಂತೆಯೇ ದೂರವಿದ್ದೇ ಹರಸುತ್ತೇನೆ.

ನೀವು ನನ್ನನ್ನು ಕಡೆಗಣಿಸದೆ, ನನ್ನ ಕೋರಿಕೆಯಂತೆ ಕಳುಹಿಸಿದ 'ಕಲಿಯ ಕಲ್ಯಾಣ' ಕಾದಂಬರಿ ಅತ್ಯುತ್ತಮವಾಗಿರುವುದೆಂದು, ಇಲ್ಲಿಯ ವಿದುಷಿಯರ ಅಭಿಪ್ರಾಯವಿದೆ. ಅದನ್ನು ಬೇರೆ ಬೇರೆ ನುರಿತ ಸಾಹಿತಿ ಗಳಿಂದ ತಮಿಳು-ತೆಲಗು-ಹಿಂದಿ ಈ ಮೂರು ಭಾಷೆಗಳಲ್ಲಿ ಬರೆಯಿಸಲು ಏರ್ಪಾಡು ಮಾಡಿದ್ದೇನೆ. ಆದರೆ ಈ ಯುದ್ಧದ ಕಾವು ಮುಗಿಯದೆ ಅಚ್ಚು ಮಾಡಿಸಲು ಸಾಧ್ಯವಾಗಲಾರದೆಂದು, ಪ್ರೆಸ್ಸಿನ ಮಾಲಿಕರು ತಿಳಿ ಸುತ್ತಾರೆ.

ನನಗೆ ಪತಿಸೇವೆಯನ್ನು ಈ ಮೂಲಕವಾಗಿ ಅನುಗ್ರಹಿಸಿದುದರಿಂದ ನಾನು ಬಹಳ ಧನ್ಯಳು.

ನಾನೀಗ ಬರ್ಮಾ ಎವಾಕ್ಯುವೇಶನ್ನಿನ ಸೇವಾದಳದಲ್ಲಿ ಕೆಲಸ ಮಾಡುತ್ತಿದ್ದೇನೆ ಇತಿ —

ನಿಮ್ಮನ್ನೆಂದೂ ಮರೆಯದ ತರಚರಣದಾಸಿ —

ಸುಂದರಿ.”

## ೮

ಸುಗುಣ ಪರಿಮಳೆಯಾದ ಮಲ್ಲಿಕೆಯಿಂದ ಶೀನುವಿನ ಮನೆ ತುಂಬಿತು. ಮನೆ ತುಂಬ ಓಡಾಡುವ ಹುಡುಗಿ ಮಲ್ಲಿಕೆ. ಒಬ್ಬಳಿದ್ದರೆ ಮೂವರು ಹುಡುಗಿಯರಿದ್ದಂತೆ ವಿದ್ಯಾವತಿಯಾಗಿದ್ದರೂ ಗೃಹಶಿಕ್ಷಣ ದಲ್ಲಿ ಒಳ್ಳೇ ಪಳಗಿದವಳು. ದೊಡ್ಡಮ್ಮನಿಗೊಂದು ಬಲವಾದ ಆಧಾರವು ಸಿಕ್ಕಿತ್ತು. ಒಳ್ಳೆ ಅತ್ತೆ-ಸೊಸೆಯರೇ ಸೇರಿಬಿಟ್ಟಿದ್ದರು ಅತ್ತೆ ಸಾಧು ಹೆಂಗುಸು; ಕೆಲಸಗಳ್ಳಿಯಲ್ಲದ ಸೊಸೆ. ಮತ್ತೇಕೆ ಅವರೊಳಗೆ ಜಗಳ ಹುಟ್ಟೀತು? ಅತ್ತೆಗೆ ತುಂಬಾ ವಿರಾಮವನ್ನು ಕೊಡಲಾರಂಭಿಸಿದ್ದಾಳೆ ಸೊಸೆ.

ಮಲ್ಲಿಕೆ ಬೆಳಿಗ್ಗೆ ಅತ್ತೆಗಿಂತ ಮುಂದಾಗಿಯೇ ಎದ್ದು ಬಿಡುತ್ತಿದ್ದಳು ಮನೆಗುಡಿಸುವುದು, ಹೊಸ್ತಿಲು ತೊಳೆದು ರಂಗವಲ್ಲಿ ಹಾಕುವುದು; ಆಕಳಿಗೆ ಅಕ್ಕಚ್ಚು ಇಟ್ಟು ಹಾಲು ಕರೆಯುವುದು, ತೋಟದಲ್ಲಿ ತರಕಾರಿ ಸಸಿಗಳಿಗೆ ನೀರು ಎರೆಯುವುದು, ಅಡುಗೆ ಮಾಡುವುದು, ಬಡಿಸುವುದು, ಎಲ್ಲವೂ ಮಲ್ಲಿಕೆಯೇ.

ಕೃಷ್ಣನು ಬೆಳಿಗ್ಗೆ ಬೇಗನೇ ಬಂಡ ಸಾಲೆಗೆ ಹೋಗಿ ಬಿಡುತ್ತಿದ್ದ. ಮನೆಯಲ್ಲಿ ಹೆಚ್ಚಾಗಿ ಇರುವವನು ಶೀನು ಬೆಳಗ್ಗೆ ಎದ್ದು ತೋಟದ ಕೆಲಸ ನೋಡುವುದು, ಆ ಮೇಲೆ ಸ್ನಾನಮಾಡಿ ದೇವರಪೂಜೆ ಮುಗಿಸಿ ಸಾಹಿತ್ಯಸೇವೆಗೆ ಕೂಡುತ್ತಾನೆ ಶೀನು. ಬೇಸರವಾದಾಗ ಮಲ್ಲಿಕೆಯನ್ನು ನಗಿಸಿ ನಗುತ್ತಾನೆ. ಮಲ್ಲಿಕೆಗೂ ಶೀನೂ ಬಾವ ಎಂದರೆ ಒಂದೇ ಬಾಯಿ. ಅವನ ಮೇಲೆ ಪ್ರತ್ಯೇಕವಾದೊಂದು ಮಮತೆ ಅವಳಿಗೆ. ಆ ಮಮತೆ ಯಲ್ಲಿ ಗೌರವವೂ ವಿಶ್ವಾಸವೂ ಸರಿಸರೀ ಬೆರೆತುಕೊಂಡಿತ್ತು. ಅಷ್ಟೇ

ಸಲಿಗೆಯೂ ಸೇರಿತ್ತು. ಆ ಸಲಿಗೆ ಅಣ್ಣ ತಂಗಿಯರೊಳಗಿರುವಂತಹ ಸರಳವಾದ ಸಲಿಗೆ. ಗಂಡನೊಡನೆ ಬಳಕೆಗಿಂತಲೂ ಶೀನುವೊಡನೆಯೇ ಅವಳ ಬಳಕೆ ಹೆಚ್ಚು. ಶೀನು ನೀರು ಸೇದಿ ಸೇದಿ ಕೊಟ್ಟರೆ ಮಲ್ಲಿಕೆ ಎತ್ತಿಕೊಂಡು ಹೋಗಿ ಗಿಡಕ್ಕೆ ಹೊಯ್ಯುವಳು. ಶೀನು ಸ್ನಾನಮಾಡುವಾಗ ಅವಳು ಸಾಬೂನು ತಂದು ಕೊಡುವಳು. ಬೇಡಬೇಡವೆಂದರೂ ಅವನ ಬಟ್ಟೆಗಳನ್ನು ಒಗೆಯುವಳು. ಅವನ ಪೂಜೆಗೆ ಅವಳು ಸಾಮಗ್ರಿಗಳನ್ನೆಲ್ಲ ಒದಗಿಸಿಕೊಡುವಳು. ಅವನು ಯೋಚನೆ ಮಾಡಿ ಬರೆಯುವಾಗ ಅವಳು ಮಾತಾಡಿಸದೆ ಸುಮ್ಮನಿರುವಳು. ನಕಲು ತೆಗೆಯಬೇಕಾದರೆ ಮಲ್ಲಿಕೆ ಓದಿ ಹೇಳುವಳು, ಶೀನು ಬರೆಯುವನು; ಅಥವಾ ಅವನು ಓದಿ ಹೇಳುವುದನ್ನು ಅವಳು ಬರೆಯುವಳು. ಹೀಗೆ ಒಂದಿಲ್ಲೊಂದು ವಿಧದಲ್ಲಿ ಶೀನೂ ಬಾವನೊಡನೆ ಅವಳು ಕರಗಿ ಬೆರತುಕೊಂಡೇ ಇದ್ದಳು. "ಪಾಪ, ಶೀನು ಏಕಾಂಗಿ!" ಎಂದೋ ಏನೊ! ಅವನ ಮೇಲೆ ಅವಳಿಗೊಂದು ಪ್ರತ್ಯೇಕ ಅಂತಃಕರಣ!

ಆದರೆ ಅವಳ ಈ ಅಂತಃಕರಣವು, ಬರಬರುತ್ತ ಕೃಷ್ಣನ ಕಣ್ಣಿಗೆ ಏನೋ ಒಂದು ತಂತ್ರೀಕರಣದಂತೆ ತೋರತೊಡಗಿತ್ತು! "ನನ್ನ ಹೆಂಡತಿಯೊಡನೆ ಈ ಅಣ್ಣನಿಗೇನು ಇಷ್ಟೊಂದು ಸರಸಾಟ? ಇವಳಾದರೂ ಎಚ್ಚರಿಕೆಯುವಳಾಗಿರಬೇಡವೆ? ದೊಡ್ಡಮ್ಮನಾದರೂ ಅವಳಿಗೆ ತಿಳಿಸಬಾರದೆ?" ಎಂದು ಒಳಗೊಳಗೇ ರೇಗಿಕೊಳ್ಳುತ್ತ ಕೆಲವು ಕಾಲ ದೂಡಿದನು. ಅನಂತರ ಅವನ ರೇಗಾಟವು ತಪ್ಪಿಲ್ಲದ ತಪ್ಪಾಗಿ ದೊಡ್ಡಮ್ಮನ ಮೇಲೆಯೋ, ಮಲ್ಲಿಕೆಯ ಮೇಲೆಯೋ ಎರಗಲಾರಂಭಿಸಿತು. ಮದುವೆಗೆ ಮುನ್ನ ತನ್ನ ಮೇಲೆಂದೂ ಕೋಪಿಸದ ಕೃಷ್ಣನು, ಈಗ ವಿನಾಕಾರಣ ಕೋಪಿಸುವುದನ್ನು ನೋಡಿ ದೊಡ್ಡಮ್ಮನು ಬಲುಚಿಂತಗೊಂಡಳು. ಇದರ ಮೂಲಕಾರಣದ ಸುಳಿವೇ ಆ ಸರಳ ಹೆಂಗುಸಿಗೆ ತಿಳಿಯಲಿಲ್ಲ. ಆದರೆ ಸೂಕ್ಷ್ಮ ಬುದ್ಧಿಯುಳ್ಳವನಾದ ಶೀನುವಿಗೆ ಗೊತ್ತಾಗಿಬಿಟ್ಟಿತು. ಅವನು ಕೃಷ್ಣನನ್ನು ಎಲ್ಲರಿಗಿಂತ ಚೆನ್ನಾಗಿ ಬಲ್ಲವನಲ್ಲವೆ?

ಮದುವೆಯ ಸಮಯದಲ್ಲಿಯೇ ಕೃಷ್ಣನು ಹಣದ ವಿಚಾರವನ್ನೆತ್ತಿ ಕಿಂಚಿತ್ ವೈಮನಸ್ಕನಾದುದು ಆರದ ಕಿಡಿಯಂತಾಗಿತ್ತು. ಅನಂತರ ಮನೆಯ ಖರ್ಚಿಗೆ ಅಣ್ಣನಿಂದ ಒಂದು ಕಾಸೂ ಬೀಳಗೊಳಿಸದಂತೆ,

ಬಹಳ ಜಾಗರೂಕತೆಯಿಂದ ತಾನೇ ಸಾಧಿಸಲಾರಂಭಿಸಿದ್ದನು ಕೃಷ್ಣ. ತನಗೆ ಅಣ್ಣನ ಹಂಗೇಬೇಡ ಎಂಬ ರೀತಿಯಲ್ಲವೇ ಅದು ? ಅಣ್ಣನನ್ನು ಅಲ್ಲಲ್ಲಿ ತಟಸ್ಥಗೊಳಿಸುವ ರೀತಿಯಲ್ಲವೇ ಅದು ? ಶೀನು ಅದನ್ನೇನೂ ಮನಸ್ಸಿಗೇ ಹಚ್ಚಿಕೊಳ್ಳಲಿಲ್ಲ.

ಇನ್ನೊಂದು ಶೀನುವಿನ ಮನಸ್ಸಿಗೆ ನೋವನ್ನುಂಟು ಮಾಡುವ ಕಾರ್ಯವೆಂದರೆ, ಕೃಷ್ಣನು ತಮ್ಮ ಮನೆಯಲ್ಲಿಯೇ ಕಾಳಸಂತೆಯ ರಹಸ್ಯ ವ್ಯಾಪಾರವನ್ನಿಟ್ಟುಕೊಂಡುದು. ಶೀನು ಇದರ ಬಗ್ಗೆ ಆಕ್ಷೇಪವನ್ನೆತ್ತಿದಾಗ "ಅದರ ಗೊಡವೆ ನಿನಗೆ ಬೇಡಣ್ಣ. ಅದು ನನಗೂ ಶೆಟ್ಟರಿಗೂ ಸೇರಿದ ವಿಷಯ ಅವರ ಕೈಕೆಳಗೆ ಕೆಲಸಕ್ಕಿದ್ದ ಮೇಲೆ ಅವರಿಷ್ಟದಂತೆ ವರ್ತಿಸದಿದ್ದರಾಗುತ್ತೆಯೆ?'' ಎಂದಿದ್ದ. ಮತ್ತೆ ಶೀನು ಹೆಚ್ಚಿಗೆ ಮಾತಾಡದೆ ಸುಮ್ಮನಾಗಿ ಬಿಟ್ಟಿದ್ದ

ಇವೆಲ್ಲ ಸೈಸಿಕೊಳ್ಳುವ ವೇದನೆಗಳು. ಆದರೆ ಮಲ್ಲಿಕಾ ತನ್ನೊಡನೆ ಸಲಿಗೆಯಿಂದಿರುವ ಸರಳ ಬಗೆಯನ್ನು ಕೃಷ್ಣನು ವಕ್ರದೃಷ್ಟಿಯಿಂದ ನೋಡುತ್ತಾನಲ್ಲಾ–ಇದು ಶೀನುವಿಗೆ ಸ್ಥೈರಿಸಲಾರದ ವೇದನೆಯಾಯಿತು. ಕೃಷ್ಣನೂ ಬಾಯಿಬಿಟ್ಟು ಹೇಳಲಾರ; ಶೀನುವೂ ಬಾಯಿ ತೆರೆದು ಕೇಳಲಾರ. ಬಹಳ ಜಾಗರೂಕನಾಗಿರಲಾರಂಭಿಸಿದನು ಶೀನು. ಮಲ್ಲಿಕೆಗೆ ತನ್ನ ಬಟ್ಟೆಗಳನ್ನು ಒಗೆಯಲೀಸದೆ. ಉಪಾಯವಾಗಿ ಹೇಳಿ, ತಾನೇ ಒಗೆಯತೊಡಗಿದನು. ಮಲ್ಲಿಕೆಯಾದರೂ ಬಿಡುವಳೆಲ್ಲಿ? ಮಗುವಿನಂತೆ ನಿಷ್ಕಳಂಕೆಯಾದ ಅವಳು, ಯಥಾ ರೀತಿಯಾಗಿಯೇ ಶೀನುವಿನೊಡನೆ ಆಡ-ಮಾಡ ಬರುತ್ತಿದ್ದಳು

ಒಂದು ದಿನ ಸಂಜೆಯಲ್ಲಿ ಕೃಷ್ಣನು ಏನೋ ಕಾಳಸಂತೆಯ ಸರಕನ್ನು ಸ್ಯಾಕಲ್ಲಿನಲ್ಲಿ ಕಟ್ಟಿಕೊಂಡು ಸರ್‍ರೆಂದು ಮನೆಗೆ ಬಂದಾಗ, ಮಲ್ಲಿಕೆ ''ಭಾರತೀ ಭಾಂಡಾರ''ದಲ್ಲಿ ಶೀನುವಿನ ಮುಂದೆ ಕುಳಿತುಕೊಂಡು ಏನೋ ಬರೆಯುತ್ತಿದ್ದಳು. ಕೃಷ್ಣನನ್ನು ನೋಡುತ್ತಲೇ ಶೀನು–- ''ಹೋಗಮ್ಮ, ಅವನಿಗೇನು ಬೇಕೋ ಕೇಳಬಾ'' ಎಂದನು.

ಅವಳು ಕೂಡಲೇ ಎದ್ದು ಬಾರದೆ, ಬರೆಯುವ ವಾಕ್ಯವನ್ನು ಪೂರ್ಣಗೊಳಿಸಿಯೇ ಕೃಷ್ಣನ ಬಳಿಗೆ ಬಂದಳು, ಅಷ್ಟರೊಳಗೆ ಕೃಷ್ಣನ ಮುಖವು ಕೋಪದಿಂದ ಕೆಂಪೇರಿ,—''ಏನೇ, ಗಂಡನಿಗೇನು ಬೇಕೊಂತ

ಕೇಳಬೇಕಾದರೆ ನಿನಗೆ ಇನ್ನೊಬ್ಬರು ಹೇಳಿಕೊಡಬೇಕೆ? ಕಲಿತ ಹುಡುಗಿ ಯುಂತೆ! ಬರಿಮುಡ್ಡಿ!'' ಎಂದು ನುಡಿ ಹೂಟ್ಟಿಸಿ, ಅವಳ ಎಳೆಮೀದು ಚೆಂಗೆನ್ನೆಯ ಮೇಲೆ ಅಂಗೈಯೇರಿಸಿದನು.

''ಅಯ್ಯೋ! ಹಾಗೇನು ಮಾಡಿದೆ ಈ ರೀತಿ ಹೊಡೆಯುಲಿಕ್ಕೆ?'' ಎಂದು ಆರಕ್ತವಾದ ಕೆನ್ನೆಯನ್ನು ತಡವಿಕೊಂಡಳು ಮಲ್ಲಿಕಾ

ಅದು ಶೀನುವಿನ ಹೃದಯಕ್ಕೆ ಏಟು ಬಿದ್ದ ಹಾಗಾಯಿತು. ''ಯಾಕೋ ಕೃಷ್ಣ?—'' ಎಂದು ಅಲ್ಲಿಂದಲೇ ವೇದನೆಯಿಂದ ಕೂಗಿದನು.

''ಮತ್ತೇನಣ್ಣ? ಇಷ್ಟು ದೊಡ್ಡವಳಿಗೆ ಇಷ್ಟು ಸಣ್ಣ ವಿಷಯ ತಿಳಿಯೋದಿಲ್ಲಂದರೆ? ಹೋಗೇ ಒಂದು ಲೋಟ ಬಿಸಿನೀರು ತಾ'' ಎಂದು ಕೃಷ್ಣ ಗರ್ಜಿಸಿದ

''ಇಷ್ಟೊಂದಕ್ಕೆ ಅಷ್ಟು ದೊಡ್ಡ ಸಿಟ್ಟೇಕೊ! ಬಿಸಿನೀರು ತರೋದಿಲ್ಲಾಂತ ನಾನು ಯಾವಾಗಾದರೂ ಅಂದಿದ್ದೇನೆಯೆ? ಏನೋ ಬೇರೆ ಸಿಟ್ಟಿದು!'' ಎನ್ನುತ್ತ ಮಲ್ಲಿಕೆ ಒಳಗೆ ಹೋದಳು

ಕೃಷ್ಣನೂ ಸೈಕಲ್ಲಿನಿಂದ ಮೂಟೆಯನ್ನು ಬಿಚ್ಚಿಕೊಂಡು ಒಳಗೆ ಹೋದನು.

ಕೃಷ್ಣನು ಬಿಸಿನೀರು ಕುಡಿಯುವಾಗ, ಮಲ್ಲಿಕೆಯನ್ನು ನೋಡಿ ಬಿಸಿಯಾದ ಮೋಲ್ದನಿಯಿಂದ–''ಅಲ್ಲ, ಆಗಾಗ ಹತ್ತಾರು ಜನರು ಬಂದು ಹೋಗುವ ಆ ಪುಸ್ತಕದ ಕೊಟ್ಟಿಗೆಯೊಳಗೆ ನಿನಗೇನು ಕೆಲಸ? ಅವನಷ್ಟಕ್ಕೆ ಅವನು ಕಥೆಯೋ ಪದವೋ ಅವನ ವ್ಯಥೆಯಲ್ಲಿರುವಾಗ ನೀನೇಕೆ ಹೋಗಿ ಹೋಗಿ ಅವನಿಗೆ ತೊಂದರೆ ಮಾಡಬೇಕು?—''

''ಅವಕ್ಕೆ ಅಷ್ಟು ಸಿಟ್ಟುಬಂತೆ? ಅವರಿಗೆ ನಾನೇನೂ ತೊಂದರೆ ಮಾಡಿಲ್ಲ. ಒಂದು ಕತೆ ನನ್ನಷ್ಟಕ್ಕೆ ನಾನು ನಕಲುತೆಗೀತಾ ಇದ್ದೆ.''

"ಅದೆಲ್ಲ ನಿನಗೇಕೆ? ಅದಕ್ಕೇ ಹೆಂಗುಸರಿಗೆ ವಿದ್ಯೆ ಕಲಿಸಬಾರದೂ ಅನ್ನೋದು. ನಾಲ್ಕು ಬರೆಹ ಬಂದ ಕೂಡಲೇ ಗಂಡುಸರ ಇದಿರಿದಿರೇ ಕೂತು ತನ್ನ ವಿದ್ಯೇನ ಮೆರಿಸೋದು!"

"ಎಂಥ ಮಾತು? ಹಾಗೇನು ಮಾಡಿದೆ? ಬಾವನಿದಿರು ಕೂತರೆ"

"ಬಾವ!............ ಬಾವ!............" ಎಂದು ಉರುಮಿಕೊಂಡು ಕೃಷ್ಣನು ಹೋಗಿಬಿಟ್ಟ.

ಶೀನುವಿಗೆ ಈ ಮಾತುಗಳೊಂದೂ ಕೇಳಿಸಲೂ ಇಲ್ಲ, ಕಾಣಿಸಲೂ ಇಲ್ಲ; ಭಾಸಮಾತ್ರ ಆಯಿತು; ಅರ್ಥವೂ ಆಯಿತು

ಶೀನು ಈಗಿರುವ ಈ ಏಕಾಂಗೀ ಜೀವನದ ಸುತ್ತುಮುತ್ತಣ ವಾತಾವರಣವು, ಕೃಷ್ಣನಂತಹ ಸರ್ವಸಾಮಾನ್ಯ ಮನೋಭಾವವುಳ್ಳವರಿಗೆ ಸಂದೇಹಕಾರಕವಾದುದೇ ಅಲ್ಲವೆ? ಮಲ್ಲಿಕಾ ತುಂಬಿದ ಸುಂದರಿ. ಮೊತ್ತ ಮೊದಲು ರಾಮಾ ಜೋಯಿಸರು ಶೀನುವಿಗಾಗಿ ಕೇಳಲಿಕ್ಕೆ ಬಂದ ವಧು. ಈಗ ಅವಳು ಕೃಷ್ಣನ ಹೆಂಡತಿಯಾದರೂ ಶೀನುವಿನೊಡನೆ ಹೆಚ್ಚಿನ ಒಳಕೆಯಲ್ಲಿದ್ದಾಳೆ. ಹಗಲೆಲ್ಲಾ ಬಂಡ ಸಾಲೆಯಲ್ಲಿ ಕೆಲಸ ಮಾಡುತ್ತಿರುವ ಕಷ್ಣನಿಗೆ ಇದೊಂದು ಸಂದೇಹವಾದರೆ ಆಶ್ಚರ್ಯವೇನು ?

ಕೃಷ್ಣನಿಗೆ ಮೊದಲಿನಿಂದಲೂ ಅಣ್ಣನ ಮೇಲೆ ಪ್ರೀತಿಯಿತ್ತು, ವಿಶ್ವಾಸವಿತ್ತು, ಗೌರವವಿತ್ತು. ಅಣ್ಣನು ತಕ್ಕ ಹೆಣ್ಣನ್ನು ಕೂಡಿ ಸಂಸಾರ ಸುಖದಲ್ಲಿ ಲೋಲಾಡಬೇಕೆಂದು ಅವನು ಮನಃಪೂರ್ವಕವಾಗಿ ಬಯಸುತ್ತಿದ್ದನು ಅಣ್ಣನ ಮೇಲೆ ಅವನಿಗೆ ಅಷ್ಟು ಪ್ರೀತಿಯಿಲ್ಲದಿದ್ದರೆ, ಹಿಂದೆ ಅಜ್ಞಾತವಾಸದಲ್ಲಿ ಅಡಗಿದ್ದ ಶೀನುವನ್ನು ಅವನು ಅಷ್ಟು ಕಷ್ಟಪಟ್ಟು ಹುಡುಕಿ ಕರೆದುಕೊಂಡು ಬರುತ್ತಿದ್ದನೆ? ಅನಂತರ ಕೂಡಾ "ಅಣ್ಣಾ, ಮದುವೆ ಮಾಡಿಕೋ!" ಎಂದು ಎಷ್ಟು ಸಾರಿ ಒತ್ತಾಯಿಸಿದ್ದಾನೆ ! ಆದರೆ,

ಸರ್ವಸಾಮಾನ್ಯವಾಗಿ ಮದುವೆಯಾಗುವರೆಗೆ ಹೊಂದಿಕೊಂಡಿರುವ ಅಣ್ಣ-ತಮ್ಮಂದಿರು ಮದುವೆಯಾದ ಮೇಲೆ ಏನೋ ಮನಸ್ತಾಪಗಳು ತನ್ನಂತೆ ಹುಟ್ಟಿ, ಅವರು ಬೇರೆ ಬೇರೆಯಾಗುವುದನ್ನು ನಾವು ಕಾಣುತ್ತೇವೆ. ಕೃಷ್ಣನ ಮನಸ್ಸು ಸರ್ವಸಾಮಾನ್ಯ ಮನಸ್ಸು ಶೀನುವಿನ ಮನಸ್ಸು ಆ ಸಾಮಾನ್ಯ ಗೆರೆಯಿಂದ ಮೀರಿ ನಿಂತಿತ್ತು ಅದನ್ನು ಅಳೆದು ನೋಡುವಷ್ಟು ತಾಳ್ಮೆಯಾಗಲೀ, ಪರಿಪಕ್ವತೆಯಾಗಲೀ ಕೃಷ್ಣನಿಗಿಲ್ಲ. ಮದುವೆಯಾದ ಮೇಲೆ ಅವನ ಈ ಬಣ್ಣಗಳು ಬಯಲಿಗೆ ಬರಲಾರಂಭವಾಗಿದ್ದುವು. "ಅಣ್ಣನದೆಲ್ಲ ಒಂದು ಬಗೆಯ ವೇಷ. ಹೊರಗೆ ಸಾತ್ವಿಕನಂತೆ ತೋರಿಸಿಕೊಳ್ಳುವ ಒಂದು ನಟನೆ. ಒಳಗಿಂದೊಳಗೆ ಆ ಸುಂದರಿಯ ಸಂಬಂಧ. ಹೊರಗೆ ಈ ಚೆನ್ನಾಟ ! ಮದುವೆಯೇ ಬೇಡನ್ನುವವನಿಗೆ ಹೆಣ್ಣಿನೊಡನೆ ಚೆನ್ನಾಟವಾಡುವ ಗೊಡವೆಯೇಕೆ ? ಇವಳ

ಗಾದರೂ ಅವನು ಸಿಟ್ಟುಮಾಡಿ ದೂರ ಇರಿಸಬೇಡವೆ? ಎಷ್ಟಾದರೂ ಕವಿ! ಸಾಹಿತಿ! ಇಂತಹರು ಶೃಂಗಾರ ಪ್ರಿಯರಲ್ಲದೆ ಮತ್ತೇನು!" ಎಂದು ಕೃಷ್ಣನ ಮನಸ್ಸು ತೀರ್ಪಿಸಲಾರಂಭಿಸಿತ್ತು !

೬

ಆ ರಾತ್ರಿ ಕೃಷ್ಣನ ಮಲಗುವ ಕೋಣೆಯೊಳಗಿನಿಂದ ಮತ್ತೇನೋ ವಿರಸಧ್ವನಿ ಹೊರಡುವಂತೆ ಕೇಳಿತು. ಮಲ್ಲಿಕೆ ಏನೋ. ಅಳುತ್ತಿರುವ ಶಬ್ದ ! ಶೀನು "ಭಾರತೀ ಭಾಂಡಾರ"ದ ಜಗುಲಿಯಲ್ಲಿ ಮಲಗಿದ್ದ. ಕೃಷ್ಣ-ಮಲ್ಲಿಕೆಯರು ಮನೆಯ ಚಾವಡಿ ಕೋಣೆಯೊಳಗೆ ಮಲಗಿದ್ದರು. ದೊಡ್ಡಮ್ಮ ನಡುಮನೆಯಲ್ಲಿ ಗೊರಕೆಗರೆಯುತ್ತಿದ್ದಳು

ಆ ಶಬ್ದ ಸಂಭವಕ್ಕೆ ತನ್ನ ಕಾರಣವಿರಲೇಬೇಕೆಂದು ಶೀನುವಿಗೆ ತೋರಿತು. ಹೊಂಚಿ ಕೇಳಬೇಕೆಂಬ ಕುತೂಹಲ ಹುಟ್ಟಿತು. ಎತ್ತೆತ್ತಲೂ ಕತ್ತಲೆ ಊರೆಲ್ಲಾ ನಿಃಶಬ್ದ. ಶೀನು ಎದ್ದನು. ನಾಲ್ಕು ಹೆಜ್ಜೆಯಲ್ಲಿರುವ ಚಾವಡಿಗೆ ಬಂದನು. ಸದ್ದಿಲ್ಲದೆ ಆ ಮಲಗಿದ ಮನೆಯ ಬಾಗಿಲಿಗೆ ಕಿವಿಗೊಟ್ಟು ನಿಂತನು.

ಕೃಷ್ಣನ ಕೋಪಮಿಶ್ರಿತ ಮೆಲ್ದನಿ:— "ಸಾಕೆ ಮುಚ್ಚು ಬಾಯಿ ! ಆಗ ಹೊಡೆದರೆ ಈಗ ಅಳುವುದೆ?"

ದುಃಖದಿಂದ ತೇಕಿ ತೇಕಿ ಬರುವ ಮಲ್ಲಿಕೆಯ ಅಳುಮಾತು:— "ನನಗೆ ಆಗ ಯಾಕೆ ಹಾಗೆ ಹೊಡೆದಿರಿ ? ಈ ವರೆಗೂ ಹಾಗೆ ಮಾಡಿಲ್ಲವಲ್ಲ ನೀವು?"

"ಹೊಡೆದರಾದರೂ ಗೊತ್ತಾದೀತಂತ ಹೊಡೆದೆ ಆದರೂ ಯಾಕೆ ಹೊಡೆದದ್ದಂತ ಕೇಳುತ್ತೀಯಲ್ಲ?"

"ಹೊಡೆದರೆ ಹೇಗೆ ಗೊತ್ತಾಗುತ್ತೆ ? ಹೊಡೆಯದೆ ಬಾಯಿಯಿಂದ ಹೇಳಿದರಲ್ಲವೇ ಗೊತ್ತಾಗುತ್ತೆ?"

"ಬಾಯಿಯಿಂದಲೇ ಹೇಳಬೇಕೆ?"

"ಹೇಳಿ ನನಗೊಂದೂ ಗೊತ್ತಾಗಿಲ್ಲ. ಯಾಕೆ ನಿಮಗೆ ಅಷ್ಟು ಸಿಟ್ಟು ಬಂತು ನನ್ನ ಮೇಲೆ?"

"ಅಲ್ಲಾ, ನಿನ್ನಷ್ಟಕ್ಕೆ ನೀನಿರುವುದನ್ನು ಬಿಟ್ಟು ಯಾವಾಗಲೂ ಅಣ್ಣನೊಂದಿಗೆ ನಿನಗೇನೇ ಕೆಲಸ?"

"ಅಷ್ಟೇನಾ? ಇದಕ್ಕೆ ಅಷ್ಟು ಸಿಟ್ಟೆ?"

"ಇನ್ನೂ ಅರ್ಥವಾಗಿಲ್ಲ ನಿನಗೆ! ಬರಿ ಮೂಢೆ! ಅವನು ಒಬ್ಬನೇ ಇದ್ದು ಕಾಲ ಕಳೆಯಬೇಕಂತ, ತನಗೆ ಮದುವೆಯೇ ಬೇಡಂತ, ನಿನ್ನನ್ನು ನನ್ನ ಕೈ ಹಿಡಿಸಿದ್ದಾನೆ ನೀನು ಯಾವಾಗಲೂ ಅವನೊಡನೆ ನಗೆಚೇಷ್ಟೆ ಮಾಡುತ್ತ, ಅವನ ವ್ರತವನ್ನನ್ನು ಯಾಕೆ ಕದಡಿಸಬೇಕು?"

"ಅಯ್ಯೋ! ಮಹಾ ಅನರ್ಥವೇ ಆಗಿದೆ ನಿಮ್ಮ ಮನಸ್ಸಿಗೆ! ರಾಮ ರಾಮ! ಎಲ್ಲಿಂದೆಲ್ಲಿಗೆ ಅರ್ಥ ಮಾಡುತ್ತೀರಿ ನೀವು? ನನಗಿಂತ ಹೆಚ್ಚಾಗಿ ನಿಮಗೇ ತಿಳಿದವರು ನಿಮ್ಮ ಅಣ್ಣ. ಅವರ ಮೇಲೆ ಹೀಗೆಲ್ಲಾ ಹಾಳು ಸಂದೇಹ ತಾಳಬೇಡಿ. ಮಹಾಪಾಪ!"

"ಪಾಪ! ನಿನಗೆ ಗೊತ್ತಿಲ್ಲ ಗಂಡಸರ ಮನಸ್ಸು! ಅದೇ ಹೇಳುತ್ತೇನೆ, ನಿನಗಿಂತ ಹೆಚ್ಚಾಗಿ ನಾನು ಅವನನ್ನು ತಿಳಿದಿದ್ದೇನೆ! ಇನ್ನಾದರೂ ಜಾಗರೂಕಳಾಗಿರು!"

"ಛೀ! ಹಾಗನ್ನಬೇಡಿ! ಬಾವ ನನ್ನೊಡನೆ ಎಷ್ಟು ಸಹಜವಾಗಿದ್ದಾರೆ! ತಂದೆಯ ಹಾಗೆ ಪ್ರೀತಿ ತುಂಬಿಟ್ಟುಕೊಂಡಿದ್ದಾರೆ. ಬಾವ ದೇವರಂತಹರು!"

"ದೇವರೆಲ್ಲ ಅವರವರ ಹೆಂಡತಿಯೊಂದಿಗೇ ಇರುತ್ತಾರೆ. ಇವನು ಮನುಷ್ಯನಂತಹನೇ!"

"ಅಯ್ಯೋ! ಹೀಗೆಲ್ಲ ಹೇಳಬೇಡಿ! ನಾನು ಕೇಳಲಾರೆ!"

"ಗಂಡನು ಹೇಳುವ ಮಾತನ್ನು ನೀನು ಕೇಳುತ್ತೀಯೋ ಇಲ್ಲವೋ?"

"ಒಳ್ಳೇ ಮಾತು ಹೇಳಿದರೆ ಖಂಡಿತ ಕೇಳುತ್ತೇನೆ"

"ಈಗ ನಾನು ಹೇಳಿದ್ದು ಕೆಟ್ಟ ಮಾತೆಂದು ಯಾರಂದಾರು?"

"ತಿಳಿದವರಂದಾರು. ನನ್ನ ಅಂತರಾತ್ಮ ಹೇಳುತ್ತೆ."

"ಓಹೋ!..........ಮಲ್ಲಿಕಾ! ನಾನೊಂದು ಕೇಳುತ್ತೇನೆ. ನಿನ್ನ ತಂದೆ ಕೇಳುತ್ತಲೆ, ಶೀನಣ್ಣ ಒಪ್ಪಿಬಿಡುತ್ತಿದ್ದರೆ, ನೀನು ಸಂತೋಷದಿಂದ ಅವನ ಹೆಂಡತಿಯಾಗುತ್ತಿದ್ದಿಯಷ್ಟೆ?"

"ಆಗುತ್ತಿದ್ದೆ. ನನ್ನ ಹಿತವನ್ನು ಬಯಸುವ ನನ್ನ ಹೆತ್ತವರು ನನ್ನನ್ನು ಯಾರಿಗೆ ಧಾರೆಯೆರೆದು ಕೊಡುತ್ತಾರೋ ಅವರ ಹೆಂಡತಿ ಸಂತೋಷದಿಂದಲೇ ನಾನಾಗುತ್ತಿದ್ದೆ. ಈಗ ಆಗಿಯೂ ಇದ್ದೇನೆ. ಹಾಗಾಗಿದ್ದರೆ, ಈಗ ನಾನು ಅವರೊಂದಿಗೆ ನಡೆದುಕೊಳ್ಳುವಂತೆಯೇ, ನಿಮ್ಮೊಂದಿಗೂ ನಡೆದುಕೊಳ್ಳುತ್ತಿದ್ದೆ!"

"ಹಾಗಾಗಿದ್ದರೆ, ಮಲ್ಲಿಕಾ, ನಾನು ನಿನ್ನನ್ನು ಅಷ್ಟು ಸಮೀಪಕ್ಕೆ ಬರಗೊಡುತ್ತಲೇ ಇದ್ದಿಲ್ಲ! ತಿಳಿಯಿತೆ? ನೀನಾಗಿ ನನ್ನೊಡನೆ ನಗೆಚೇಷ್ಟೆಗೆ ಬಂದರೂ, ಎರಡು ಗದರಿಕೆ ಹಾಕಿ ನಿನ್ನನ್ನು ದೂರ ಸಿಡಿಸುತ್ತಿದ್ದೆ! ಹಾಗೆ ಅವನು ಮಾಡುತ್ತಾನೆಯೆ? ಅದರಿಂದಲೇ ತಿಳಿಯುವುದಿಲ್ಲವೆ? ಅಷ್ಟು ಮನಃಸ್ಥೈರ್ಯವು ಅವನಿಗಿಲ್ಲ! ಮಲ್ಲಿಕಾ! ಅವನು ಒಳ್ಳೆಯವನಾಗಿರಬೇಕಾದರೆ ನೀನೇ ಜಾಗರೂಕಳಾಗಿರಬೇಕು ಅವನೊಂದಿಗೆ ಹೆಚ್ಚು ಸಲಿಗೆಯಾಟ ಬೇಡ ನಿನ್ನಿಂದ ನನ್ನ ಅಣ್ಣನು ಕೆಟ್ಟವನಾಗದಿರಲಿ! ಅವನಾಯಿತು, ಅವನ ಪುಸ್ತಕವಾಯಿತು, ಪುಸ್ತಕದ ವಿ ತ್ರರಾಯಿತು...."

ಆಹಾ! ಎಂತಹ ಸುಡುಮಾತುಗಳು! ಒಂದೊಂದು ಮಾತೂ ಶೀನುವಿನ ಮೃದುಹೃದಯಕ್ಕೆ ಬಿಸಿಬಿಸೀ ಕಾವಿನ ಬರೆಯೇ ಆಗಿತ್ತು! ಮುಂದೆ ಕೇಳಲಾರದಾದನು. ಬಲು ಭಾರವಾದ ಮನಸ್ಸಿನಿಂದ ಕಾಲೆಳೆದುಕೊಂಡು ಹೋಗಿ ತನ್ನ ಹಾಸಿಗೆಯ ಮೇಲೆ ಮಗುಚಿಕೊಂಡನು. ಯೋಚನೆಯ ಬಿರುಗಾಳಿ ನಿದ್ರೆಯನ್ನು ಬಲು ದೂರ ಹೊಡೆದೋಡಿಸಿ ಬಿಟ್ಟಿತ್ತು. ಏನಿದು? ನೆನೆಯದಂತಹ ಪರಿಣಾಮ? ತಮ್ಮನ ಸುಖ ಸಂಸಾರಕ್ಕೆ ಅವನೊಂದು ಗರಳರೂಪನೆ?....... ....ಹಾ! ಇನ್ನು ಶೀನು ಅಲ್ಲಿರಬಹುದೆ? ಬಾರದು! ಅವನಿಂದ ಆ ನವದಂಪತಿಗಳಿಗೆ ಏನು ಪ್ರಯೋಜನ? ತಮ್ಮನು ಶಕ್ತನಾಗಿದ್ದಾನೆ. ಅಣ್ಣನಿಂದ ಅವನಿಗೇನೂ ಆಗಬೇಕಾಗಿಲ್ಲ ಇತ್ತೀಚೆಗೆ ಕೃಷ್ಣನು ಅವನಿಂದ ಯಾವ ಸಹಕಾರ ಕೇಳುವುದನ್ನೂ ಬಿಟ್ಟು ಬಿಟ್ಟಿದ್ದನು. ಶೀನುವಿಗಾದರೂ ಅವನಿಂದ ಏನಾಗಬೇಕಾಗಿದೆ? ಇವರ ಸಾಹಿತ್ಯಸೇವೆ ಎಲ್ಲಿದ್ದರೂ ಸಾಗೀತು........ ಆದರೆ ಹೋಗುವುದೆಲ್ಲಿಗೆ? ಹೇಗೆ ಹೋಗುವುದು? ತಮ್ಮನಿಗೆ ಏನು ಹೇಳಿ ಹೋಗುವುದು? ಕಲಹ ತೆಗೆದು ಹೋದಂತೆ ಹೋಗುವುದು ತರವಲ್ಲ. ಹೇಳದೆ ಕೇಳದೆ ಓಡಿ ಹೋಗುವುದೂ ಸರಿಯಲ್ಲ ನೋಡಿದವರಿಗೆ ಕೇಳಿದವರಿಗೆ ಸಹಜ-ಸಮ್ಮತವಾಗಿ ತೋರುವಂತೆಯೇ ದೂರ ಹೋಗಬೇಕು.

ಯೋಚನೆ ಮುಂದುವರಿದುಕೊಂಡೇ ಹೋಯಿತು. ನಿದ್ರೆಯೋ ಅರೆನಿದ್ರೆಯೋ ಕನಸೋ ನೆನೆಸೋ ಎಲ್ಲವೂ ಯೋಚನೆಯೊಂದಿಗೆ ಸೇರಿ ಕೊಂಡೇ ಹೋಯಿತು. ಯುದ್ಧಕಾಲ! ಸಾಹಿತ್ಯಸೇವೆಗೆ ಸಂಭ್ರಮವಿಲ್ಲದ ವಿಷಮಕಾಲ ! ಅದರಲ್ಲಿಯೂ ಕನ್ನಡ ಸಾಹಿತ್ಯದ ಗಮನವು ಬಹಳ ಕುಂಠಿತವಾಗಿದೆ ! ಕಾಲವು ಹೇಗಿದ್ದರೇನು ? ಸಾಹಿತ್ಯ ಸಂಪತ್ತು ಅವನ ಪಿತ್ರಾರ್ಜಿತ ಸೊತ್ತಿನಂತೆ ಅವನದೇ ಆಗಿದೆ. ಅದನ್ನು ಯಾವಾಗಲೂ ಯಾವ ಕಾಲಕ್ಕೂ ಸಾಧಿಸುತ್ತಿರಬಹುದು. ಮುಖ್ಯವಾಗಿ ಕಾಲೋಚಿತ ವಾದೊಂದು ಕಾರ್ಯವನ್ನು ಕೈಗೊಂಡು ಅವನೀಗ ಹೊರಡಬೇಕು.

ಆಹಾ! ಅದಕ್ಕೇನು ಕೊರತೆ? ಯುದ್ಧಸೇವೆಗೆ ಎಷ್ಟು ಮಂದಿಯಾ ದರೂ ಬೇಕಂತೆ! ಎಂತಹ ಬರೆಹ ಬಾರದ ಮುಕ್ಕನಿಂದ ಹಿಡಿದು ಮಹಾ ವಿದ್ವಾಂಸನವರೆಗೂ ಯುದ್ಧದ ಯಾವುದೊಂದು ಶಾಖೆಯಲ್ಲಿ ಕೆಲಸದ ಕರೆಯುಂಟೇ ಉಂಟು..................ಆದರೆ ಎಲ್ಲಿ ಯುದ್ಧ? ಯಾರಿಗೋ ಸ್ಕರ ಯಾರು ಮಾಡುವ ಯುದ್ಧ ? ಅದಕ್ಕೆ ನಾವೇಕೆ ಸಹಾಯಮಾಡ ಬೇಕು? ಅರ್ಥವತ್ತಾದ ಈ ಧೋರಣೆಯಿಂದಲ್ಲವೇ ಪದವಿಯಲ್ಲಿದ್ದ ನಮ್ಮ ಕಾಂಗ್ರೆಸ್ ಮಂತ್ರಿಗಳು ರಾಜೀನಾಮೆ ಕೊಟ್ಟದ್ದು? ಕೂಡದು ಯುದ್ಧಕ್ಕೆ ಸೇರಲೇ ಕೂಡದು !

ಅದಕ್ಕಿಂತ ದೇಶ ಸಂರಕ್ಷಕವಾದ ಸ್ವಯಂಸೇವಕ ದಳದಲ್ಲಿಯೋ, ಯುದ್ಧಾಹತ ಸಂರಕ್ಷಣಾ ಶಾಖೆಯಲ್ಲಿಯೋ ಸೇರುವುದು ಮೇಲು. ಅರ್ಥಾತ್ 'ದೇಶಸೇವೆ'ಗೇ ಇಳಿದು ಬಿಡಬೇಕು.

ಈ ವಿಷಯದಲ್ಲಿ ಆ ಸುಂದರಿ ಸಫಲೆಯಾಗಿದ್ದಾಳೆ ನಿರ್ಮಲ ಮನಸ್ಸಿನಿಂದ ಜನತಾ ಸೇವೆಗೆ ಇಳಿದು ಬಿಟ್ಟಿದ್ದಾಳೆ. ಪರ್ಯಾಯವಾಗಿ ಪತಿಸೇವೆಯನ್ನೂ ಸಲಿಸುತ್ತಿದ್ದಾಳೆ ಅವಳ ಆ ಬಗೆಯ ತಪಸ್ಸಿಗೆ ಪತಿ ದೇವರು ಏಕೆ ಒಲಿಯಬಾರದು? ಸೀದಾ ಮದರಾಸಿಗೆ ಹೋಗಿ ಅವಳೊಂ ದಿಗೇ ಇದ್ದರೇನು ? ಏನು ? ಲೋಕದಲ್ಲಿ ಎಷ್ಟು ಮಂದಿ ಕುರೂಪಿ ಹೆಂಗುಸರು ಗಂಡನೊಂದಿಗೆ ಸಂಸಾರ ಮಾಡಿಕೊಂಡಿಲ್ಲ ? ಹಲವು ಮಂದಿ ಸುಂದರ ಪುರುಷರು ವಿಕೃತಕಳೆಯ ಹೆಂಡತಿಯೊಂದಿಗೆ ಸರಿಯಾಗಿರುವು ದನ್ನು ಶೀನುವೇ ನೋಡಿದ್ದಾನೆ. ನಾಲ್ಕು ದಿನ ಹೊಂದಿಕೊಂಡಿದ್ದರೆ, ಜನರೆಲ್ಲ ಬಾಯಿಮುಚ್ಚಿಕೊಂಡು ಬಿಡುತ್ತಾರೆ.

ಆ ಸುಂದರಿ ಈಗ ಹೇಗಿದ್ದಾಳೋ?....... ....

ಶೀನುವಿನ ಮನಸ್ಸು ಕೊಂಚ ದೂರ ಸುಂದರಿಯ ಹಿಂದೆಯೇ ಓಡಿತು. ಆದರೆ ಆ ಓಟಕ್ಕೆ ಪುಷ್ಟಿ ದೊರೆಯಲಿಲ್ಲ. ಅದರಲ್ಲಿ ಏನೋ ಒಂದು ಕೊರತೆ ಕಾಣುತ್ತಿತ್ತು............ಹೌದು! ಒಮ್ಮೆ ಬೇಡವೆಂದು ಬಿಟ್ಟು ಬಹಳಕಾಲವಾದ ಮೇಲೆ, ಪುನಃ ಅವಳೊಡನೆ ಸೇರುವುದೆಂದರೆ....

ಬೇಡ ಬೇಡ! ಅಡಿಗಡಿಗೆ ದೇಶಸೇವೆಯೇ ಮುಂದೆದ್ದು ಬರುವು ದೇಕೆ? ಅಹಾ! ಇದಲ್ಲವೇ ಕಾಲೋಚಿತವಾದ ಕರ್ತವ್ಯ?

ಶೀನುವಿಗೆ ಮೊದಲಿನಿಂದ ದೇಶಸೇವಕರ ಮೇಲೆ ತುಂಬ ಅಭಿಮಾನ ವಿತ್ತು, ಅನುತಾಪವಿತ್ತು. ದೇಶಸೇವೆಗೆ ಸಂಬಂಧಪಟ್ಟ ಹಲವು ಸಣ್ಣ ಕಥೆ-ಕವನಗಳನ್ನು ಅವನೂ ಬರೆದಿದ್ದನು. 'ಸ್ವರಾಜ್ಯ' ಮಂತ್ರ ಸಂಚಾ ಲಕರಾದ ಮಹಾತ್ಮಾ ಗಾಂಧಿಯಮೇಲೆ ಅವನಿಗೆ ಅಪಾರ ಭಕ್ತಿ-ವಿಶ್ವಾಸ-ಶ್ರದ್ಧೆಗಳಿದ್ದುವು. ಇಷ್ಟಿದ್ದೂ ಆತನು ವೇಷಭೂಷಣಗಳಲ್ಲಿ ಇನ್ನೂ ಸ್ವದೇಶಾಭಿಮಾನಿಯಾಗಿ ಕಾಣುತ್ತಿರಲಿಲ್ಲ. ಖಾದಿಯನ್ನೇ ಧರಿಸಬೇಕೆಂಬ ಅಚಲವಾದ ಶ್ರದ್ಧೆ ಇನ್ನೂ ಅವನಿಗೆ ಹುಟ್ಟಿರಲಿಲ್ಲ. ಒಮ್ಮೊಮ್ಮೆ ಖಾದಿಯ ಅಂಗಿಯೋ ಬಟ್ಟೆಯೋ ಅವನು ಧರಿಸಿದ್ದುಂಟು. ಹೆಚ್ಚಾಗಿ ಅವನು ಅಗ್ಗದಲ್ಲಿ ಸಿಕ್ಕುವ ಮಿಲ್ಲು ಬಟ್ಟೆಗಳನ್ನೇ ಹಾಕಿಕೊಳ್ಳುತ್ತಿದ್ದ. ಆಕಸ್ಮಾತ್ ಇಂದು ಅವನಿಗೆ ಪ್ರತಿಜ್ಞೆಯೇ ಮಾಡಬೇಕೆಂದು ತೋರಿತು.-- "ಇನ್ನು ಮೇಲೆ ನಾನು ಖಾದಿಯನ್ನೇ ಧರಿಸುವೆನು. ಒಂದು ಕೈರಾಟೆಯನ್ನೂ ಕೊಂಡುಕೊಂಡು ನೂಲಲಿಕ್ಕೂ ಕಲಿಯುವೆನು. ಭಾಷಾ ಸೇವೆಯೊಂದಿಗೆ ಕೈಲಾದಷ್ಟು ದೇಶಸೇವೆಯೇ ನನ್ನಂತಹನಿಗೆ ತಾರಕಕರ್ತವ್ಯ............"

"ದೇಶಭಕ್ತ ಗೋಪಾಲ!"—ಆಕಸ್ಮಾತ್ ಆ ಗೋಪಾಲನ ನೆನಪು ಬಂತು. ಅವನು ಆ ಪ್ರಾಂತದವನೇ. ಪ್ರಸಿದ್ಧ ಜಮೀನುದಾರರಾದ ಮಾಧವರಾಯರ ಮಗ. ಹೆತ್ತವರ ಮಾತನ್ನು ಮೀರಿ, ಅರ್ಧ ವಿದ್ಯೆಯಲ್ಲಿ ಕಾಲೇಜನ್ನು ಬಹಿಷ್ಕರಿಸಿ, ರಾಷ್ಟ್ರೀಯ ಸೇವೆಗೆ ಧುಮುಕಿದ ವೀರಯುವಕ ನವನು. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕದೆ ತಾನು ವಿವಾಹ ಮಾಡಿಕೊಳ್ಳ ಲಾರೆನೆಂದು ಪಣತೊಟ್ಟ ಧೀರಯುವಕನು. ಅವನನ್ನು ಶೀನು ಹಲವು ವರ್ಷಗಳ ಕೆಳಗೆ ಒಂದೆರಡು ಬಾರಿ ಮಾತ್ರವೇ ಕಂಡಿದ್ದ. ಅವನ ಉಜ್ವಲ ಕೀರ್ತಿಯನ್ನು ಯಾವಾಗಲೂ ಕೇಳುತ್ತಿದ್ದನು. ಆತನ ಸ್ಫೂರ್ತಿ

ದಾಸುಕವಾದ ಭಾಷಣ-ಲೇಖನಗಳನ್ನೂ ಓದಿದ್ದನು, ಮೆಚ್ಚಿದ್ದನು. ಅವನು 'ಕಾಯಿದೆ ಭಂಗ'ದ ಅಪರಾಧಕ್ಕೊಳಗಾಗಿ ಎರಡು ಮೂರು ಬಾರಿ ಜೈಲಿಗೆ ಹೋಗಿ ಬಂದಿದ್ದಾನೆ. ಆ ಪ್ರಾಂತವೆಲ್ಲಾ ಗೋಪಾಲನನ್ನೆ ಮುಖಂಡನಾಗಿ ಪರಿಗಣಿಸಿದೆ. ಆದರೆ ಈಗ ಅವನು ಆ ಪ್ರಾಂತದಲ್ಲೇ ಇಲ್ಲ. ಮಹಾತ್ಮಾ ಗಾಂಧಿಯ ದಿವ್ಯ ಮೂರ್ತಿಯನ್ನು ದರ್ಶನ ಮಾಡಿಕೊಂಡು ಬರಬೇಕೆಂದು ಅವನು ಪ್ರವಾಸ ಹೊರಟಿದ್ದಾನಂತೆ ಅವನಿರುತ್ತಿದ್ದರೆ ಶೀನು ಈಗ ಅವನ ಪರಿಚಯವನ್ನು ಬಳೆಸಿಕೊಳ್ಳುತ್ತಿದ್ದ. ಅವನ ಸಹಕಾರಿಯಾಗುತ್ತಿದ್ದ................

ಇದಿಷ್ಟೂ ಯೋಚನೆ ಅವನ ಜಾಗ್ರತ್ಸ್ವಪ್ನ ಸುಷುಪ್ತಾವಸ್ಥೆಯಲ್ಲಿಯೇ ನಡೆಯಿತು. ಮುಂಜಾನೆಯೇ ಎದ್ದು ಬರುತ್ತಿರುವ ಶೀನು, ಇನ್ನೂ ಮಲಗಿರುವುದನ್ನು ನೋಡಿ ಕೃಷ್ಣನು ಅವನ ಬಳಿಗೆ ಬಂದು,— ''ಏನಣ್ಣ? ಇನ್ನೂ ಮಲಗಿದ್ದೀಯಲ್ಲಾ?" ಎಂದು ಅವನ ಮೈಯಲುಗಿಸಿದವನು ತುಸು ಗಾಬರಿಯಿಂದ— "ಓ! ಸೌಖ್ಯವಿಲ್ಲವೆ? ಮೈ ಬಿಸಿಯಿದೆಯಲ್ಲ!" ಎಂದನು.

ಹೌದು. ಶೀನುವಿಗೆ ಕೊಂಚ ಜ್ವರವೇ ಇತ್ತು. ಮೈಯಲ್ಲಿ ಬಲವಿಲ್ಲದಂತಾಗಿತ್ತು. ತಲೆನೋವು ಬೇರೆ.

ಒಡನೆಯೆ ಕೃಷ್ಣನು ಮಲ್ಲಿಕೆಯನ್ನು ಕರೆದು ಬಿಸಿನೀರು ತರಿಸಿ, ಶೀನಣ್ಣನಿಗೆ ಮುಖಮಾರ್ಜನಗೊಳಿಸಿದನು. ಆ ಮೇಲೆ ಮಲ್ಲಿಕೆ ಬಿಸಿ ಬಿಸೀ ಕಾಫಿಯನ್ನು ಮಾಡಿಕೊಂಡು ಬಂದಳು. ಕೃಷ್ಣನೇ ಕುಡಿಸಿದನು. ಮಲ್ಲಿಕೆ ತುಂಬ ಗಾಬರಿಯಾಗಿರುವುದನ್ನು ನೋಡಿ ಶೀನು "ಏನೂ ಹೆದರಿಕೆ ಇಲ್ಲಮ್ಮಾ. ಕೊಂಚ ತಲೆನೋವು. ಅಷ್ಟೇ" ಎಂದನು.

ಕೃಷ್ಣನು "ಅಣ್ಣಾ, ನಾನು ಗೋಗಟ್ಟೆ ಡಾಕ್ಟರ ಹತ್ತಿರ ನಿನ್ನ ಸ್ಥಿತಿಗತಿ ಹೇಳಿ ಔಷಧ ಕಳಿಸುತ್ತೇನೆ. ಮಲ್ಲಿಕಾ, ಅಣ್ಣನಿಗೆ ಔಷಧ ಕೊಟ್ಟು ಹತ್ತಿರವೇ ಇದ್ದು ನೋಡಿಕೊ. ದಾಹವಾದೀತು ಕಾಫಿಯೋ ಗಂಜಿಯೊ ಕೇಳಿದಾಗ ಕೊಂಚ ಕೊಂಚವಾಗಿ ಕೊಡು ತಿಳೀತೆ?" ಎಂದು ಆಣತಿಯಿತ್ತು, ಸ್ಯಾಕಲ್ಲೇರಿಕೊಂಡು ಬಂಡಸಾಲೆಗೆ ಹೋದನು.

ಅತ್ಯಾಲೋಚನೆಯಿಂದ ತಲೆಬಿಸಿಯಾಗಿ ಬಿಟ್ಟರೆ ಒಂದು ತರದ ರೋಗವು ಬಂದ ಹಾಗೇ ಆಗುವುದಿಲ್ಲವೆ? ಅಂತಹುದೊಂದು ಜಡಜ್ವರವೇ

ಶೀನುವಿಗೆ ಬಂದಿತ್ತು. ಏನೂ ಪ್ರಮಾದ ಕಾಯಿಲೆಯಲ್ಲ, ಆದರೂ ಸುಮಾರು ಒಂದು ವಾರದವರೆಗೆ ಶೀನುವನ್ನು ಹೊರಗೆ ಹೋಗಗೊಡಲಿಲ್ಲ—ಆ ಕಾಯಿಲೆ. ತೀರ ಮಲಗಿಸಲೂ ಇಲ್ಲ. ಅಲ್ಲಿಯೇ ಕುಳಿತೂ, ಅಡ್ಡಾಗಿಯೂ, ಮಲಗಿಯೂ, ತಿರುಗಾಡಿಯೂ, ಮಹಾತ್ಮಾಗಾಂಧಿಯ ಚರಿತ್ರೆಯನ್ನು ಓದುತ್ತಲೂ, ಆ ಕಾಯಿಲೆಯನ್ನು ವಾಸಿಮಾಡಿಸಿಕೊಂಡುದಾಯಿತು. ವಾಸಿಯಾಗುವಾಗ ಮನಸ್ಸೂ ತುಂಬ ಹಗುರಾಯಿತು. ನಿಶ್ಚಯವು ಬಲಿಯಿತು. ಮೊದಲಿನಂತೆ ಆರೋಗ್ಯವಾಗುತ್ತಲೇ ತಂಗಿ ಗೌರಿಯನ್ನು ನೋಡಿಕೊಂಡು ಬರುತ್ತೇನೆಂದು, ಹೇಳಿ ಮಂಗಳೂರಿಗೆ ಹೊರಟು ಹೋದನು.

ಮರುದಿನ ಹಿಂದಿರುಗಿ ಬರುವಾಗ ಶೀನು ಇನ್ನಷ್ಟು ಪ್ರಫುಲ್ಲವದನನಾಗಿದ್ದನು. ಅಚ್ಚ ಶುಭ್ರ ಖಾದೀ ಭೂಷಣದಿಂದ ಗಾಂಧೀ ಟೋಪಿಯಿಂದ ಹೊಸಬನಾಗಿ ಕಂಗೊಳಿಸುತ್ತಿದ್ದನು.

ಈ ಹೊಸ ವೇಷವನ್ನು ನೋಡಿ ಮಲ್ಲಿಕೆ— " ಇದೇನು ಬಾವಾ ! ಅಕಸ್ಮಾತ್ತಾಗಿ ಗಾಂಧೀ ಭಕ್ತರಾದಿರಾ?'' ಎಂದಳು ಅರಳ್ಮೊಗದಿಂದ.

ಶೀನು ನಗುತ್ತ "ಹೌದಮ್ಮ. ಇದಕ್ಕಿಂತ ದೊಡ್ಡ ಪುಣ್ಯ ಕಾರ್ಯ ಬೇರೊಂದುಂಟೆ?" ಎಂದ.

## ೧೦

ಗೋಗಟ್ಟೆ ಪೇಟೆಯಲ್ಲಿ ಸಣ್ಣದೊಂದು 'ರೀಡಿಂಗ್ ರೂಂ' ಇತ್ತು. ಆಗಾಗ ಸಂಜೆಯಲ್ಲಿ ಶೀನು ಅಲ್ಲಿಗೆ ಹೋಗಿ ಕೊಂಚ ಹೊತ್ತು ಕುಳಿತುಕೊಳ್ಳುವ ಕ್ರಮವಿತ್ತು. ಈ ದಿನ ಮುಂಜಾನೆ ಬಂದ ಪತ್ರಿಕೆಯಲ್ಲಿ, ಮಹಾತ್ಮಾ ಗಾಂಧಿಯವರ ಮುಖ್ಯ ವಾಕ್ಯವೇನೋ ಬಂದಿರುವುದೆಂದು, ಊರವರು ಕುತೂಹಲದಿಂದ ಮಾತಾಡುವುದನ್ನು ಶೀನು ಕೇಳಿದನು. ಅದನ್ನು ತಿಳಿಯುವ ಕುತೂಹಲದಿಂದ ಅವನು ಸಂಜೆಯ ವೇಳೆಯಲ್ಲಿ ಅಲ್ಲಿಗೆ ಹೊರಟನು.

ಕಿರುಗಟ್ಟೆಯು ಅವನ ಮನೆಯಿಂದ ಗೋಗಟ್ಟೆ ಪೇಟೆ ಒಂದೂವರೆ ಮೈಲು ಅಂತರದಲ್ಲಿತ್ತು. ಶೀನು ಯೋಚನೆ ಮಾಡುತ್ತಾ ನಡೆಯುತ್ತಿ

ದ್ದನು. ದೇಶಸೇವೆಗೆ ಇಳಿದು ಬಿಡುವುದೆಂದೇನೋ ನಿಶ್ಚಯ ಮಾಡಿಯಾಯಿತು. ಯಾವರೀತಿಯಾಗಿಳಿಯುವುದು ? ಯಾರ ಮುಖಾಂತರವಾಗಿ ಪ್ರವೇಶ ಮಾಡುವುದು ? ಇದು ಇನ್ನೂ ಅವನಿಗೆ ಗೊತ್ತಾಗಿಲ್ಲ. ಅದನ್ನೆ ನೆನೆದುಕೊಂಡು, ಏನೇನೋ ಕಲ್ಪಿಸಿಕೊಳ್ಳುತ್ತಾ, ಅವನು ನಡೆಯುತ್ತಿದ್ದಾಗ, ಬೀದಿಯಲ್ಲಿ ಹೋಗಿ ಬರುವ ಅವನ ಪರಿಚಿತರು ಕೆಲವರು ಅವನನ್ನು ಸಂಧಿಸಿ ಅಗಲುತ್ತಿದ್ದರು. ಅವನ ಹೊಸ ಖಾದೀ ಭೂಷಣವನ್ನು ನೋಡಿ ಕೆಲವರು ಬೆರಗಾಗುತ್ತಿದ್ದರು. ಕೆಲವರು ಏನೋ ಕೇಳಿದರು. ಇವನು ಏನೋ ಹೇಳಿದ, ರೀಡಿಂಗ್ ರೂಂ ಸಮೀಪಿಸಿತು. ಅಲ್ಲಿಗೆ ತಲುಪುವಾಗ ಕೃಷ್ಣನು ಕೆಲಸ ಮಾಡುವ ಬಂಡ ಸಾಲೆಯ ಮುಂದೆಯೇ ಹಾದು ಹೋಗಬೇಕಾಗಿತ್ತು. ಶೀನುವನ್ನು ನೋಡಿ ಅಂಗಡಿಯಲ್ಲಿ ಕುಳಿತಿದ್ದ ಕೋಟಿ ಶೆಟ್ಟರು,—"ಓಹೋಹೋ! ಇದು ಯಾರೋ ಏನೋ ಅಂದುಕೊಂಡಿದ್ದೆ. ಏನು ಶ್ರೀನಿವಾಸರಾಯರೆ! ಒಮ್ಮೆಗೇ ಗಾಂಧೀ ಭಕ್ತರಾಗಿಬಿಟ್ಟಿರಾ? ಈ ಗೋಪಾಲರಾಯರ ಗಾಳಿ ನಿಮಗೂ ಸೋಂಕಿಬಿಟ್ಟಿತೇನು?" ಎಂದು ದಪ್ಪದನಿಯಿಂದ ಕೂಗಿದರು.

ಆ ಕಡೆಯ ಹೆಸರನ್ನು ಕೇಳಿ, ಶೀನು ಆಶ್ಚರ್ಯ ಬಿಡುಗಂಗಳಿಂದ ನೋಡಿದಾಗ, ಅಂಗಡಿಯ ಮುಂದೆ ಬೆಂಚಿಯಲ್ಲಿ ಕುಳಿತಿರುವ ತೇಜಸ್ವೀ ಯುವಕನೇ ಗೋಪಾಲರಾಯನೆಂದು ಗುರುತು ಹಿಡಿದನು.

ಒಮ್ಮೆಗೇ 'ಹುಡುಕುವ ಬಳ್ಳಿ ಕಾಲ್ತೊಡಕಿದಂತಾ'ಯಿತು ಅವನಿಗೆ. ಅಂಗಡಿಯ ಕಡೆಗೇ ತಿರುಗಿದನು ಮುಗುಳ್ನಗುವನ್ನು ಸೂಸುತ್ತ.

ಆಗ ಶೆಟ್ಟರು ಮತ್ತು ಹೇಳಲಾರಂಭಿಸಿದರು:— "ಗೋಪಾಲರಾಯರು ಈ ದಿನ ತಾನೇ ಅಪರೂಪವಾಗಿ ಊರಿಗೆ ಬಂದಿದ್ದಾರೆ. ನೀವೂ ಅಪರೂಪವಾಗಿ ಈ ದಿನ ಖಾದೀ ವೇಷದಲ್ಲಿ ಬಂದಿದ್ದೀರಿ! ಒಳ್ಳೇ ಮೇಳ! ಹಃ! ಹಃ!" ಎಂದು ನಕ್ಕರು ಶೆಟ್ಟರು.

ಅಷ್ಟರಲ್ಲಿ ಶೀನು ಬಳಿಗೆ ಬಂದು ಬಿಟ್ಟನು. ಗೋಪಾಲನು ನಗುನಗುತ್ತ ಶೀನುವಿಗೆ ಕೈಮುಗಿದು,— "ನಮಸ್ಕಾರ ಬನ್ನಿ ಬನ್ನಿ. ನಿಮ್ಮ ಹೆಸರು ತಿಳಿಯಿತು. 'ಕನ್ನಡ ಗೆಳೆಯ' ಶ್ರೀನಿವಾಸರಾಯರಲ್ಲವೇ ನೀವು?" ಎಂದು ಪ್ರಶ್ನೆ ಮಾಡಿದನು.

ಶೀನು ಅವನಿಗೆ ಪ್ರತಿವಂದನೆ ಮಾಡುತ್ತ ಬೆಂಚಿಯಲ್ಲಿ ಅವನ ಪಕ್ಕವೇ ಕುಳಿತು— "ನಿಮ್ಮ ಊಹೆ ನಿಜ................" ಎನ್ನುತ್ತಿರಲು, ಕೂಡಲೇ ದುಡುಕುಗಾರ ಗೋಪಾಲ— "ಸರಿ, ಸರಿ. ಶೀನೂ! ನಮ್ಮೊಳಗೆ ಬಹುವಚನ ಬೇಡ. ನೀನೂ ನಾನು ಸಮವಯಸ್ಕರಲ್ಲವೆ? ಒಂದೇ ಊರವರು ಕೂಡಾ!" ಎಂದನು ಒಳ್ಳೇ ಸಲಿಗೆಯಿಂದ

ಶೀನುವಿಗೆ ಆಶ್ಚರ್ಯ!

ಗೋಪಾಲನ ಮಾತಿನ ಕೊನೆಯನ್ನು ಶೆಟ್ಟರು ಎಳೆದುಕೊಂಡು,— "ಹೌದು ಹೌದು! ಈಗಿಬ್ಬರೂ ಒಂದೇ. ಖಾದೀಧಾರಿಗಳೂ ಆಗಿರುತ್ತೀರಿ. ಗೋಪಾಲರಾಯರಿಗೆ ದೇಶಸೇವೆಯ ಹುಚ್ಚು, ಶ್ರೀನಿವಾಸರಾಯರಿಗೆ ಭಾಷಾಸೇವೆಯ ಹುಚ್ಚು! ಹಃ! ಹಃ! ಹಃ!—" ಎಂದು ಶೆಟ್ಟರು ಮತ್ತಷ್ಟು ನಕ್ಕರು.

"ನಿಮ್ಮಂಥವರಿಗೆ ನಮ್ಮಂಥವರೆಲ್ಲ ಹುಚ್ಚರಾಗಿ ತೋರಿದರೆ ಏನಾಶ್ಚರ್ಯ ಶೆಟ್ಟರೆ! ಈ ಹುಚ್ಚರ ಬಳಿಯಲ್ಲಿ ನೀವು ಬಹಳ ಎಚ್ಚರವಾಗಿದ್ದೀರೆಂದಾಯಿತು "— ಎಂದನು ಗೋಪಾಲ.

"ಎಚ್ಚರಕ್ಕೇನು ಬಂತು ? ನಮಗೂ ನಿಮ್ಮ ಹುಚ್ಚಿಗೂ ಏನೇನೂ ಸಂಬಂಧವಿಲ್ಲ. ನಾವಾಯಿತು, ನಮ್ಮ ವ್ಯಾಪಾರವಾಯಿತು!'' ಎಂದಂದು ಶೆಟ್ಟರು ಒಂದು ನೋಟುಗಳ ಕಟ್ಟನ್ನೆತ್ತಿಕೊಂಡು, ಗಂಭೀರವಾಗಿ ಎಣಿಕೆ ಮಾಡತೊಡಗಿದರು.

ಈಗ ತಾನೆ ಶೀನುವಿಗೆ ಮಾತಾಡಲು ಎಡೆಸಿಕ್ಕಿತು. ಗೋಪಾಲನು ಗೆಳೆತನದ ಸಲಿಗೆಯನ್ನೆ ತೋರಿಸಿದುದಕ್ಕೆ ಹೊಂದಿಕೆಯಾಗುವಂತೆ,— "ಅದಿರಲಿ ಗೋಪಾಲ, ನೀನು ಉತ್ತರ ಭಾರತದ ಕಡೆಗೆ ಪ್ರವಾಸ ಹೊರಟಿದ್ದೀ ಎಂದು ವರ್ತಮಾನ ಕೇಳಿದ್ದೆ ಈಗ ಏಳೆಂಟು ದಿನಗಳಿಂದಲೂ, ನಿನ್ನನ್ನು ನೋಡಬೇಕೆಂಬ ಹಂಬಲ ನನಗೆ ತುಂಬಾ ಉದ್ಭವಿಸಿದೆ ಅದಕ್ಕೆ ಸರಿಯಾಗಿಯೇ ಇಂದು ನಿನ್ನ ಸಂದರ್ಶನವಾಯಿತು "

"ಎಲ! ಹಾಗೇನು? ಆಶ್ಚರ್ಯವೇ! ನನಗೂ ನಿನಗೂ ಪೂರ್ವ ಪರಿಚಯ ಕೂಡ ಅಷ್ಟಿಲ್ಲ! ಶೀನೂ, ಹಾಗಾದರೆ ಖಂಡಿತವಾಗಿಯೂ ನಮ್ಮೊಳಗೆ ಪೂರ್ವ ಜನ್ಮ ಸಂಬಂಧ ಇದ್ದೇ ಇದೆ! ಅದೇಕೆ ನನ್ನನ್ನು ಕಾಣಬೇಕೆಂದು ನಿನಗೆ ತೋರಿದ್ದು?'' ಎಂದು ಗೋಪಾಲ ಕೇಳಿದ.

"ಅದನ್ನು ಆ ಮೇಲೆ ಹೇಳುವೆನು. ನಿನ್ನ ಉತ್ತರ ಭಾರತದ ಪ್ರವಾಸದ ವೃತ್ತಾಂತವನ್ನು ಮೊದಲು ಹೇಳು ಕೇಳೋಣ.''

"ಅದರಲ್ಲಿ ಹೊಸ ವಿಶೇಷವೇನಿದೆ? ನೀನು ಪೇಪರ್ ಓದಿ ತಿಳಿದು ಕೊಳ್ಳುವುದಿಲ್ಲವೆ?"

"ಪೇಪರಿನ ಕತೆ ಬಿಡಯ್ಯ ಕೆಲವು ಬಾರಿ ಸುಳ್ಳು ಜೊಳ್ಳು ಹಾಕಿ ಬಿಡುತ್ತಾರೆ ಪೇಪರಿನಲ್ಲಿ. ಕಣ್ಣಾರೆ ಕಂಡು, ಕಿವಿಯಾರೆ ಕೇಳಿದ ವಿಷಯ ಬಾಯಾರೆ ಹೇಳುವುದಲ್ಲವೇ ಅಧಿಕವಾಸ್ತವ? ನೀನು ಮಹಾತ್ಮಾ ಗಾಂಧಿ ಪಾವವನ್ನು ಸಂದರ್ಶನ ಮಾಡಿದೆಯಾ? ಅವರ ಪಾದಧೂಳಿ ನಿನ್ನ ಶಿರಸ್ಸಿನಲ್ಲಿದೆಯೆ? ಅವರ ಬೋಧಾಮೃತವನ್ನು ನೀನು ಕೇಳಿರುವಿಯಾ?"

"ದೇವರ ದಯೆಯಿಂದ ಅಷ್ಟೊಂದು ಭಾಗ್ಯವೇನೋ ನನಗೆ ಪ್ರಾಪ್ತವಾಯಿತು ಶೀನು ಮಹಾತ್ಮರ ದಿವ್ಯಮೂರ್ತಿಯ ಸಂದರ್ಶನ ದಿಂದ ನನ್ನ ಕಣ್ಣುಗಳೂ ಒಂದಿಷ್ಟು ಪಾವನಗೊಂಡವು''

"ಆಹಾ! ನಿನ್ನ ತಲೆಯಲ್ಲಿ ಅವರ ಪಾದಧೂಳಿ ಇದೆ ಎಂದಾಯಿತು!" ಎಂದು ಶೀನು ಗೋಪಾಲನ ತಲೆಯನ್ನು ತಡವಿ ತನ್ನ ಕಣ್ಣಿಗೆ ಒತ್ತಿ ಕೊಂಡು—"ಗೋಪಾಲ! ಅಲ್ಲಿಯ ಸ್ಥಿತಿಗತಿಗಳೆಲ್ಲಾ ಹೇಗಿವೆ? ಭಾರತದ ಬಿಡುಗಡೆಗೆ ಇನ್ನೆಷ್ಟು ಕಾಲಬೇಕಾದೀತು?" ಎಂದು ಶೀನು ಪ್ರಶ್ನೆಗಳ ಮೇಲೆ ಪ್ರಶ್ನೆಮಾಡಿದನು.

ಶೀನುವಿನ ಹೊಸ ವೇಷ, ಹೊಸ ಭಾಷೆ, ಹೊಸ ವರ್ತನೆಗಳನ್ನು ಅಲ್ಲಿರುವ ಕೆಲವರು ಕೌತುಕದಿಂದ ನೋಡುತ್ತಿರಲು, ಅವನ ಮಾತಿಗೆ ಗೋಪಾಲನು ಉತ್ತರಿಸುವುದಕ್ಕೆ ಮೊದಲೇ, ಶೆಟ್ಟರು ಪುನಃ ಬಾಯಿ ತೂರಿಸಿದರು:— "ಯಾವುದಕ್ಕೆ ಎಷ್ಟು ಕಾಲ? ಸ್ವಾತಂತ್ರ್ಯಕ್ಕೋ? ಅಯ್ಯೋ! ಹುಚ್ಚರೆ! ಅದಕ್ಕೆ ಬಹಳ ಬಹಳ ಬಹಳ ವರ್ಷವಾದೀತಯ್ಯಾ ಬಹಾಳ ವರ್ಷ! ನಾವು ಮೂರು ಜನ್ಮವೆತ್ತಿ ಬಂದರೂ ಸ್ವರಾಜ್ಯ ನೋಡ ಲಾರೆವು! ಅಲ್ಲಯ್ಯ ಗೋಪಾಲರಾಯರೆ! ಈ ದೇಶಸೇವೆ–ಸ್ವಾತಂತ್ರ್ಯ ಅಂತೆಲ್ಲಾ ನೀವು ಹಾರಾಡ್ತೀರಲ್ಲಾ? ಎಲ್ಲಾ ಆ ಗಾಂಧಿಯ ಮೋಹನ ಮಂತ್ರಕ್ಕೆ ಮರುಳಾಗಿ ಹಾರಾಡ್ತೀರಿ! ಗಾಂಧೀ ಗಾಂಧೀ ಅಂದರ ಎಲ್ಲರೂ ಮಹಾತ್ಮಾ ಗಾಂಧಿಯಾದಾರೆ? ಆ ಗಾಂಧಿಗೆ ಸಹಾ ತಿಳುವಳಿಕೆ

ಸಾಲದಯ್ಯಾ ! ಸುಮ್ಮಸುಮ್ಮನೇ ದೇಶಮಾತೆ ದೇಶಮಾತೇ ಅಂತ ಮನಸ್ಸಿನ ರೂಪಾ ಕಟ್ಟಿಕೊಂಡು, ವ್ಯರ್ಥವಾಗಿ ಕಷ್ಟಾನಷ್ಟಾ ಅನುಭವಿಸಿಕೊಂಡು ಸಾಯ್ತಾರೆ ನಮ್ಮ ಜನರು. ಒಂದು ಕುರಿ ಹೊಂಡಕ್ಕೆ ಬಿದ್ದರೆ ಎಲ್ಲಾ ಕುರಿಗಳೂ ಅದೇ ಹೊಂಡಕ್ಕೆ ಬೀಳುವ ಹಾಗೆ! ಈಗ ನೀವೆ ಇದ್ದೀರಲ್ಲ ಗೋಪಾಲರಾಯರೆ, ದೇವರ ದಯದಿಂದ ನಿಮಗೇನೂ ಕಡಮೆಯಿಲ್ಲ; ಈ ಪ್ರಾಯದಲ್ಲಿ ನೀವು ಮದುವೇ ಮಾಡಿಕೊಂಡು, ಚೆಲೋದೊಂದು ಉದ್ಯೋಗವನ್ನು ನೋಡಿಕೊಂಡು ನೆಮ್ಮದಿಯಾಗಿರುವುದನ್ನು ಬಿಟ್ಟು, ದೇಶಸೇವೆ ಅಂತ ಊರೂರು ಅಲೆದಾಡುತ್ತ, ದೊಂಡೆ ಹರಿಯುವ ಹಾಗೆ ಲೆಕ್ಚರು ಕೊಟ್ಟು ಎರಡು ಮೂರು ಬಾರಿ ಜೈಲಿಗೆ ಹೋಗಿ ಬಂದಿರಲ್ಲಾ, ಏನು ಪುರುಷಾರ್ಥವಾಯಿತು ಹೇಳಿ?" ಎಂದು ಶೆಟ್ಟರು ತಮ್ಮ ಮೀಸೆಯ ಮೇಲೆಯೂ, ಡೊಳ್ಳು ಹೊಟ್ಟೆಯ ಮೇಲೆಯೂ ಕೈಯಾಡಿಸಿಕೊಳ್ಳುತ್ತ, ಶೀನೂ ಗೋಪಾಲರು ಮೇಲೆ ಗೆಲುವಿನ ನೋಟವನ್ನು ಬೀರಿದರು.

ಅವರು ತಾವು ಒಳ್ಳೆಯ ಅನುಭವಶಾಲಿಗಳೆಂಬ ಧೋರಣೆಯಲ್ಲಿ ಮಾಡಿದ ಆ ವಿತಂಡ ವಾಕ್ಯಗಳನ್ನು ಕೇಳಿ ಶೀನು ಗೋಪಾಲರು ಹೃದಯದೊಳಗೆ ತುಂಬಾ ತಳಮಳಿಸಿದರು. ಗೋಪಾಲನ ತುಟಿಗಳಲ್ಲಿ ಅವಹೇಳನೆಯ ನಗುವೊಂದು ಸುಳಿಯಿತು ಅವರು ನಿಲ್ಲಿಸಿದ ಮೇಲೆ ಅವನೆಂದ— "ಆಹಾ! ಶೆಟ್ಟರೆ! ತುಂಬಾ ಆಶ್ಚರ್ಯಕರವಾಗಿಯೇ ಇದೆ ನಿಮ್ಮ ಉದ್ದ ಮಾತು! ಸ್ವಾತಂತ್ರ್ಯದ ಹೆಬ್ಬಾಗಿಲಲ್ಲಿ, ಇಡಿಯ ಭಾರತವೇ ತೆರೆಯುವ ಸಮಯವನ್ನು ಕಾಯುತ್ತ, ಉತ್ಕಟಾವೇಶದಿಂದ ತುಂಬಿ ನಿಂತಿರುವ ಈ ಸಮಯದಲ್ಲಿ, ಈ ಪರಿಪಕ್ವ ಕಾಲದಲ್ಲಿ, ನಿಮ್ಮಂತಹ ತಿಳಿದ ವಯೋವೃದ್ಧರೇ ಹೀಗೆ ಮಾತಾಡುವುದೆಂದರೆ—ಏನು ಆಶ್ಚರ್ಯ ! ಆಹಾ!"

ಶೆಟ್ಟರು ಹಾರಿಕೆಯ ನಗುವನ್ನು ನಗುತ್ತ— "ಹೌದೌದು ! ಅದು ಸ್ವಾತಂತ್ರ್ಯದ ಹೆಬ್ಬಾಗಿಲಲ್ಲ ಸ್ವಾಮಿ, ಜೈಲಿನ ಹೆಬ್ಬಾಗಿಲು ! ಹಃ ! ಹಃ ! ಹಃ ! ''

ಆಗ ಅಲ್ಲಿಗೆ ವ್ಯಾಪಾರಕ್ಕಾಗಿ ಕೆಲವರು ಬಂದಿದ್ದರು. ಬೀದಿಯಲ್ಲಿ ಹೋಗುತ್ತಿದ್ದ ಕೆಲವರು, ಈ ಅಂಗಡಿಯಲ್ಲಿ ಶುಭ್ರ ಖಾದೀಧಾರಿಗಳಿಬ್ಬರು ಕುಳಿತು ಮಾತಾಡುವುದನ್ನು ಕೇಳಿ ಕುತೂಹಲದಿಂದ ನಿಂತಿದ್ದರು.

ಶೆಟ್ಟರ ಮಾತು ಕೇಳಿ ಅಲ್ಲಿ ಇದ್ದ ಧಾಂಡಿಗ ಮೊಗವೀರನೊಬ್ಬನು— "ಈ ಶೆಟ್ಟರಿಗೇನು ಗೊತ್ತಿದೆ ದುಡ್ಡು ಲೆಕ್ಕ ಮಾಡುವುದೊಂದಲ್ಲದೆ!'' ಎಂದು ಬಿಗುನುಡಿಯಿಂದ ಹೇಳಿದನು.

ಆಗ ಎಡೆಯಲ್ಲಿದ್ದ ಇನ್ನೊಬ್ಬ—"ಅಲ್ಲಲ್ಲ ! ಜೈಲಿನ ಅನುಭವವೂ ತುಂಬ ಉಳ್ಳವರೂ ಅಂತ ಕಾಣುತ್ತೆ. ಇಲ್ಲದಿದ್ದರೆ ಜೈಲಿನ ಹೆಬ್ಬಾಗಿಲು ಅಂತ ಹೇಳಿಯಾರೆ?" ಎಂದು ದನಿಗೂಡಿಸಿದನು

ಶೆಟ್ಟರು ಕ್ರೋಧ ಘೂರ್ಣಿತ ಸ್ವರದಿಂದ— "ಜೈಲಿನ ಹೆಬ್ಬಾಗಿಲು ಅನ್ನಲಿಕ್ಕೆ ಜೈಲಿಗೇ ಹೋಗಬೇಕೇನು? ಅದರಲ್ಲಿ ಈ ಗೋಪಾಲರಾಯರು ತುಂಬ ಅನುಭವಶಾಲಿಗಳು. ಇವರೊಂದಿಗೆ ಅದನ್ನೂ ಕಲಿತುಕೊಳ್ಳಲಿಕ್ಕೀಗ ಶ್ರೀನಿವಾಸರಾಯರೂ ಸೇರಿದ ಹಾಗಿದೆ ಸರಿಯಾದ ಜೋಡಿ ! ಹಃ! ಹಃ! ಹಃ!—" ಎಂದು ನಗುವಿನಲ್ಲಿ ಕೊನೆಗೊಳಿಸಿದರು.

ಗೋಪಾಲನಿಂದ— "ಓಯ್ ಶೆಟ್ಟರೆ ಸುಮ್ಮನಿರಿನ್ನು. ನಿಮ್ಮ ಕೆಲಸವಾಯಿತು ನೀವಾಯಿತು. ಏನಾದರೂ ಮಾತಾಡಿ ಬಾಯಿ ಹಾಳು ಮಾಡಿಕೊಂಡು ಏನು ಫಲ?"

"ಎಲ! ಇಷ್ಟು ಸಣ್ಣ ಪಿಳ್ಳೆಗಳು ನೀವು ನನಗೇ ಬುದ್ಧಿ ಹೇಳುವಿರಾ? ಹಃ! ಹಃ! ಹಃ! ನಮ್ಮ ಕೆಲಸದಲ್ಲಿ ನಾವೆಂದಿಗೂ ತಪ್ಪುವವರೇ ಅಲ್ಲಬಿಡಿ. ಆದರೆ, ಓಯ್ ಶ್ರೀನಿವಾಸರಾಯರೆ, ನಿಮಗೆ ಬೇಡಯ್ಯಾ ಈ ಗೋಪಾಲರಾಯರ ಸಹವಾಸ ! ಬೆಂಕಿಯನ್ನು ಕಿಸೆಯಲ್ಲಿಟ್ಟುಕೊಂಡ ಹಾಗೆ ! ಸ್ವಾತಂತ್ರ್ಯ, ದೇಶಸೇವೆ ಅಂತ ಸುಮ್ಮನೆ ಬಾಯಿ ಬಡೆದುಕೊಂಡು ಕೂಗಿದರಾಯಿತೆ? ಎಲ್ಲಿಯ ಸೇವೆ? ಎಂಥಾ ಸ್ವಾತಂತ್ರ್ಯ! ಪಂಚಮಹಾಭೂತಗಳನ್ನೆ ಕೈವಶಪಡಿಸಿಕೊಂಡು, ಯಂತ್ರ ಯುದ್ಧದಲ್ಲಿ ಪ್ರವೀಣರಾದ ಬ್ರಿಟಿಷ್ ಚಕ್ರಾಧಿಪತ್ಯವನ್ನೆ ಕದಲಿಸುವೆವೆಂದು ನಿಮ್ಮಂಥ ಹುಲ್ಲಿಗೆ ಸಮಾನರಾದ ಹುಡುಗರು ಕಿರಿಚಿದರೆ ಯಾವ ಲೆಕ್ಕ ? ಅಯ್ಯೋ ನಿಮ್ಮ ಹುಚ್ಚುತನವೆ!" ಎನ್ನುತ್ತಾ ಶೆಟ್ಟರು ಅವಹೇಳನೆಯ ನಗುವಿನೊಂದಿಗೆ ಎಲ್ಲರನ್ನೊಮ್ಮೆ ನೋಡಿದರು.

ಆಗ ಮೊದಲು ಮಾತಾಡಿದ ಅದೇ ಮೊಗವೀರ ಕಟ್ಟಾಳು "ಹಾಗಾದರೆ ನೆಹ್ರೂ, ಪಟೇಲ್, ಆಜಾದ್, ರಾಜೇಂದ್ರ ಪ್ರಸಾದ್ ಮೊದಲಾದವರೆಲ್ಲಾ ಹುಚ್ಚು ಹುಡುಗರು, ಅಲ್ಲವೇ ಶೆಟ್ಟರೆ?" ಎಂದು ಕೂಗಿ ಕೇಳಿದನು.

# ೧೧

ಜನರ ಮುಂದೆ ತನ್ನ ಪ್ರತಿಷ್ಠೆ ತೋರಿಸಬೇಕೆಂದೋ ಏನೋ, ಶೆಟ್ಟರು "ಎಲ್ಲಾ ಅಷ್ಟೇ–" ಎಂದು ಮತ್ತೂ ಹೇಳತೊಡಗಿದಾಗ ಗೋಪಾಲನು ಶೀನುವಿನ ಕೈಯನ್ನು ಹಿಡಿದುಕೊಂಡೆದ್ದು,—"ಬಾರಯ್ಯ ಶೀನು! ನಮ್ಮಂಥ ಹುಚ್ಚರಿಗೆಲ್ಲ ಈ ನೀತಿವಂತರ ಮುಂದೆ ಏನು ಕೆಲಸ? ಸ್ವಲ್ಪ ಬಾಯಾರಿಕೆಯಾದರೂ ಕಳೆದುಕೊಳ್ಳೋಣ ಇಲ್ಲಿ ಲೆಕ್ಕ ಬರೆಯುವವನು ನಿನ್ನ ತಮ್ಮ ಕೃಷ್ಣನಲ್ಲವೆ? ಓಯ್ ಕೃಷ್ಣರಾಯರೆ! ಶೆಟ್ಟರು ಬಿಟ್ಟಾರೇ ನಿಮ್ಮ? ಬರುತ್ತೀರಾ ಕೊಂಚ?" ಎಂದನು.

ಕೃಷ್ಣನು—"ಇಲ್ಲಯಿಲ್ಲ. ವ್ಯಾಪಾರ ತುಂಬಾ ಬಂದದೆ. ನೀವು ಹೋಗಿ"

ಶೀನೂ ಗೋಪಾಲರು ಬಳಿಯಲ್ಲಿದ್ದ ಒಂದು ಹೋಟೆಲಿನ ಕಡೆಗೆ ನಡೆದರು.

ಇತ್ತ ಶೆಟ್ಟರು ಹೇಳುತ್ತಲೇ ಇದ್ದರು. "ಎಲ್ಲಾ ಅಷ್ಟೇ! ಕೀರ್ತಿಶಾಲಿಗಳಾಗಿ ಮೆರೆಯುಲಿಕ್ಕೆ, ಪ್ರಜೆಗಳನ್ನು ಗೋಳಾಡಿಸಲಿಕ್ಕೆ ಇದೊಂದು ತಂತ್ರ! ಇದಕ್ಕೆಲ್ಲಾ ಗುರು ಆ ಬಡ ಅರಬತ್ತಲೆಯ ಗಾಂಧಿ! ಅವನದೊಂದು ಮಾಯಾಸ್ತ್ರ ಅಹಿಂಸೆಯ ಅಸ್ತ್ರ! ಆಹಾ! ಏನು ಹುಚ್ಚು! ತುಪಾಕಿ ಬಾಂಬುಗಳ ಮುಂದೆ ಕತ್ತಿ ಬಲ್ಲೆಗಳು ಕೂಡಾ ಉಪಯೋಗವಿಲ್ಲದ ಈ ಕಾಲದಲ್ಲಿ ಅಹಿಂಸೇ ಅಹಿಂಸೆ ಅಂತ ಕೂಗಿ ಉಪವಾಸ ಕೂತರೆ ಏನಾದೀತು? ಉಪವಾಸ ಕುಳಿತುಗೊಳ್ಳುವುದು ಹೆಂಗುಸರ ಬುದ್ಧಿ! ಹೆಣ್ಣು ಬುದ್ಧಿ ಹಿಂಬುದ್ಧಿ! ಅಂಥಾ ಬುದ್ಧಿ ನೋಡಿ ಗಾಂಧೀದು! ಅಂಥಾ ಗಾಂಧಿಯ ಅನುಯಾಯಿಗಳಂತೆ ಇವರೆಲ್ಲ! ಇವರನ್ನೆಲ್ಲಾ ನೊರಜಗಳಂತೆ ಒರೆಸಿಬಿಟ್ಟಾನು ಆ ಬಿಳಿಮುಖದ ದೊರೆ! ನಾನು ಹೇಳ್ತೇನೇ,— ಈ ಗಾಂಧಿ ಗೀಂಧಿ ಮೊದಲಾದ ಮುದುಕಪದುಕರೆಲ್ಲ ಕೆಲಸಕ್ಕೆ ಬಾರದವರು ಈ ಬ್ರಿಟಿಷ್ ಚಕ್ರೇಶ್ವರನಿಗೆ ಶರಣಾಗತಿಯಾಗಿ ಅವರ ದಯೆಯಲ್ಲಿ ಸುಖವಾಗಿ ಬಾಳುವುದೇ ನಮಗೆ ಕ್ಷೇಮ............"

"ಷಟಪ್ ಯುವರ್ ಮೌತ್!" ಹಠಾತ್ತಾಗಿ ಸಿಡಿಲು ಒಡೆದಂತೆ ಗರ್ಜಿಸಿದನು ಆ ಮೊಗವೀರ ಯುವಕ!

ಶೆಟ್ಟರು ಸ್ತಬ್ಧರಾಗಿ ಬಿರುಗಣ್ಣು ಬಿಟ್ಟರು.

ಎಲ್ಲರೂ ಸ್ತಬ್ಧ !

ಒಂದು ನಿಮಿಷ ಕಳೆದು ಶೆಟ್ಟರು:— "ಯಾರಯ್ಯಾ ಅದು? ಯಾಕಯ್ಯಾ ಹಾಗೆ ಕೂಗುತ್ತಿ? ಏನಾಯ್ತು ನಿನಗೆ?" ಎಂದು ಪ್ರತಿ ಗರ್ಜನೆಮಾಡಿ, ಆ ಮೊಗವೀರನ ಕಡೆಗೆ ನೋಡಿದರು.

ಸಂತಾಪದಿಂದ ಕುದಿಯುತ್ತಿದ್ದ ಆ ಮೊಗವೀರನು ದಿಟ್ಟಿಸಿ ನುಡಿದ:—"ಸಾಕು ನಿಮ್ಮ ಲೆಕ್ಚರು ! ಬಾಯಿ ಮುಚ್ಚಿರೀ ಅಂದೆ. ದೇವರಂತಹ ಗಾಂಧಿಯನ್ನೂ, ಸಾವಿರಾರು ಜನರು ತಮ್ಮ ರಕ್ತವನ್ನೂ ಬಸಿದು ಗಟ್ಟಿಮಾಡಿ ಕಟ್ಟಿದ ಕಾಂಗ್ರೆಸನ್ನೂ, ನಾಲಗೆಯಲ್ಲಿ ನರವಿಲ್ಲದಂತೆ ಬಯ್ಯಲಾರಂಭಿಸಿದ್ದೀರಾ ! ಕೇಳುವವರಿಲ್ಲವೇಂದೆ? ಇದ್ದಾರೆ! ಇದ್ದಾರೆ!"

"ಇದ್ದಾರೆ! ಇದ್ದಾರೆ! ಓ ಶೆಟ್ಟರೆ! ಬೇಡ ನಿಮಗೀ ಮಾತು ನಿಮ್ಮ ಷ್ಟಕ್ಕೆ ನೀವು ಅಂಗಡೀಲಿ ಕೂತುಕೊಂಡು, ಏನು ಕೇಳಿದರೂ ಇಲ್ಲಾ ಇಲ್ಲಾ ಅನುತ್ತಾ, ಒಳಗೆ ಬ್ಲ್ಯಾಕ್ ಮಾರ್ಕೆಟ್‌ನಲ್ಲಿ ಹಣವನ್ನು ಬಾಚುತ್ತಾ ನಿಮ್ಮ ಖಜಾನೆ ಬೆಳೆಸೋ ವಿಚಾರ ಬಿಟ್ಟು ಇದೆಲ್ಲಾ ಬೇಡ ನಿಮಗೆ!" ಎಂದನು ಯಾರೋ ಇನ್ನೊಬ್ಬ.

ಶೆಟ್ಟರು ಕೋಪಾಧಿಕಾರದಿಂದ— "ಓ ! ಯಾರಯ್ಯಾ ನೀನು ? ಅಂಥಾದ್ದೆಲ್ಲಾ ನನ್ನಲ್ಲಿ ಭಾರೀ ಕಂಡಿದ್ದಿಯಾ?"

"ಕಾಣೆನೆ? ರಾತ್ರಾರಾತ್ರಿ ಮೂಡುಗುಡ್ಡೇ ದಾರೀಲಿ ಅಕ್ಕಿ ಮುಡಿ ಸಾಗಿಸುವ ನಿಮ್ಮ ಪಟಲಾ ಮೆಲ್ಲಗೊತ್ತಿದೆ. ಶೆಟ್ಟರೇ ! ಮುಡಿಗೆ ಮೂವತ್ತು! ಮೂವತ್ತು!"

"ಏನೇನು!"—ಶೆಟ್ಟರು ಪುನಃ ಸ್ತಬ್ಧ!

"ನಿಮ್ಮಂಥವರು ಗಾಂಧಿಯ ಹೆಸರನ್ನು ಕೂಡಾ ಉಚ್ಚರಿಸ ಬಾರದು !"

"ಡೌನ್! ಡೌನ್!"—ಮತ್ತಾರೋ ಕೂಗಿದರು.

"ಬ್ಲ್ಯಾಕ್ ಮಾರ್ಕೆಟ್ ಡೌನ್! ಡೌನ್!—" ಹಲವು ಕಂಠ ಗಳಿಂದ ದನಿಯೆದ್ದಿತು.

"ಯಾಕೆ? ಯಾಕೆ? ಏನಾಯಿತು?"— ದೂರ ನಿಂತಿದ್ದ ಕೆಲವರು ಓಡಿಬಂದು ಕೇಳಿದ ಪ್ರಶ್ನೆ.

ಅದಕ್ಕೆ ಎರಡು ಮೂರು ಕಂಠಗಳಿಂದ ಹೊರಟ ಉತ್ತರ: -- "ಈ ಶೆಟ್ಟಿ ಮಹಾತ್ಮಾ ಗಾಂಧೀನ ಮೋಸಗಾರ, ಮಂತ್ರವಾದಿ, ಹುಚ್ಚ ಅಂತ ಬೈದ!''

"ಛೇ! ಛೇ! ಛೇ! ಗಾಂಧಿಯನ್ನೇ?"

"ಮಹಾತ್ಮಾ ಗಾಂಧಿಯನ್ನೆ ! ಅನ್ಯಾಯ ! ಅನ್ಯಾಯ !''

"ಜೈ! ಮಹಾತ್ಮಾ ಗಾಂಧೀ ಕೀ--! "

"ಆ ನೆಹ್ರೂ, ಪಟೇಲ್ ಮುಂತಾದ ಮುಖಂಡರಿಗಿಂತಲೂ ಈ ಡೊಳ್ಳು ಹೊಟ್ಟೆಯವರು ಬಲ್ಲವರಂತೆ!—''

"ಡೌನ್ ಡೌನ್! ಬ್ಲ್ಯಾಕ್ ಮಾರ್ಕೆಟ್ ಡೌನ್ ಡೌನ್!"

"ಮಹಾತ್ಮಾ ಗಾಂಧೀ ಕೀ—ಜೈ ! "

"ಭಾರತ ಮಾತಾಕೀ-ಜೈ!—"ಹಲವರು ಒಂದುಗೂಡಿ "ಜೈ ಜೈ!" ಎಂದು ಘೋಷಣ ಮಾಡಿದರು.

ಮೊದಲು ಮಾತಾಡಿದ ಮೊಗವೀರ ಯುವಕನು ಉಚ್ಚಕಂಠದಿಂದ—"ಓ ಪ್ರಿಯ ಸಹೋದರರೆ! ದೇಶಪಿತಾವುಹರಾದ ಮಹಾತ್ಮಾ ಗಾಂಧಿಯನ್ನು ದೂರಿದರೆ ನೀವೆಲ್ಲಾ ಸೈಸಿಕೊಳ್ಳಬಲ್ಲಿರಾ ?'' ಎಂದು ಸವಾಲು ಬಿಟ್ಟನು

"ಇಲ್ಲ! ಇಲ್ಲ! ಸೈಸಲಾರೆವು! ಸೈಸಲಾರೆವು!''— ಹಲವು ಮಾರ್ದನಿ ಒಂದಾಗಿ ಮೊಳಗಿತು.

"ಅಂಥಾ ಅಹಿಂಸಾ ಮೂರ್ತಿ ಗಾಂಧಿ, ಇದುವರೆಗೂ ಶಾಂತಿ ಮಂತ್ರವನ್ನು ಉಪದೇಶ ಮಾಡುತ್ತಿದ್ದ ಗಾಂಧಿ, ಈಗ ಏನು ಹೇಳಿದ್ದಾರೆ ನಿಮಗೆಲ್ಲ ಗೊತ್ತೇ? ಇಂದು ಮುಂಜಾನೆ 'ಭಾರತ ಸಿಂಹ' ಪತ್ರಿಕೆ ನೋಡಿದ್ದೀರಾ? ಬ್ರಿಟಿಷರು ನಮ್ಮ ನಾಡನ್ನು ಬಿಟ್ಟೇ ಹೋಗಬೇಕು. ಅಧಿಪತ್ಯವನ್ನು ನಮ್ಮ ಕೈಗೆ ಕೊಟ್ಟೇ ತೀರಬೇಕು ಓ ಬ್ರಿಟಿಷ್ ಚಕ್ರಾಧಿಪತ್ಯವೇ!--- ತೊಲಗು! ತೊಲಗು! ಎಂದು ಗರ್ಜಿಸಿದ್ದಾರೆ ! ಇದು ಈಗ ತಾನೇ ಹೊಸದಾಗಿ ಮೊಳಗಿದ ಮಹಾತ್ಮರ ಘನಗರ್ಜನೆ!" ಎಂದು ಅದೇ ಮೊಗವೀರನು ಕೂಗಿ ಹೇಳಿದನು.

ಪುನಃ ಜಯಘೋಷ— "ಮಹಾತ್ಮಾ ಗಾಂಧೀ ಕೀ ಜೈ!''

ಆ ಮೊಗವೀರನು ಮತ್ತೂ ಹೇಳುತ್ತಿದ್ದನು:— "ನಮ್ಮೆಲ್ಲ ಏಕನಿಷ್ಠೆಯಲ್ಲಿ ಅವರಿಗೆ ನಂಬುಗೆ ಇದ್ದೇ ಹಾಗೆ ಹೇಳಿದ್ದಾರೆ!..............''

ಅಷ್ಟರಲ್ಲಿ ಶೆಟ್ಟರ ಗದರಿಕೆಯ ದನಿ ಬಹಳ ಗಟ್ಟಿಯಾಗಿ ಕೇಳಿಸತೊಡಗಿತು:— "ಏ, ಯಾರಪ್ಪಾ ನೀನು? ಅಂಗಡಿಯ ಮುಂದೆ ಜನರನ್ನು ಕೂಡಿಸಿ ಲೆಕ್ಚರಿಗೇ ಪ್ರಾರಂಭಿಸಿದೆಯಲ್ಲಾ? ಒಳ್ಳೇ ಮಾತಿನಲ್ಲಿ ಅತ್ತ ಹೋಗುತ್ತೀಯಾ, ಪೋಲೀಸರ ಕರೀಬೇಕಾ?''

ಆ ಮೊಗವೀರನು ಮತ್ತಷ್ಟು ಗಟ್ಟಿ ದನಿಯಿಂದ— "ಈ ಶೆಟ್ಟಿ ಪೋಲೀಸರ ನೆಂಟ! ಮಹಾತ್ಮಾ ಗಾಂಧಿಯನ್ನು ಹುಚ್ಚ—ಅರೆಬತ್ತಲೆಯ ಮುದುಕ ಎಂದು ಹೀಯಾ............"

"ಏನು ನೋಡ್ತೀರೋ ಈ ಶೆಟ್ಟೀನ ಇಲ್ಲಿ ಮುಟ್ಟುಗೋಲು ಹಾಕದೆ!—'' ಎಂದು ಕೂಗಿ ಗರ್ಜಿಸಿ ಒಬ್ಬನು ಅಂಗಡಿಯ ಮೇಲಕ್ಕೆ ಜಿಗಿದನು.

"ಮಹಾತ್ಮಾ ಗಾಂಧೀ ಕೀ ಜೈ!—ಬ್ಲ್ಯಾಕ್ ಮಾರ್ಕೆಟ್ ಡೌನ್ ಡೌನ್!"—ಎಂಬ ಘೋಷಣದೊಂದಿಗೆ, ಗಲ್ಲದ ಪೆಟ್ಟಿಗೆ "ಭಂಡಣಾರ್" ಎಂದು ಕೆಳಗುರುಳಿ ಬಿದ್ದ ಸದ್ದೊಂದು ಥೀಕೊಟ್ಟಿತು

"ಹೊ! ಹೊ! ಪೋಲೀಸ್! ಪೋಲೀಸ್!'' ಎಂದು ಕೂಗುತ್ತಿದ್ದ ಶೆಟ್ಟರನ್ನು ಕೈಹಿಡಿದೆಳೆದು ಬೀದಿಗೆ ತಂದು ನಿಲ್ಲಿಸಿದರು.

"ಜೈ ಬೋಲೋ-ಮಹಾತ್ಮಾ ಗಾಂಧೀ ಕೀ—" ಜಯಘೋಷವು ಮೊದಲಿಗಿಂತ ಇಮ್ಮಡಿಯಾಗಿ ಕೇಳಿಸಿತು. ಆವೇಶಗೊಂಡ ಜನರು ಅಂಗಡಿಯ ಸಾಮಾನುಗಳನ್ನು ಎತ್ತೆತ್ತಿ ಬಿಸುಡಲಾರಂಭಿಸಿದರು. ಕೃಷ್ಣನು ಬಲು ಗಾಬರಿಯಾಗಿ ಕೂಗುತ್ತಿದ್ದ ಶೆಟ್ಟರ ಜತೆಗೆ ಸೇರಿ, ಅವರನ್ನು ತಕ್ಕೈಸುತ್ತ ಜನದಾಂಧಲೆಯನ್ನು ನಿವಾರಿಸಲೆತ್ನಿಸುತ್ತಿದ್ದನು ಕೆಲವು ಖಾಲೀ ಪೋಲೀ ಜನರೂ ಆ ಗಲಭೆಯೊಳಗೆ ನುಗ್ಗಿ ಕೈಗೆ ಸಿಕ್ಕಿದ ಸಾಮಾನುಗಳನ್ನು ಸಿಕ್ಕಿದಷ್ಟು ಬಾಚಿಕೊಂಡು ಓಡೋಡಿಯೂ ಹೋಗಿಬಿಟ್ಟರು.

ಐದಾರು ನಿಮಿಷದೊಳಗೆ ಇಷ್ಟೆಲ್ಲಾ ಆಗಿಹೋಯಿತು. ಹೋಟಲಿನಲ್ಲಿ ಕಾಫೀ ಕುಡಿಯುತ್ತಿದ್ದ ಶೀನೂ ಗೋಪಾಲರು ಓಡೋಡಿ ಅಲ್ಲಿಗೆ ಬಂದರು. ಶೀನು ಆಶ್ಚರ್ಯದಿಂದ ದಂಗಾಗಿ ಹೋಗಿಬಿಟ್ಟಿದ್ದ.

ಶೆಟ್ಟರು ಗೋಪಾಲನನ್ನು ದುರುದುರುಸಿ ನೋಡಿದರು. ಅತ್ತಿತ್ತ ಣಿಂದ ಓಡಿಬಂದ ಕೆಲವು ಪ್ರಮುಖ ಗೃಹಸ್ಥರು ಆ ಶೆಟ್ಟರನ್ನು ಆವರಿಸಿ ಕೊಂಡು ಆವೇಶ ಪರವಶರಾದವರ ಆಹತಕ್ಕೆ ಸಿಕ್ಕದಂತೆ ಅವರನ್ನು ರಕ್ಷಿ ಸುತ್ತಿದ್ದರು ಗೋಪಾಲನೂ ಶೀನುವೂ ಅಂಗಡಿಯ ಮೇಲ್ಮೆಟ್ಟಿಕ್ಕೆ ಜಿಗಿದೇರಿನಿಂತರು.

ಆವರಿಬ್ಬರೂ ಎರಡೂ ಕೈಗಳನ್ನು ನೆಗವಿ ನಿಂತು— "ಹಾ! ಹಾ! ಪ್ರಿಯ ಸೋದರರೆ! ಶಾಂತರಾಗಿರಿ! ಶಾಂತರಾಗಿರಿ!" ಎಂದು ಕೂಗಿ ಕೂಗಿ ಹೇಳಿದರು.

ದಿವ್ಯ ಶುಭ್ರ ತೇಜಸ್ಸಿನಿಂದೆಸೆಯುವ ಆ ಭಾಷಾ ಸೇವಕ ದೇಶಸೇವ ಕರ ಕಳೆಯನ್ನು ಕಂಡು ಜನರು— "ಓ! ಹೊ! ನಮ್ಮ ಮುಖಂಡರು! ಗೋಪಾಲರಾಯರು! ನಿಲ್ಲಿಸಿರಿ! ನಿಲ್ಲಿಸಿರಿ! ಸಾಕು! ಸಾಕು!" ಎಂದು ಪ್ರತಿಧ್ವನಿಕೊಡುತ್ತ ಅಲ್ಲಿಂದಲ್ಲಿಗೆ ಶಾಂತರಾದರು.

ಅಷ್ಟರೊಳಗೆ ಕಪಿಹಾವಳಿಯಂತೆ ಅಂಗಡಿ ಪೂರಾ ಚೆಲ್ಲಾಚೆದರಾಗಿ ಹಾಳು ಸುರಿಯುತ್ತಿತ್ತು.

ಗೋಪಾಲರಾಯನು ಕೂಗಿ ಹೇಳಿದನು:— "ಪ್ರಿಯರೇ! ವೀರ ಸಹೋದರರೆ! ಮಹಾತ್ಮಾ ಗಾಂಧಿಯವರ ಮೇಲೆ ನಿಮಗಿರುವ ಭಕ್ತಿ-ವಿಶ್ವಾಸವನ್ನೂ, ಕಾಂಗ್ರೆಸ್ಸಿನ ಮೇಲೆ ನಿಮಗಿರುವ ನಿಷ್ಠೆಯನ್ನೂ ನೋಡಿ ಭಾರತಮಾತೆ ಬಹಳ ಸಂತೋಷ ಪಡುತ್ತಾಳೆ. ಆದರೆ ಮಹಾತ್ಮರ ಬೋಧನೆಯನ್ನು ನೆರವೇರಿಸುವ ವಿಧಾನವು ಹೀಗಲ್ಲ! ಅನಾವಶ್ಯಕವಾದ ಸಮಯ ಸನ್ನಿವೇಶಗಳಲ್ಲಿ, ನಿಮ್ಮ ಬಲ ಸ್ಫೂರ್ತಿ ಆವೇಶಗಳನ್ನು ವ್ಯರ್ಥ ಗೊಳಿಸಬಾರದೆಂದೇ ಅವರು ಹೇಳುತ್ತಾರೆ ಯಾಕೆಂದರೆ, ಸ್ವಾತಂತ್ರ್ಯ ಸಂಪಾದನೆಯೇ ಗುರಿಯಾಗಿರುವ ನಮ್ಮ ಪ್ರತಿಯೊಂದು ಉತ್ಸಾಹದ ಶ್ವಾಸವೂ ಬಹಳ ಅಮೂಲ್ಯವಾಗಿದೆ. ಅದನ್ನು ಬಹಳ ಎಚ್ಚರದಿಂದ ಫಲಕಾರಿಯಾಗುವಂತೆ ಉಪಯೋಗಿಸಬೇಕು. ನಮ್ಮ ಮಹಾನ್ ಮುಖಂಡರ ಆದೇಶಗಳೆಂತು ಬರುವುದೋ ಅಂತೆಯೇ ನಡೆಯಲು ನಾವು ಸಿದ್ಧರಿರಬೇಕು. ಶೆಟ್ಟರ ಬಂಡ ಸಾಲೆಯನ್ನು ಲೂಟಿಮಾಡಿದರೆ ನಮ ಗೇನೂ ಲಾಭವಿಲ್ಲ. ಅವರೇನೋ ಹೇಳಿದರೆಂದು ಹೀಗೆಲ್ಲಾ ಮಾಡುವು ದರಿಂದ ಏನು ಫಲ? ಬಂಧುಗಳೇ! ನಾನು ನಿಮ್ಮನ್ನು ಬೇಡಿಕೊಳ್ಳುತ್ತೇನೆ.

ಸಂಯಮವನಗೆಟ್ಟು ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ನಿಷ್ಫಲಗೊಳಿಸ ಬೇಡಿರಿ! ನಿಮ್ಮ ವರ್ತನೆಯನ್ನು ಕೇಳಿದರೆ ಪೂಜ್ಯ ಮಹಾತ್ಮರು ಖಂಡಿತ ವಾಗಿಯೂ ಮಹಾವ್ಯಸನದಲ್ಲಿ ಮುಳುಗುವರು!............''

"ಮಹಾತ್ಮಾ ಗಾಂಧೀ ಕೀ ಜೈ!" ಎಂಬ ಮತ್ತೊಮ್ಮೆ ಜಯರವ ವೆದ್ದಿತು.

## ೧೨

ಅಷ್ಟರಲ್ಲಿ ಯಾರೋ ಒಬ್ಬ ಮೊಗವೀರನು ಅಲ್ಲಿಗೆ ಬಂದು, ಗೋಪಾಲನ ಕಿವಿಯ ಬಳಿಯಲ್ಲಿ ಎರಡು ಚಿಟಿಕೆ ಹಾಕಿದನು. ಗೋಪಾಲನು ಆ ಸಂಕೇತದ ಅರ್ಥವನ್ನರಿತು, ಎಲ್ಲರೂ ಚದರಿ ಹೋಗುವಂತೆ ಇನ್ನೊಮ್ಮೆ ಬೇಡಿಕೊಂಡು, ಶೀನುವನ್ನು ಕೈಹಿಡಿದು ಕರೆದುಕೊಂಡು ಅಲ್ಲಿಂದ ಹೊರಟನು

ಬೀದಿಗೆ ಬರುತ್ತಲೇ ಗೋಪಾಲನು ಶೀನುವಿನ ಕಿವಿಯ ಬಳಿ ಬಾಯಿ ಒಯ್ದು— ''ಗೆಳೆಯ, ನೀನು ದೇಶಸೇವೆಗೆ ಧುಮುಕಲು ದೃಢ ಮಾಡಿರುವಿಯಾದರೆ ಇಂದು ರಾತ್ರಿ ಒಂಬತ್ತು ಗಂಟೆಯ ಸಮಯಕ್ಕೆ, 'ಮೊಗೇರ ಪಟ್ಣ'ಕ್ಕೆ ಬಾ ಅಲ್ಲಿ ಕಡಲತಡಿಯಲ್ಲಿರುವ ಗುರುತಿನ ಕಂಬದ ಬಳಿಯಲ್ಲಿ ನಾನು ನಿನಗೆ ಸಿಕ್ಕುತ್ತೇನೆ ಬರುವಾಗ ಸಾದಾ ಡ್ರೆಸ್ಸಿನಲ್ಲಿಯೇ ಬಾ. ಈಗ ಈ ಗಲಾಟೆಯ ಸುದ್ದಿ ಪೋಲೀಸ ಸ್ಟೇಶನ್ನಿಗೆ ಮುಟ್ಟಿದೆ. ನಾನು ಅರೆಸ್ಟಾಗುವ ಯೋಗವಿದೆ.—ಹುಂ '' ಎಂದಂದು ಶೀನುವಿನ ಪ್ರತ್ಯುತ್ತರವನ್ನು ಕೂಡ ಕೇಳಿಕೊಳ್ಳದೆ, ತನ್ನ ಗ್ರಾಮದ ದಾರೀ ಹಿಡಿದು ನಡೆದನು.

ಆಗ ಯಾರೋ ಒಬ್ಬರು— ''ಓಯ್ ಗೋಪಾಲರಾಯರೆ? ಸ್ವಲ್ಪ ನಿಲ್ಲಿ. ಪೋಲೀಸರೊಡನೆ ಸಾಕ್ಷಿ ಕೊಟ್ಟು ಹೋಗಿರಯ್ಯ.'' ಎಂದರು.

ಶೆಟ್ಟರು ಸಂತಾಪದಿಂದ— ''ಓ! ತಪ್ಪಿಸಿಕೊಳ್ತಾನೆ ಕಳ್ಳ ! ಹಿಡಿಯಿರಿ ಅವನನ್ನು ! ಇಷ್ಟಕ್ಕೂ ಮೂಲ ಅವನೇ!'' ಎಂದು ಅರಚಿದರು.

ಅದಕ್ಕೆ ಉತ್ತರವಾಗಿ ಯಾರೋ ಒಬ್ಬನು— ''ಎಂಥಾ ಅನ್ಯಾಯ ವಿದು ಶೆಟ್ಟರೆ! ಮಂದಿಗೆ ಆವೇಶ ಕೆದರುವಂತೆ ಮಾತಾಡಿದವರು ನೀವು !

ಆವೇಶದಿಂದ ಮದವೇರಿದ ಜನರನ್ನು ಕೂಡಲೇ ಶಾಂತಗೊಳಿಸಿ, ಇಷ್ಟರಲ್ಲಿ ನಿಮ್ಮನ್ನು ಉಳಿಸಿದವರು ಅವರು! ಮತ್ತೆ ಅವರ ಮೇಲೆಯೇ ತಪ್ಪು ಹೊರಿಸುವಿರಲ್ಲ! ಎಂಥ ಅನ್ಯಾಯ!''

ಶೆಟ್ಟರು ಮತ್ತೇನೋ ಹೇಳಲು ಬಾಯಿ ತೆರೆದಾಗ,—''ಸುಮ್ಮನಿರಿ ಸದ್ಯ. ಏನೂ ಹೇಳಬೇಡಿ'' ಎಂದು ಕೃಷ್ಣನೇ ಮುಂತಾದವರು ಅವರ ಬಾಯಿ ಬಿಗಿದರು.

''ಗೋಪಾಲರಾಯರ ಮೈಗೆ ಕೈ ಹಚ್ಚಿದರೆ, ಊರಿಗೆ ಊರೇ ದಂಗೆ ಎದ್ದೀತು!" ಎಂದು ಯಾರೋ ಹೇಳಿಕೊಳ್ಳುತ್ತಾ ಹೋದರು.

ಅಷ್ಟರಲ್ಲಿ ಗೋಪಾಲನು ಹೊರಟೇ ಹೋಗಿಬಿಟ್ಟಿದ್ದ.

ಕೃಷ್ಣನೂ ಬೇರೆ ಅಂಗಡಿಯ ಕೆಲಸದವರೂ ಚೆಲ್ಲಾಡಿದ ಅಂಗಡಿಯನ್ನು ಸರಿಗೊಳಿಸುವ ಕೆಲಸಕ್ಕೆ ತೊಡಗಿದರು. ಆಗ ಕೋಟಿ ಶೆಟ್ಟರು— ''ಪೋಲೀಸರು ಬರುವವರೆಗೂ ಏನೂ ಮಾಡಬೇಡಿ. ಎಲ್ಲಾ ಹಾಗೆ ಹಾಗೇ ಇರಲಿ'' ಎಂದು ಆಜ್ಞಾಪಿಸಿದರು.

ಶೀನು ಮೆಲ್ಲನೆ ರೀಡಿಂಗ್ ರೂಮಿನ ಕಡೆಗೆ ನಡೆದನು.

ಪೋಲೀಸ್ ಸ್ಟೇಶನ್ ಅರ್ಧ ಮೈಲು ದೂರದಲ್ಲಿತ್ತು. ಅಲ್ಲಿಂದ ಪೋಲೀಸ್ ಇನಸ್ಪೆಕ್ಟರರೊಬ್ಬರು ಕಾನ್ಸ್‌ಟೇಬಲ್‌ಗಳೊಂದಿಗೆ ಸಂಭವ ನಡೆದ ಸ್ಥಳಕ್ಕೆ ವಿಜಯ ಮಾಡಿಸಿದರು. ನೋಡಿದರು, ಕೇಳಿದರು, ವಿಚಾರಣೆ ನಡೆಸಿದರು. ಗಲಭೆಯನ್ನು ಕೋಲು ಹಾಕಿ ಹಾಕಿ ಎಬ್ಬಿಸಿದ ಆ ಮೊಗವೀರ ಯುವಕನ ಹೆಸರು ಯಾರಿಗೂ ತಿಳಿಯದಂತೆ. ''ಈ ಎಲ್ಲಾ ಗಲಾಟೆಗೆ ಮೂಲ ಕಾರಣ ಗೋಪಾಲರಾಯ" ಎಂದು ಶೆಟ್ಟರು ಖಂಡತುಂಡಾಗಿ ಹೇಳಿಬಿಟ್ಟರು. ಆಗ ರೀಡಿಂಗ್ ರೂಮಿನಿಂದ ಶೀನುವೂ ಅಲ್ಲಿಗೆ ಬಂದು ನಿಂತಿದ್ದ. ಅದನ್ನು ಕೇಳಿ ಅವನಿಗೆ ಸುಮ್ಮನಿರಲಾಗ ಲಿಲ್ಲ— ''ಹಾಗಲ್ಲ ನಾನು ಆಗಿನಿಂದಲೂ ಇಲ್ಲಿಯೇ ಇದ್ದು ಎಲ್ಲ ವನ್ನೂ ನೋಡಿದ್ದೇನೆ. ಈ ಶೆಟ್ಟರು ಗೋಪಾಲರಾಯನೊಡನೆ ತಮಾಷೆ ಯಾಗಿ ಮಾತಾಡುತ್ತ—''

ಎನ್ನುವಾಗ ಶೆಟ್ಟರು ಅವನನ್ನು ತಡೆದು— ''ನಿಮ್ಮನ್ನಾರು ಕೇಳಿ ದರು ಶ್ರೀನಿವಾಸರಾಯರೆ? ನಿಮ್ಮಷ್ಟಕ್ಕೆ ನೀವು ಇರಲೀ ಅಂತ ನಾವು

ಸುಮ್ಮನೆ ಬಿಟ್ಟರೆ, ನೀವು ಯಾಕೆ ಅನಾವಶ್ಯಕವಾಗಿ ಬಾಯಿ ಹಾಕುತ್ತೀರಿ? ನಿಮಗೇನು ಗೊತ್ತಿದೆ ಈ ವಿಷಯ?''

''ಯಾರಿವರು?—'' ಇನ್ಸ್ಪೆಕ್ಟರು ಶೀನುವನ್ನು ಆಪಾದಮಸ್ತಕ ಪರ್ಯಂತ ಓರೆಗಣ್ಣಿನಿಂದ ನೋಡಿ ಕೇಳಿದರು.

"ಇಲ್ಲಿಯ ಗುಮಾಸ್ತ ಕೃಷ್ಣರಾಯರ ಅಣ್ಣ "

"ಇರಲಿ. ಇವರ ಮಾತನ್ನೂ ಕೇಳುವ; ಏನು ಹೇಳುತ್ತೀರಿ ನೀವು?" ಎಂದು ಇನ್ಸ್ಪೆಕ್ಟರು ಶೀನುವನ್ನು ಕುರಿತು ಕೇಳಿದರು.

ಶೀನು ಸತ್ಯವನ್ನು ಸಂಕ್ಷೇಪವಾಗಿ ಹೇಳಿ '' ಗೋಪಾಲರಾಯರು ಗಲಾಟೆಯನ್ನು ನಿಲ್ಲಿಸಿದರು" ಎಂದು ಕೊನೆಗೊಳಿಸಿದನು.

"ಹಾಗಿದ್ದರೆ ಅವರು ಇಲ್ಲಿ ನಿಲ್ಲದೆ ಏಕೆ ತಪ್ಪಿಸಿಕೊಳ್ಳಬೇಕು?—'' ಎಂದು ಇನ್ಸ್ಪೆಕ್ಟರು ಪ್ರಶ್ನೆ ಮಾಡಿದರು

"ಏನೋ ಅವಸರ ಕಾರ್ಯವಿದ್ದೀತು!" ಎಂದನು ಶೀನು.

"ಒಳ್ಳೇದು. ಅವರ ಸತ್ಯಾಸತ್ಯತೆ ಬೇಗದಲ್ಲೆ ಗೊತ್ತಾದೀತು!'' ಎಂದು ಇನ್ಸ್ಪೆಕ್ಟರು ವಿಚಾರಣೆ ಮುಗಿಸಿದರು.

ಅಂದಾಜು ಲೆಕ್ಕದ ಮೇಲೆ, ಅಂದು ಕೋಟೆ ಶೆಟ್ಟರಿಗೆ ಕುಳಿತಲ್ಲಿಯೇ ಸುಮಾರು ಒಂದೂವರೆ ಸಾವಿರ ರೂಪಾಯಿ ನಷ್ಟವೆಂದು ಕಂಡು ಹಿಡಿಯಲ್ಪಟ್ಟಿತು.

ಆ ಅಂಗಡಿಯ ಸಾಮಾನುಗಳನ್ನೆಲ್ಲ ಒಂದು ಕ್ರಮಕ್ಕೆ ತಂದಿರಿಸುವ ಕೆಲಸದಲ್ಲಿ ಶೀನುವೂ ಸಹಾಯಮಾಡಿದನು. ಎಲ್ಲವೂ ಮುಗಿದು, ಶೀನೂ ಕೃಷ್ಣರು ಒಟ್ಟಿಗೇ ಮನೆಯ ಕಡೆಗೆ ಹೊರಟರು. ಆಗ ರಾತ್ರಿ ೮|| ಗಂಟೆಯಾಗಿತ್ತು.

ಆಗ ಆ ಅಣ್ಣ-ತಮ್ಮಂದಿರು ಅದೇ ವಿಷಯ ಮಾತಾಡುತ್ತಿದ್ದರು. ಮಾತಾಡುವುದೆಲ್ಲ ಕೃಷ್ಣನೇ. ಶೀನು ಹೆಚ್ಚೇನೂ ಮಾತಾಡದೆ ಒಂದು ತರದ ಗಾಂಭೀರ್ಯದಲ್ಲಿಯೇ ಇದ್ದನು. ಕಡೆಗೆ ಕೃಷ್ಣನು—"ಒಟ್ಟಾರೆ ಈಗ ಗಾಂಧಿ, ಕಾಂಗ್ರೆಸ್ ಮೊದಲಾದ ವಿಷಯಗಳನ್ನು ಮಾತಾಡುವಾಗ ತುಂಬಾ ಎಚ್ಚರಿಕೆ ಬೇಕಣ್ಣ. ಇಂದು ನೀನು ಅಪರೂಪವಾಗಿ ಖಾದೀ ಡ್ರೆಸ್ಸು ಹಾಕಿಕೊಂಡದ್ದಕ್ಕೂ, ಗೋಪಾಲರಾಯನ ಭೇಟಿಯಾದದ್ದಕ್ಕೂ,

ಬೆಳಗ್ಗಿನ ಪೇಪರಿನಲ್ಲಿ ಬಿಸಿಬಿಸಿ ಸುದ್ದಿ ಹೊರಟದ್ದಕ್ಕೂ ಸರೀಹೋಯಿತು! ಅಣ್ಣಾ! ನೀನು ಗೋಪಾಲನೊಂದಿಗೆಲ್ಲ ಹೆಚ್ಚು ಸೇರಬೇಡ. ಅವನು ಬೆಂಕಿ ಇದ್ದ ಹಾಗೆ! ಎಲ್ಲಾ ಬಿಟ್ಟು ಪರದೇಶಿಗಳಿಗಾದೀತು ಅದು!"

ಅದಕ್ಕೆ ಶೀನು ಮುಗುಳ್ನಗುವನ್ನೆ ಉತ್ತರವಾಗಿ ಕೊಟ್ಟನು. "ನಾನು ಪರದೇಶಿಯಲ್ಲದೆ ಮತ್ತೆ ಯಾರು?" ಎಂದು ತನ್ನೊಳಗೆ ತಾನೇ ಕೇಳಿಕೊಂಡನು ಹಾಗೆಯೇ ಗೋಪಾಲರಾಯನ ಮೇಲೆ ಮನಸ್ಸು ಹರಿಯಿತು. ಗೋಪಾಲನು ಪರದೇಶಿಯೆ? ಅವನಿಗೆ ತಂದೆ ಇದ್ದಾರೆ, ತಾಯಿ ಇದ್ದಾರೆ; ಅಕ್ಕ-ತಂಗಿ-ಅಣ್ಣ-ತಮ್ಮ ಇದ್ದಾರೆ; ಹೇರಳವಾದ ಆಸ್ತಿ ಇದೆ; ಬದುಕಿದೆ ಎಲ್ಲಾ ಇದ್ದೂ ಅವನು ಎಲ್ಲಾ ಹಂಗನ್ನು ತೊರೆದು ದೇಶಸೇವೆಗೇ ತನ್ನನ್ನು ಸಮರ್ಪಿಸಿ ಕೊಂಡಿದ್ದಾನೆ! ಶೀನುವಿಗೆ ಅಂತಹ ಕಟ್ಟುಗಾರರಾರಿದ್ದಾರೆ? ದೇಶಸೇವೆಗೆ ಗೋಪಾಲನಿಗಿಂತಲೂ ಶೀನುವೇ ಹೆಚ್ಚು ಅರ್ಹತೆಯುಳ್ಳವನಲ್ಲವೆ?

ಇಂದು ನಡೆದ ಆಕಸ್ಮಿಕ ಸಂಭವವನ್ನು ನೆನೆನೆನೆದಂತೆ ಶೀನುವಿನ ಹೃದಯವು ತುಂಬಿ ತುಂಬಿ ಸೂಸುತ್ತಿದ್ದಿತು. "ಸ್ವರಾಜ್ಯಕ್ಕೆ ಇನ್ನೆಷ್ಟು ಕಾಲಬೇಕು?'' ಎಂದ ಅವನ ಪ್ರಶ್ನೆಗೆ ಕೂಡಲೇ ಹೊರಟ ಉತ್ತರ ದಂತಿತ್ತು ಅದು! ಮಹಾತ್ಮರ ಒಂದು ಶ್ವಾಸಕ್ಕಾಗಿ, ಒಂದು ಹುಂಕಾರ ಕ್ಕಾಗಿ ಇಡಿಯ ದೇಶವೇ–ಸಮಸ್ತ ಭಾರತ ಭೂಮಿಯೇ ಕಾದು ನಿಂತಿದೆ! ಆ ಸಮಯದಲ್ಲಿ ಶೀನುವಿಗೂ ಸ್ಫೂರ್ತಿ ಬಂದಿತ್ತು ಆವೇಶಗೊಂಡ ಜನರನ್ನು ನೋಡಿ ಅವನಿಗೂ ಏನೇನೋ ಹೇಳಬೇಕೆನಿಸಿತ್ತು. ಹೇಳು ತ್ತಿದ್ದ; ಸಂದರ್ಭ ಸಿಗಲಿಲ್ಲ.

ಆ ರಾತ್ರಿ ಊಟ ತೀರಿದಮೇಲೆ ಶೀನು ಒಂದು ಬನಿಯನ್ ಹಾಕಿ ಕೊಂಡು, ತಲೆಗೊಂದು ಎಲವಸ್ತ್ರವನ್ನು ಸುತ್ತಿಕೊಂಡು, ಕೈಯಲ್ಲೊಂದು ಬೆತ್ತವನ್ನು ಎತ್ತಿಕೊಂಡು, "ಕೃಷ್ಣ! ನನಗೆ ಕೆಲಸವಿದೆ. ಬರುತ್ತೇನೆ." ಎಂದು ಹೇಳಿ ಅಂಗಳಕ್ಕಿಳಿದನು.

"ಎಲ್ಲಿಗೆ?—" ಎಂಬ ನುಡಿ ನಾಲಗೆ ತುದಿಗೆ ಬಂದಿತ್ತು ಕೃಷ್ಣನಿಗೆ. ಹಾಗೆ ಕೇಳುವುದು ಉಚಿತವಲ್ಲೆಂಬ ಸಾಮಾನ್ಯ ತಿಳುವಳಿಕೆಯಿರುವುದರಿಂದ— "ಎಷ್ಟು ಹೊತ್ತಾದೀತಣ್ಣ ಬರುವಾಗ?'' ಎಂದು ಕೇಳಿದನು.

"ಬೆಳಗ್ಗೆ ಬರುತ್ತೇನೆ." ಎನ್ನುತ್ತಾ ಶೀನು ಅಂಗಳದ ಕೊನೆಯನ್ನು ದಾಟಿದನು. ಅವನೆಲ್ಲಿಗೋ ಹೊರಟದ್ದು ನೋಡಿ ಬೊಳ್ಳು ಬಾಲವಾಡಿಸುತ್ತಾ ಅವನ ಹಿಂದೆಯೇ ಹೋಯಿತು. "ಹೋಗೋ ಬೊಳ್ಳಾ. ರಾತ್ರಿಯಲ್ಲಿ ಮನೆಯಲ್ಲಿದ್ದು ಕಾಯುವುದನ್ನು ಬಿಟ್ಟು, ಊರುಸುತ್ತ ಬರುವಿಯಾ? ಹೋಗು ನಡಿ" ಎಂದು ಬೆತ್ತವನ್ನೆತ್ತಿ ಅಟ್ಟಿಸಲು, ಬೊಳ್ಳು, ವಿಧೇಯತೆಯಿಂದ ಹಿಂದಕ್ಕೆ ತಿರುಗಿ, ಮತ್ತೆ ಅವನು ಹೋಗುವುದನ್ನು ನೋಡುತ್ತಾ ಅಲ್ಲೇ ನಿಂತಿತ್ತು

ಶೀನು ಮುಂದೆ ಹೋದನು.

ಆಕಾಶದಲ್ಲಿ ಶುಕ್ಲಾಷ್ಟಮಿಯ ಚಂದ್ರನು ತೇಲುತ್ತಿದ್ದನು. ಊರವರೆಲ್ಲ ನೆಮ್ಮದಿಯಾಗಿ ನಿದ್ರಾಲಿಂಗನಕ್ಕೆ ತೊಡಗಿಬಿಟ್ಟಿದ್ದರು. ಎಲ್ಲ ಕಡೆಯಲ್ಲಿಯೂ ನಿಃಶಬ್ದತೆ ಪಸರಿಸತೊಡಗಿತ್ತು. ಶೀನು ಬೀದಿಯನ್ನು ದಾಟಿ, ಬಯಲ ಹುಣಿಗಳಲ್ಲಿ ನಡೆದು, ಮೊಗೇರ ಕೇರಿಯ ಚಬುಕಿನ ಕಾಡಿನೊಳಗೆ ಹೊಕ್ಕನು.

ಕಡಲತಡಿಯಲ್ಲಿ ಉದ್ದಕ್ಕೂ ಬೃಹೋನ್ನತವಾದ ಚಬುಕಿನ ಕಾಡು. ಕಡಲ ಬೀಸುಗಾಳಿಗೆ ರೊಂಯ್ಯರೊಂಯ್ಯನೆ ತಲೆಯಾಲಿಮಾಲಿಕೊಂಡು, ಒಂದಕ್ಕೊಂದು ಒತ್ತಾಸೆಯಾಗಿ ಒಟ್ಟೈಕೊಂಡಿದ್ದುವು— ಆ ಚಬುಕಿನ ಮರಗಳು. ಕಾಡಿನ ನಡುವೆ ಅಲ್ಲಲ್ಲಿ ಮೊಗವೀರರ ಗುಡಿಸಲುಗಳು. ಸುತ್ತುಮುತ್ತು ಗುಮ್ಮೆಂಬ ಮೀನು ವಾಸನೆ ಶೀನುವಿನ ನಡಿಗೆಗೆ ಅಲ್ಲಿದ್ದ ನಾಯಿಗಳು ಬೊಗಳಿದುವು. ಶೀನು ಸವೆದ ಕಾಲುದಾರಿಯಲ್ಲಿಯೇ ನಡೆಯುತ್ತಿದ್ದುದರಿಂದ, ಯಾವ ನಾಯಿಯೂ ಅವನನ್ನು ಹೆದರಿಸಲು ಬರಲಿಲ್ಲ. ಅಲ್ಲಲ್ಲಿ ಕೆಲವರು ಮೊಗೇರರು ಇನ್ನೂ ಏನೋ ಕೆಲಸಮಾಡುತ್ತಲೇ ಇದ್ದರು. ಶೀನು ನೆಟ್ಟಗೆ ಕಡಲ ತೀರವನ್ನು ಸೇರಿದನು.

ತಾನೇತಾನಾಗಿ ಉಬ್ಬಿಕೊಂಡು, ಚಂದ್ರಕಿರಣದೊಂದಿಗೆ ಕಲೆತು ಲಕಲಕಿಸುತ್ತ, ತೆರೆಮುಗುಚಿ ಭೋರ್ಮೊರೆಯುತ್ತ, ಬೆಳ್ನೊರೆಗಳಿಂದ ರಂಜಿಸುವ ಆ ಕಡಲನ್ನು ಕಂಡು ಶೀನುವಿನ ಹೃದಯದಲ್ಲೊಂದು ನವೋತ್ಸಾಹವು ಉಕ್ಕಿತು. "ಈ ಕಡಲರಸನೂ ನಮ್ಮ ಸ್ವಾತಂತ್ರ್ಯದ ಹೋರಾಟಕ್ಕೆ ಎಷ್ಟು ಸಹಕಾರ ಮಾಡಿದ್ದಾನೆ! ಉಪ್ಪು ಸತ್ಯಾಗ್ರಹದ ಮೂಲ ವಸ್ತು ಇವನಲ್ಲವೆ?" ಎಂಬ ಭಾವದಿಂದ ಶೀನುವಿನ ಹೃದಯವು ಭಕ್ತಿ

ಯಿಂದ ತುಂಬಿ ಬಂತು ತಲೆವಾಗಿ ಕೈಮುಗಿದು, ತೀರವನ್ನೆ ಹಿಡಿದು ಅತ್ತ ನಡೆದನು.

ಶುಭ್ರ ಜ್ಯೋತ್ಸ್ನೆಯಿಂದ ತೊಳೆದು ಹೊಳೆಯುವ ಆ ಬೆಳ್ಮರಳ ರಾಶಿಯ ತೀರದಲ್ಲಿ ಅಲ್ಲಲ್ಲಿ ಮೊಗೇರರ ದೋಣಿಗಳು ತಂಗಿದ್ದವು. ಅಲ್ಲಲ್ಲಿ ಆರ ಹಾಕಿದ ದೊಡ್ಡ ದೊಡ್ಡ ಬಲೆಗಳು ಅವನ ಕಾಲಿಗೆ ತಗುಲುತ್ತಿದ್ದುವು. ಕೆಲವು ದೋಣಿಗಳಲ್ಲಿ ಮೊಗೇರ ಯುವಕರು ಅದೇನೋ ಕೆಲಸ ಮಾಡು ತ್ತಲೇ ಇದ್ದರು ಅದೋ—ಸಮುದ್ರದಲ್ಲಿ ಕೂಡಾ ಮೊಗೇರರ ದೋಣಿ ಗಳು ಕಾಣುತ್ತಿವೆ ! ಈ ಸಮಯದಲ್ಲಿ ಕೂಡಾ ಮತ್ಸ್ಯಾನ್ವೇಷಣ ಮಾಡುತ್ತ ಸಮುದ್ರದಲ್ಲಿ ತಿರುಗಾಡುತ್ತಿದ್ದಾರೆ ! ಕಡಲಿನಾಟದಲ್ಲಿ ಮೊಗೇರರು ಬಲು ಗಟ್ಟಿಗರಲ್ಲವೆ ? ಧೀರರು ! ದೇಹ ಬಲದಲ್ಲಿಯೂ ಆ ಪ್ರಾಂತದಲ್ಲೆಲ್ಲಾ ಅವರಿಗೆ ಈಡು ಅವರೇ. ಒಗ್ಗಟ್ಟಿನಲ್ಲಿಯೂ ಅವರ ಆದರ್ಶವನ್ನು ನೋಡಿ ಇತರರು ಕಲಿಯಬೇಕು. ಅವರೊಳಗೆ ಎಷ್ಟೇ ಕಚ್ಚಾಟವಿರಲಿ, ಪರಾಕ್ರಮಣವಾಯಿತೆಂದರೆ ಕ್ಷಣಮಾತ್ರದೊಳಗೆ ಒಗ್ಗ ಟ್ಟಾಗಿ ಬಿಡುತ್ತಿದ್ದರು. ಆ ಪ್ರಾಂತದಲ್ಲಿ ಯಾರಿಗಾದರೂ ಮೊಗೇರರ ಸಹಾಯ ಉಂಟೆಂದು ಕೇಳಿದರೆ ಸಾಕು, ಅಂತಹನಿಗೆ ಪೋಲೀಸರು ಕೂಡಾ ಅಂಜುತ್ತಾರೆ ಗೋಪಾಲನೂ ಒಬ್ಬ ಅಂತಹನೇ !

ಸಮುದ್ರದಲ್ಲಿ ದೂರ ಹೋಗಿ ಮೀನು ಹಿಡಿಯುವ ದೋಣಿಗಳಿಗೆ ಗುರುತು ತೋರಿಸಲಿಕ್ಕಾಗಿ, ಕಡಲ ತೀರದಲ್ಲಿ ಸಾಕಷ್ಟೆತ್ತರವಾದೊಂದು ಬಿಳೀಬಣ್ಣದ ಗುರುತಿನ ಕಂಬವುಂಟು. ಆ ಕಂಬದ ಬುಡದಲ್ಲಿ ಒಂದು ಪುರುಷಾಕೃತಿ ನಿಂತಿತ್ತು. ಶೀನು ಸಮೀಪಕ್ಕೆ ಬರುತ್ತಲೇ ಆ ಪುರುಷಾ ಕೃತಿ— ''ಬಾರೈಯ್ಯ ಶೀನು! ಬರುತ್ತೀಯೋ ಇಲ್ಲವೋ ಅಂತ ಸಂಶಯ ವಿತ್ತು! ವ್ಹಾರೆವ್ಹಾ ! ಚಿಂತೆಯಿಲ್ಲ ನೀನು!'' ಎಂದು ಮಮತೆಯಿಂದ ಅವನ ಹೆಗಲಮೇಲೆ ಕೈಹಾಕಿತು !

## ೧೩

''ಅದೇನು ? ನಾನು ಅಷ್ಟು ದೃಢ ಮನಸ್ಕನಲ್ಲವೆಂದು ಸಂಶ ಯವೋ?—''ಎಂದು ಶೀನು ಕೇಳಿದ.

"ಓಹೊ! ನೀನು ಅಚ್ಚ ಖಾದೀ ಬಟ್ಟೆಯನ್ನು ಧರಿಸಿದ್ದು ನೋಡಿದ ಮಾತ್ರಕ್ಕೇ ನಿನ್ನ ಹೃದಯವನ್ನು ನಂಬಿಬಿಡಬೇಕೇನು? ಅದರಲ್ಲಿ ಈಗ ನೀನು ಧರಿಸುವ ಈ ಬಟ್ಟೆ ಬನಿಯನ್ ಎಲ್ಲ ವಸ್ತ್ರಗಳು ಶುದ್ಧ ಖಾದೀಯಲ್ಲವಷ್ಟೆ?"

ಶೀನು ಅಪ್ರತಿಭನಾಗಿ "ನಿಜ! ನಿಜ!—" ಎಂದನು.

ಗೋಪಾಲನು ಅವನ ಬೆನ್ನು ತಟ್ಟುತ್ತ— "ಗೆಳೆಯಾ! ಖಾದೀ ಎಂದರೆ ಅದೊಂದು ವ್ರತ. ವ್ರತದಂತೆ ಪಾಲಿಸಬೇಕು ಅದನ್ನು. ಖಾದಿಯ ಹೊರತು ಅನ್ಯ ಬಟ್ಟೆ ಮುಟ್ಟುವುದಿಲ್ಲವೆಂಬ ಪಣತೊಟ್ಟರೇನೇ ಅದು ದೃಢವ್ರತವೆನಿಸುತ್ತದೆ. ಲಂಗೋಟಿಯ ಮೊದಲುಗೊಂಡು ಎಲ್ಲಾ ಖಾದಿಯೇ ಆಗಬೇಕು!"

"ಹಾಗಾದರೆ ಖಾದೀವ್ರತವನ್ನು ಸರಿಯಾಗಿ ಪಾಲಿಸದವರೆಲ್ಲ ದೇಶಸೇವೆಗೆ ವಿರೋಧಿಗಳೆಂದು ನಿನ್ನ ಅಭಿಪ್ರಾಯವೊ?" ಎಂದು ಶೀನು ಕೇಳಿದ.

ಮಾತಾಡುತ್ತಾ ಇಬ್ಬರೂ ಚಬುಕಿನ ತೋಪಿನೊಳಗೆ ನಡೆಯುತ್ತಿದ್ದರು.

"ಅಲ್ಲಲ್ಲ, ಗೆಳೆಯಾ! ಈಗ ಮುಕ್ಕಾಲು ಮೂರು ವೀಸ ಜನರೆಲ್ಲ ದೇಶಾಭಿಮಾನಿಗಳಾಗಿಯೇ ಇದ್ದಾರೆ ಗೋಣೀಚೀಲವೆಂದು ಖಾದಿಯನ್ನು ಅವಹೇಳನ ಮಾಡುವ ಕಾಲವು ಹೊರಟೇ ಹೋಯಿತು. ಆದರೆ ಎಲ್ಲರೂ ಖದ್ದರನ್ನು ಧರಿಸುವುದಿಲ್ಲವೇಕೆಂದರೆ, ಮುಖ್ಯ ಕಾರಣ ಬಡತನ. ಈಗ ಇಲ್ಲಿರುವ ಈ ಮೊಗೇರರೆಲ್ಲರೂ ಖಾದೀವ್ರತಧಾರಿಗಳೇನೂ ಅಲ್ಲ. ಆದರೂ ಅವರು ದೇಶಭಕ್ತಿಯಲ್ಲಿ ಹೇಗೆ ತುಂಬಿ ತುಳುಕುತ್ತಿರುವರೆಂದು ಇಂದು ನಿನಗೆ ಪ್ರತ್ಯಕ್ಷವಾಯಿತೋ ಇಲ್ಲವೊ? ಆದರೂ ಮುಂದಾಳುಗಳಾಗಿ ಹೋಗತಕ್ಕಂತಹರು ಖಾದೀವ್ರತವನ್ನು ಕೈಗೊಂಡೇ ತೀರಬೇಕು. ನೀನು ಮುಂದಾಳಾಗಿ ಹೋಗತಕ್ಕನಿದ್ದಿ ಶೀನು! "ಯದ್ಯದಾ ಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ" ಎಂಬ ಗೀತಾ ವಾಕ್ಯವು ನಿನಗೆ ಗೊತ್ತಿದೆಯಷ್ಟೆ?"

"ನಿಜ ಗೋಪಾಲ! ನಾನೀ ಕ್ಷಣದಲ್ಲಿಯೇ ಆ ವ್ರತಧಾರಣೆ ಮಾಡುತ್ತೇನೆ. ಆದರೆ—"

"ಆದರೆಗೀದರೆ ಏನೂ ಚಿಂತೆಬೇಡ ಬಾ —"

ಇಬ್ಬರೂ ಕೈಕೈ ಹಿಡಿದುಕೊಂಡು ನಡೆದರು. ಕೆಲವು ಗುಡಿಸಲು ಗಳ ಹಿಂದಾಗಿಯೂ, ಸುತ್ತಿಯೂ ಬಳಸಿಯೂ ನಡೆದು ಒಂದು ದೊಡ್ಡ ಹಂಚಿನ ಮನೆಯನ್ನು ತುಲಪಿದರು ಜಗುಲಿಯಲ್ಲಿ ಎಚ್ಚೆತ್ತು ಮಲಗಿದ್ದ ನಾಯಿ "ಒಳ್ಳ"ನೆ ಬೊಗಳಿ "ಯಾರೆಂ"ದು ಕೇಳಿತು ಗೋಪಾಲನು ಪರಿಚಯ ದನಿಗೊಟ್ಟು, ನಾಯಿಗೆ ಗುರುತು ಪಡಿಸಲು, ಅದು ಓಡಿಬಂದು ಅವನ ಕಾಲನ್ನು ಮೂಸಿ ನೆಕ್ಕಿ, ಶೀನುವನ್ನು ಸಂಶಯದಿಂದ ನೋಡು ತ್ತಿತ್ತು. ಅಷ್ಟರಲ್ಲಿ ಅದರ ದನಿಗೆ ಎಚ್ಚೆತ್ತ ಮನೆಯಾತನು ಬಾಗಿಲು ತೆರೆದು ಲಾಂದರವನ್ನು ಹಿಡಿದುಕೊಂಡು ಜಗುಲಿಗೆ ಬಂದನು. ಶೀನು ಆ ಮನುಷ್ಯನನ್ನು ನೋಡಿದ

ಬಂಡ ಸಾಲೆಯಲ್ಲಿ ಗಲಾಟೆಯನ್ನು ಕೆದರಿದ ಆ ಕಟ್ವಾಳು ವೊಗ ವೀರ ವೊದಲಿಗನೇ ಅವನೆಂದು ದೀಪದ ಬೆಳಕಿನಿಂದ ತಿಳಿಯಿತು.

"ನಿದ್ದೆ ಬಂದಿತ್ತೇ ವಾಮನ ಮರಕಾಲರೆ?" ಎಂದು ಅವನನ್ನು ಕುರಿತು ಗೋಪಾಲನು ಕೇಳಿದನು

"ಇಲ್ಲ—ಬನ್ನಿ ಒಳಗೆ"

ಇಬ್ಬರೂ ಮನೆಯೊಳಗೆ ಹೊಕ್ಕರು. ವಾಮನ ಮರಕಾಲನು ಹೊರಗಿನ ಚಾವಡಿಯಲ್ಲಿಯೇ ತಂಗಿದನು. ಗೋಪಾಲನು ಅವನ ಕೈಯ ಲ್ಲಿದ್ದ ಲಾಂದರವನ್ನು ತೆಗೆದುಕೊಂಡು ಶೀನುವನ್ನು ಕರೆದುಕೊಂಡು ಉಪ್ಪರಿಗೆಯ ಮೇಲಕ್ಕೇರಿದನು

ಅಲ್ಲೊಂದು ಒಳಗೋಣೆಯೊಳಗೆ ಗೋಪಾಲನು ಹೊಕ್ಕು, ಒಂದು ಟ್ರಂಕನ್ನು ತೆರೆದನು. ಅದರೊಳಗಿನಿಂದ ಒಂದು ಖಾದೀ ಬಟ್ಟೆಯನ್ನೂ ಅಂಗಿಯನ್ನೂ ತೆಗೆದು ಶೀನುವಿಗೆ ಕೊಡುತ್ತ— "ಧರಿಸು!" ಎಂದನು.

ಶೀನು ತನ್ನ ಭೂಷಣಗಳನ್ನೆಲ್ಲ ತೆಗೆದು ಹಾಕಿ, ಅವುಗಳನ್ನು ಧರಿಸಿಕೊಂಡನು. ಅನಂತರ ಗೋಪಾಲನು "ಗೆಳೆಯಾ, ಇನ್ನು ಈ ವಿದೇಶೀ ಬಟ್ಟೆಯನ್ನು ಏನು ಮಾಡುತ್ತಿ?"

ಶೀನೂ ಕೂಡಲೇ "ಸುಟ್ಟು ಹಾಕುತ್ತೇನೆ" ಎಂದನು.

"ಹೌದು! 'ಹಾಕು ಬೆಂಕಿಗೆ! ಉರಿಲಿ ಧಗಧಗ! ಧರಿಸು ಖಾದಿ— ಪವಿತ್ರವಾ!' ಶೀನು! ಮಹಾತ್ಮಾ ಗಾಂಧಿ ಬೆಳಸುವ ಸ್ವರಾಜ್ಯಯಜ್ಞಕ್ಕೆ

ವಿದೇಶೀ ವಸ್ತುಗಳೇ ಸಮಿಧೆಗಳು! ಹಿಂದೆ ಬೊಂಬಾಯಿಯ ಕಡಲಕರೆಯಲ್ಲಿ ಮೊತ್ತ ಮೊದಲ ಬಾರಿ ಮಹಾತ್ಮರು ಈ ಹೋಮವನ್ನು ಆರಂಭಿಸಿದರು. ಮಹಾಜಲಸಮುದ್ರದ ತಡಿಯಲ್ಲಿ ಮಹಾಜನಸಮುದ್ರವು ಸೇರಿತ್ತು ಮಹಾತ್ಮರು ಬೋಧಾಮೃತವನ್ನು ಸುರಿಸಿದರು. ಜನಮಧ್ಯದಲ್ಲಿ ವಿದೇಶೀ ವಸ್ತ್ರಗಳ ದೊಡ್ಡ ರಾಶಿ ಸೇರಿತ್ತು. ಮಹಾತ್ಮರು ತಮ್ಮ ಕೈಯಾರೆ ಆ ರಾಶಿಗೆ ಅಗ್ನಿ ಸಂಸ್ಕಾರ ಮಾಡಿದರು. ಉರಿಯುವ ಬೆಂಕಿಗೆ ನರರ ನೆರವಿನ ನಡುವಿನಿಂದ ಮೇಲೆ ಮೇಲೆ ಅಗಣಿತವಾದ ಬಟ್ಟೆಗಳೂ ಕೊಡೆಗಳೂ ಆಗಸದಲ್ಲಿ ಹಾರಿಹಾರಿ ಆ ಬೆಂಕಿಗೆ ಬಿದ್ದುವು. ಬೆಂಕಿ ಜ್ವಾಲಾಮಾಲೆಯಾಗಿ ಉರಿದು ಎಲ್ಲವನ್ನೂ ಬೂದಿಮಾಡಿ ಹಾಕಿತು. ಅನಂತರ ಅನೇಕ ಕಡೆಗಳಲ್ಲಿ ವಿದೇಶೀ ವಸ್ತ್ರ ಯಜ್ಞವು ನಡೆಯಿತು. ಅಂತಹ ಮಹತ್ವವಾದೊಂದು ಯಜ್ಞ ಶಾಖೆಯಿಂದ ನಿನ್ನ ಹೃದಯವು ಪರಿಶುದ್ಧವಾಗಲಿ! ಬಾ ಶೀನು!"

ಪುನಃ ಅಲ್ಲಿಂದ ಶೀನುವನ್ನು ಕರೆದುಕೊಂಡು ಗೋಪಾಲನು ಕಡಲಿನ ತೀರಕ್ಕೆ ಹೊರಟನು ಅಲ್ಲಿ ಬೆಳ್ಮರಳ ರಾಶಿಯ ಮೇಲೆ ಶೀನು ತನ್ನ ಆ ಮೂರು ವಿದೇಶೀ ವಸ್ತ್ರಗಳನ್ನು ಒಟ್ಟೆ ಬೆಂಕಿಕಡ್ಡಿಯನ್ನು ಗೀರಿ ಹಚ್ಚಿದನು. ನಿಮಿಷಾರ್ಧದಲ್ಲಿ ಅದು ಬೂದಿಯಾಗುವಾಗ "ಮಹಾತ್ಮಾ ಗಾಂಧೀ ಕೀ ಜೈ! ಭಾರತಮಾತಾ ಕೀ ಜೈ!" ಎಂದು ಅವರಿಬ್ಬರೂ ಉತ್ಸಾಹದಿಂದ ಘೋಷಿಸಿಕೊಂಡರು.

ಅನಂತರ ಅವರಿಬ್ಬರೂ ಅಲ್ಲಿಂದ ಹೊರಟು ವಾಮನ ಮರಕಾಲನ ಮನೆಯ ಉಪ್ಪರಿಗೆಯ ಕೋಣೆಯೊಳಗೆ ಸೇರಿಕೊಂಡರು ಗೋಪಾಲನೊಂದು ಜಮಖಾನೆಯನ್ನು ಹಾಸಿದನು ಲಾಂದರವನ್ನು ತುಸು ಸಣ್ಣದು ಮಾಡಿ ಬದಿಯಲ್ಲಿಟ್ಟನು. ಆ ಅಗಲವಾದ ಜಮಖಾನೆಯ ಮೇಲೆ ಇಬ್ಬರೂ ಕುಳಿತರು ಗೋಡೆಯಲ್ಲಿ ಕಪ್ಪಾಗಿ ಚಿತ್ರದಂತೆ ಬಿದ್ದಿದ್ದ ಅವರ ನೆರಳುಗಳು ಅವರನ್ನೆ ಅಣಕಿಸಿಕೊಳ್ಳುವಂತಿದ್ದುವು. ಅವರೂ ಆ ನೆರಳೂ ಹೊರತು ಇನ್ನಾರೂ ಅಲ್ಲಿಲ್ಲ.

ಉತ್ಸಾಹಿತನಾಗಿದ ಶೀನುವಿಗೆ ನಿದ್ದೆಯ ಸುಳಿವೇ ಕಾಣಲಿಲ್ಲ. ಗೋಪಾಲನಿಗೂ ಹಾಗೆಯೇ.— "ಶೀನು! ದೇಶಸೇವೆಯನ್ನು ಯಾವ

ರೀತಿಯಾಗಿ ಮಾಡಬೇಕೆಂದಲ್ಲವೇ ಈಗ ನಿನ್ನ ಪ್ರಶ್ನೆ? ಇದಕ್ಕೆ ಚಿಟುಕಾದ ಒಂದೇ ಉತ್ತರವೆಂದರೆ— ಹೋರಾಟದ ಮೂಲಕವಾಗಿ! ತಿಳಿಯಿತೆ?"

"ಅಂದರೆ?—ನಾನು ಯಾರೊಡನೆ ಹೋರಾಡಬೇಕು?"

"ನೀನು ಯಾರೊಡನೆಯೂ ಹೋರಾಡುವದಲ್ಲ! ನಾವು ಪರಕೀಯರೊಡನೆ ಹೋರಾಡುವುದು. ಹಾಗೆ ನೀರಿಗೆ ನೀರಾಗಿ ನಿಂತು ಹೋರಾಡುವ ಕಾಲವೇ ಈಗ ಸನ್ನಿಹಿತವಾಗಿದೆ. ನೋಡು, ಕಾಂಗ್ರೆಸ್ಸು ಮಹಾಸಭೆ ಹುಟ್ಟಿ ಅರ್ಧ ಶತಮಾನವೇ ಮೀರಿ ಹೋಯಿತು ಪರಕೀಯರ ಮೋಹನ ಬಂಧನದಲ್ಲಿ ಮಲಗಿದ ಪ್ರಜೆಗಳನ್ನು ಅದು ನಾನಾ ರೀತಿಯಾಗಿ ಎಬ್ಬಿಸಿ ಹಾಕಿತು. ಜನತೆಯಲ್ಲಿ ಸ್ವಾತಂತ್ರ್ಯದಾಹವನ್ನು ಹೆಚ್ಚಿಸಿತು. ಕಟುಕಾಯಿದೆಗಳನ್ನು ಭಂಗಿಸಿತು. ರಕ್ತವನ್ನು ಕೂಡಾ ಬಸಿಸಿತು. ಹಾಗೆ ಈ ಸಂಸ್ಥೆ ಮಹಾ ಪ್ರಬಲವಾಗಿ ದೇಶದಾದ್ಯಂತವೂ ಹರಡಿ ಅಚಲವಾಯಿತು. ಶೀನೂ, ಈಗ ಈ ಹೋರಾಟದ ಮುಖಂಡರು ಸಾಕ್ಷಾತ್ ಮಹಾತ್ಮರು! ಅವರ ಆಯುಧವು ಅಹಿಂಸಾ! ಆದುದರಿಂದಲೇ ವಿಜಯಕ್ಕೆ ನಿಧಾನವಾಗುತ್ತಿದೆ. ಅಹಿಂಸಾಯುಧದ ಮೂಲಕವಾಗಿ ಜರುಗುವ ಈ ಹೋರಾಟವು ನಿಧಾನದಲ್ಲಿ ವಿಜಯವನ್ನು ತರುವಂತಹುದಾದರೂ, ಆ ವಿಜಯವೇ ಸುಚಿರವಾಗಿ ನೆಲೆಸುವಂತಹುದೂ ಹೌದು. ಸ್ವಾತಂತ್ರ್ಯದಾಹದಿಂದ ಆತುರರಾಗಿ ತುಡುಕುವ ಪ್ರಜೆಗಳಿಗೆ ಅಷ್ಟು ತಾಳ್ಮೆ ಹೇಗೆ ಬಂದೀತು? ಬಂದಿದೆ! ಮಹಾತ್ಮರ ಮೇಲಿರುವ ಅಚಲವಾದ ವಿಶ್ವಾಸದಿಂದ-ಶ್ರದ್ಧೆಯಿಂದ-ನಂಬಿಗೆಯಿಂದ ಅದು ಬಂದಿದೆ! ಇದುವರೆಗೂ 'ತಾಳಿರಿ ತಾಳಿರಿ' ಎಂದು ಮಹಾತ್ಮರು ಕೈಯಡ್ಡಹಿಡಿದು ನಿಂತುದರಿಂದಲೇ ಪ್ರಜೆಗಳಿನ್ನೂ ಸೈರಿಸಿಕೊಂಡಿದ್ದಾರೆ! ಈಗ ಅದು ಮಿತಿಯ ಎಲ್ಲೆಯಲ್ಲೇ ಬಂದು ನಿಂತಿದೆ. ಮಹಾತ್ಮರ ಶಾಂತಿಮಂತ್ರವು ನಿಲ್ಲುವ ಮುಹೂರ್ತವನ್ನೆ ಕಾಯುತ್ತಿದೆ ಆ ಶಾಂತಿವಾದನವು ನಿಲ್ಲಬಾರದೆಂದು ವೈಸ್ರಾಯಿ ವೇವಲ್ಲ, ಬ್ರಿಟಿಷ್ ಮಂತ್ರಿ ಚರ್ಚಿಲ್ಲ, ರಾಯಭಾರಿ ಕ್ರಿಪ್ಸ್, ಮುಂತಾದ ತಾಂತ್ರಿಕ ಮುತ್ಸದ್ದಿಗಳೆಲ್ಲ ಶತಭಗೀರಥ ಪ್ರಯತ್ನ ಮಾಡುತ್ತಿದ್ದಾರೆ. ಏನೇನೋ ಆಶೆಭರವಸೆಗಳನ್ನೂ ತೋರಿಸುತ್ತಿದ್ದಾರೆ. ಆದರೆ ನಮ್ಮ ಮುಖಂಡರು ಅವುಗಳಿಗೆಲ್ಲ ಇನ್ನು ಮೋಸ ಹೋಗುವರೆ? ಕಟ್ಟಕಡೆಯ ಕ್ರಿಪ್ಸ್ ರಾಯಭಾರಿಕೆಯೂ ಮುರಿದು ಬಿತ್ತು.. ಮೊನ್ನೆ

ಬೊಂಬಾಯಿಯ ಮಹಾಸಭೆಯಲ್ಲಿ ಮಹಾತ್ಮರು, ಇನ್ನು ಶಾಂತಿವಾಚನವು ಸಾಕೆನ್ನುವ ಧೋರಣೆಯಲ್ಲಿಯೇ ಮಾತಾಡಿಬಿಟ್ಟರು. 'ಬ್ರಿಟಿಷ್ ಚಕ್ರಾಧಿಪತ್ಯವೆ ! ತೊಲಗು! ತೊಲಗು!' ಎಂದು ಅಖಿಲ ಪ್ರಜಾಮುಖವಾಗಿ ಗರ್ಜನೆ ಮಾಡಿದರು! ಈವರೆಗೂ ಅವರು ಹಾಗೆ ಹೇಳಿದ್ದಿಲ್ಲ! ಗೆಳೆಯಾ! ಈ ಮಾತಿನ ಪರಿಣಾಮವು ಪ್ರಜೆಗಳ ಮೇಲೆ ಯಾವ ರೀತಿಯಾಗಿ ಆಗುತ್ತಿರುವುದೆಂದು ಕಣ್ಣಿನ ಮೇಲೆ ಕಣ್ಣಿಟ್ಟು ನೋಡುತ್ತಿದ್ದಾರೆ ಆ ಮಹಾತ್ಮರು! ಅವರು ನಿರೀಕ್ಷಿಸುವಂತೆಯೇ ಆಗುವ ಭರವಸೆಯೂ ಕಾಣುತ್ತಿದೆ! ಇಡೀ ಭಾರತ ದೇಶವು ಒಳಗೊಳಗೇ ಉಬ್ಬುತ್ತ, ಒಳಗೊಳಗೇ ನಿಗಿನಿಗಿಸುತ್ತಿದೆ ಈಗ! ಯಾವಕಾಲಕ್ಕೆ ಎಲ್ಲಿ ಸ್ಫೋಟವಾಗಿ ದಳ್ಳುರಿ ಎದ್ದೀತೋ! ನೋಡು! ಏನೂ ಚೇತನವಿಲ್ಲದಂತೆ ಕಾಣುವ ಈ ಸಣ್ಣ ಗ್ರಾಮದಲ್ಲಿಯೇ ಇಂದು ನಡೆದ ಅನಿರೀಕ್ಷಿತ ಘಟನೆಯನ್ನು ನೋಡಿದಿಯಾ? ಕೊನೆಯ ಹೋರಾಟಕ್ಕೆ ದೇಶವು ಪರಿಪಕ್ವವಾಗಿರುವುದೆಂಬುದಕ್ಕೆ ಇದೇ ಉದಾಹರಣೆ ಸಾಕು

ಆದರೂ ಬರುವ ಆಗೋಸ್ತು ತಿಂಗಳಲ್ಲಿ ಸೇರುವ ಕಾಂಗ್ರೆಸ್ ಮಹಾಸಭೆಯಲ್ಲಿ ಕೊನೆಯ ತೀರ್ಮಾನವಾಗಲಿದೆ. ಅಷ್ಟರೊಳಗೆ ಕೊನೆಯ ಕಾರ್ಯಕ್ರಮಗಳೆಲ್ಲ ದೇಶದಲ್ಲೆಲ್ಲ ಪ್ರಚಾರವಾಗಬೇಕು. ಒಂದೊಂದು ಗ್ರಾಮದಲ್ಲಿಯೂ ಒಂದೊಂದು ದೇಶೀಯ ಸೇನೆ ಸೃಷ್ಟಿಯಾಗಬೇಕು. ಊರೂರು ಗ್ರಾಮಗ್ರಾಮಗಳಲ್ಲಿ ಅಲೆದು ಜನರ ಸಮ್ಮತಿಯನ್ನು ಪಡೆಯಬೇಕು. ನಾನೀಗ ಅದೇ ಕಾರ್ಯವನ್ನು ಕೈಕೊಂಡಿದ್ದೇನೆ ಶೀನು ! ನೀನೂ ಅದನ್ನೇ ಕೈಗೊಳ್ಳು! ಏನು ಗೆಳೆಯಾ ? ಈ ಕಾರ್ಯವನ್ನು ಕೈಗೊಂಡು ಪ್ರವಾಸ ಹೊರಡಬಲ್ಲೆಯಾ?"

ಗೋಪಾಲನ ದೀರ್ಘ ಭಾಷಣವನ್ನು ಆಸ್ಥೆಯಿಂದ ಕೇಳುತ್ತಿದ್ದ ಶೀನು, ಕೂಡಲೇ ಉತ್ತರ ಕೊಟ್ಟನು.— "ಹೊರಡುವೆನು ಮಿತ್ರಾ, ಸಂತೋಷವಾಗಿ ಹೊರಡುವೆನು. ಆ ಪ್ರವಾಸಕಾರ್ಯದ ರೂಪರೇಷೆ ವಿಧಾನಗಳನ್ನು ತಿಳಿಸು'' ಎಂದನು.

ಗೋಪಾಲನು ಲಾಂದರವನ್ನು ಬದಿಗೆಳೆದುಕೊಂಡು ಟ್ರಂಕು ಪೆಟ್ಟಿಗೆಯೊಳಗಿನಿಂದ ಕೆಲವು ಕಾಗದಗಳನ್ನು ತೆಗೆದನು. ಅದರಲ್ಲಿ ಪ್ರಚಾರ ಕಾರ್ಯಕ್ರಮಗಳು ವಿವರವಾಗಿ ಮುದ್ರಣವಾಗಿದ್ದವು. ಜನ

ತೆಯ ಒಪ್ಪಿಗೆಯ ದೃಢತೆಯನ್ನು ತೋರಿಸುವ ಚಿಕ್ಕಚಿಕ್ಕ ಪುಸ್ತಕಗಳೂ ಕೆಲವಿದ್ದುವು. ಅವುಗಳಲ್ಲಿ ಜನರ ಸಹಿಗಳನ್ನು ಪಡೆಯಬೇಕಾಗಿತ್ತು. ಇದರ ಪ್ರಚಾರಕ ಸೇವಕನಾಗಿ ಹೊರಡಲು ಶೀನು ದೀಕ್ಷೆ ಪಡೆದನು.

ಗೋಪಾಲನು ಮತ್ತೆ ಹೀಗೆ ವಿವರಿಸಲಾರಂಭಿಸಿದನು. "ಶೀನು, ಈ ಕಾರ್ಯವು ಬಹಳ ರಹಸ್ಯವಾಗಿಯೇ ಸಾಗಬೇಕು ತಿಳಿಯಿತೆ? ಇದಕ್ಕೆ ನೀನು ಭಾಷಾ ಸೇವಕನಾಗಿರುವುದು ತುಂಬ ಪೋಷಕವೇ ಆಯಿತು. ನೀನು ನಿನ್ನ ಕೆಲವು ಪುಸ್ತಕಗಳನ್ನು ಹಿಡಿದುಕೊಂಡು ಅದರ ಪ್ರಚಾರಕನಾಗಿ ಹೊರಡಬಹುದು ಮಂಗಳೂರು ಕೇಂದ್ರ ಕಚೇರಿಯ ಮುದ್ರಾಪತ್ರವನ್ನು ತೋರಿಸಿದರೆ ಯಾವ ಊರಿನ ಯಾವ ಶಾಖೆಯ ಕಾಂಗ್ರೆಸ್ ಕಚೇರಿಯವರಾದರೂ ನಿನಗೆ ಬೇಕಾದ ಸಹಾಯನ್ನು ಮಾಡುವರು. ಕೆಲವು ಕಡೆ ನೀನು ಬಹಿರಂಗ ಸಭೆಯಲ್ಲಿ ಮಾತಾಡಬೇಕು ನಿನಗೆ ಹೇಗೂ 'ಸಾಹಿತಿ' ಎಂಬ ದೊಡ್ಡ ಹೆಸರುಂಟು. ಜನರ ನೆರವಿಯನ್ನು ಸೇರಿಸಲು ಅದು ನಿನಗೆ ಅನುಕೂಲವಾದೀತು. ಕೆಲವು ಕಡೆ ನೀನು ಇನ್ನೊಬ್ಬರ ಮೂಲಕವಾಗಿ ಕಾರ್ಯ ಸಾಧಿಸಬೇಕಾದೀತು. ಕೆಲವು ಕಡೆ ನೀನು ಅಡಗಿಕೊಂಡು ರಹಸ್ಯವಾಗಿರಲೂ ಬೇಕಾದೀತು. ಅಲ್ಪಸ್ವಲ್ಪಕ್ಕೆಲ್ಲ ಅರೆಸ್ಟಾಗುವಂತೆ ಸಿಕ್ಕಿಬೀಳಬಾರದು. ಮುಖ್ಯವಾಗಿ ಈ ಕೊನೆಯ ಹೋರಾಟದ ಕಾರ್ಯಕ್ರಮಗಳು ಎಲ್ಲರಿಗೂ ಚೆನ್ನಾಗಿ ಮಂದಟ್ಟಾಗುವಂತೆ ಮಾಡಬೇಕು. ಪ್ರಜೆಗಳೆಲ್ಲಾ ಸಿದ್ಧರಾಗಿರುವಂತೆ ಮಾಡಬೇಕು. ಒಪ್ಪಿತ ಸಹಿ ತುಂಬಿದ ಪುಸ್ತಕಗಳನ್ನು ಆಗಾಗಳೇ ಆ ಆ ಊರಿನ ಪ್ರಧಾನ ಕಾರ್ಯಾಲಯಕ್ಕೆ ಕಳುಹಿಸುತ್ತಿರಬೇಕು. ಶೀನೂ ! ಧೈರ್ಯಬೇಕು ! ಕಷ್ಟ ಸಹಿಷ್ಣುತೆ ಬೇಕು! ಕೊನೆಗೆ ಜೀವದ ಹಂಗು ಕೂಡ ಬಿಟ್ಟವನಾಗಿರಬೇಕು! ಏನು ಗೆಳೆಯಾ! ನಿನ್ನಲ್ಲಿ ನಿನಗೆ ನಂಬುಗೆಯಿದೆಯೆ ? "

## ೧೪

ಶೀನು ಉತ್ಸಾಹದ ದೃಢಸ್ವರದಿಂದ—"ಇದೆ. ಗೆಳೆಯಾ! ನಂಬುಗೆಯಿದೆ. ಈ ದಿವ್ಯ ಸೇವಾಕಾರ್ಯದಲ್ಲಿ ಒಂದು ವೇಳೆ ನನ್ನ ಜೀವವೇ

ಅರ್ಪಣವಾದರೂ ಆಗಲಿ. ನನಗೇನು? ಹೆಂಡತಿಯೆ? ಮಕ್ಕಳೆ? ಆಸ್ತಿಯೆ? ಬದುಕೆ? ದೊಡ್ಡ ಜಮೀನುದಾರನ ಮಗನಾದ ನೀನೇ ಎಲ್ಲವನ್ನೂ ತ್ಯಾಗಮಾಡಿ, ಅಪಾಯಕಾರಿಯಾದ ಈ ಜನತಾ ಸೇವೆಯಲ್ಲಿ ಇಳಿದಿರುವಾಗ ನಾನೆಷ್ಟರವನು? ಗೋಪಾಲ! ನಿನ್ನ ಹಕ್ಕಿನ ವಧುವಾದ ಮಲ್ಲಿಕೆಯಂತಹ ಕನ್ಯಾರತ್ನವನ್ನು ಕೂಡ ಮದುವೆ ಮಾಡಿಕೊಳ್ಳದೆ ಕಠಿನ ಪ್ರತಿಜ್ಞೆ ಮಾಡಿಕೊಂಡಿದ್ದಿ ಎಂದೂ ಕೇಳಿದ್ದೇನೆ ಗೊತ್ತಿದೆಯಷ್ಟೆ? ಈಗ ನಿನ್ನ ಮಲ್ಲಿಕೆ ನಮ್ಮ ಮನೆಯಲ್ಲಿದ್ದಾಳೆ. ನನ್ನ ತಮ್ಮ..........."

"ಹೋ! ಗೊತ್ತಿದೆ! ಗೊತ್ತಿದೆ! ನನಗೆ ಬಹಳ ಸಂತೋಷ!"

"ಮಲ್ಲಿಕೆ ನಿನಗೇ ತಕ್ಕ ವಧುವಾಗಿದ್ದಳು ಗೋಪಾಲ. ಗುಣದಲ್ಲಿ, ರೂಪದಲ್ಲಿ, ನಡೆನುಡಿಯಲ್ಲಿ ಭಾವನೆಗಳಲ್ಲಿ ಅವಳೇ ನಿನಗೆ ತಕ್ಕವಳಿದ್ದಳು. ಇನ್ನಾದರೂ ನೀನು ಉತ್ತಮ ಕನ್ಯಾರತ್ನದೊಂದಿಗೆ ವಿವಾಹಿತನಾಗಬೇಕೆಂಬುದು ನನ್ನ ಪ್ರಬಲೇಚ್ಛೆ. ಆದರೆ ನಿನ್ನ ಪ್ರತಿಜ್ಞೆಯನ್ನು ನೆನೆಯುವಾಗ ಮಾತ್ರ ನನಗೆ ಗಾಬರಿಯಾಗುತ್ತದೆ ಗೋಪಾಲ!"

"ಏಕೆ?"

"ಸ್ವಾತಂತ್ರ್ಯ ಸಿಕ್ಕದೆ ವಿವಾಹಮಾಡಿಕೊಳ್ಳುವುದಿಲ್ಲವೆಂದು ನೀನು ಪ್ರತಿಜ್ಞೆ ಮಾಡಿಕೊಂಡಿದ್ದೀಯಂತೆ?"

"ಓಹೋ"

"ಅದು ಯಾವ ಕಾಲಕ್ಕೋ! ಎಂತೋ! ಏನೊ!"

"ಒಂದೆರಡು ವರ್ಷದೊಳಗೆ ಏನಾದರೊಂದು ಆಗಿಯೇ ತೀರಬೇಕು ತೀನು!"

"ಖಂಡಿತವೇನು ಗೋಪಾಲ? ಯುದ್ಧದಲ್ಲಿ ಸೋಲು ಗೆಲುವುಗಳು ಹೇಗೆ ಈಶ್ವರಾಧೀನವೋ, ಹಾಗೆಯೇ ಇದು ಕೂಡಾ. ಆದ್ದರಿಂದ ನನಗೆ ತೋರುವುದೇನಂದರೆ, ನೀನು ಪ್ರತಿಜ್ಞೆಯನ್ನು ಮಾರ್ಪಡಿಸಿಕೊಳ್ಳುವುದು ಲೇಸು."

"ಹೇಗೆ?"

"ದೇಶಕ್ಕೆ ಸ್ವಾತಂತ್ರ್ಯ ಸಿಕ್ಕುವವರೆಗೆ, ಎಂಬುದಕ್ಕೆ ಬದಲಾಗಿ ಇಂತಿಷ್ಟು ವರ್ಷದ ವರೆಗೆ ಎಂದು ವ್ಯತ್ಯಾಸಪಡಿಸಿದರಾಯಿತು!"

"ಆಯಿತು ಹಾಗೇ ಮಾಡುವ ಆಗ ನನಗೆ ಇಷ್ಟವಾದ ಕನ್ಯೆಯೊಂದಿಗೆ ನೀನೇ ವಿವಾಹಮಾಡುವಿಯಾ?"— ಗೋಪಾಲನು ಶೀನುವಿನ ಮುಖವನ್ನು ನಗುತ್ತಾ ನೋಡಿದನು.

ಶೀನು ಆಶ್ಚರ್ಯ ಲೇಪನದ ಪ್ರತಿ ನಗುವಿನೊಂದಿಗೆ, "ನಾನೆ? ನಿನಗೆ ವಿವಾಹ ಮಾಡುವುದೆ? ನಿನಗೇನು ಕಡಮೆಯಪ್ಪ? ತಂದೆ-ತಾಯಿ-ಅಣ್ಣ-ತಮ್ಮ-ಮಾವ-ಬಾವ, ಮೊದಲಾದೆಲ್ಲರೂ ಇದ್ದಾರೆ ನಿನಗೆ! ನನ್ನಂಥ ಪರದೇಶಿಯಿಂದ ನಿನಗೇನು ವಿವಾಹವಾದೀತಯ್ಯ?"

"ನಿನ್ನಿಂದಲೇ ಆಗುವಂಥಾದ್ದು! ನನಗೆ ಯಾರಿದ್ದರೇನು? ಮದುವೆಯೆಂಬುದು ನನ್ನ ಸ್ವಂತ ವಿಷಯ. ಪ್ರೀತಿಯ ಗೆಳೆಯನಾದುದರಿಂದ ಈಗ ನಿನ್ನೊಡನೆ ಹೇಳುತ್ತೇನೆ ಕೇಳು. ನನ್ನ ಹೃದಯದೊಳಗೆ ಒಬ್ಬಳು ಕನ್ಯೆ ಎಂದೋ ಹೊಕ್ಕಿರುತ್ತಾಳೆ. ಈಗಲ್ಲ; ಬಹಳ ವರ್ಷಗಳ ಹಿಂದೆ. ಚಿಕ್ಕಂದಿನಲ್ಲಿ!

ಆಗ ನಾನು ಈ ಊರಿನ ಹೈಸ್ಕೂಲಿನಲ್ಲಿ ಸಿಕ್ಸ್ತ್ ಫಾರಂನಲ್ಲಿದ್ದೆ ಒಂದು ದಿನ ನಾನು ಮೂಡುಗುಡ್ಡೆಯ ತೋಡಿನ ದಾರಿಯಾಗಿ ಶಾಲೆಗೆ ಹೋಗುತ್ತಾ ಇದ್ದೆ. ನಾನು ತೋಡಿನಿಂದ ಮೇಲೆ ಹತ್ತಿ, ಅಲ್ಲಿಯೇ ಒಂದು ಕುಂಟಾಲ ಪೊದರಿನಿಂದ. ಕುಂಟಾಲಹಣ್ಣು ಕೊಯ್ದು ಬಾಯಿಗೆ ಹಾಕಿಕೊಳ್ಳುತ್ತಿದ್ದೆ. ಆಗ ಆ ತೋಡಿನಲ್ಲಿ ಒಬ್ಬಳು ಹುಡುಗಿ ಬಂದಳು. ತೋಡಿನಿಂದ ಮೇಲೆ ಹತ್ತಲಿಕ್ಕೆ ಅವಳಿಂದಾಗದೆ ಅತ್ತಿತ್ತ ನೋಡಿದಳು. ಎಲ್ಲಿಯೂ ಅವಳಿಗೆ ಹತ್ತಲು ಅನುಕೂಲವಾದ ಜಾಗೆ ಸಿಕ್ಕಲಿಲ್ಲ. ಆಗ ಅವಳು ನನ್ನನ್ನು ನೋಡಿ,— "ಸ್ವಾಮಿ, ನನ್ನ ಕೈ ಸ್ವಲ್ಪ ಹಿಡಿತೀರಾ?" ಎಂದು ತನ್ನ ಚೆಂದಳಿರಿನಂತಹ ಕೈಯನ್ನು ಮೇಲೆ ಚಾಚಿದಳು. ನೋಡಿದೆ. ಬಲು ಮುದ್ದಾದ ಹುಡುಗಿ. ಅದಕ್ಕೆ ಮೊದಲು ಶಾಲೆಯಲ್ಲಿ ನಾನು ಅವಳನ್ನು ನೋಡಿದ್ದೆ. ಆಗೆಲ್ಲಾ ನನಗೇನೂ ವಿಶೇಷವಿನಿಸಲಿಲ್ಲ. ಈಗ ಏನೋ ವಿಶೇಷವೆನಿಸಿತು. ಅವಳು ಕೈಯಲ್ಲಿ ಪುಸ್ತಕ ಸಂಚಿಯನ್ನು ಹಿಡಿದುಕೊಂಡು ಶಾಲೆಗೇ ಹೊರಟಿದ್ದಳು. ನಾನು ಮೊದಲೇ ಸ್ವಲ್ಪ ತುಂಟನಷ್ಟೆ? ಅಂತೆಯೇ ನನಗೆ ಸ್ವಲ್ಪ ತಮಾಷೆ ಮಾಡೋಣವೆನಿಸಿತು. "ಕೈ ಹಿಡಿಯಬೇಕೆ? ಕೈ ಹಿಡಿದು ಬಿಟ್ಟರೆ ನಾನು ನಿನ್ನ ಗಂಡನಾಗುತ್ತೇನಲ್ಲ!" ಎಂದು ಮುಗುಳ್ನಗುತ್ತ.

"ಆ" ಎಂದು ಅವಳು ಮುಗುಳು ಬಾಯಿಯನ್ನು ಅರೆದೆರೆದು ಎರಳೆ ಕಣ್ಣುಗಳಿಂದ ಪಿಳಿಪಿಳಿ ನನ್ನ ಮುಖವನ್ನು ನೋಡಿದಳು.

"ಹೌದು ಹೌದು. ಹುಡುಗಿಯು ಕೈ ಹುಡುಗ ಹಿಡಿದು ಬಿಟ್ಟರೆ ಅವಳಿಗೆ ಅವನೇ ಗಂಡ! ನಾನು ನಿನಗೆ ಗಂಡನಾದರೆ ಆದೀತೇ ಹೇಳು. ಕೈ ಹಿಡೀತೇನೇ'' ಎಂದೆ ನಾನು.

ಕೂಡಲೇ ಆ ಹುಡುಗಿಗೆ ನಾಚಿಕೆ ಕವಿಯಿತು. ತಲೆತಗ್ಗಿಸಿ ನಿಂತು ಬಿಟ್ಟಳು

"ಏನನ್ನುತ್ತಿ?'' ಅಂತ ನಾನು ಪುನಃ ಕೇಳಿದೆ.

"ನೀವು ನನ್ನ ಕೈ ಹಿಡಿಯೋದಿಲ್ಲವಾ ಹಾಗಾದರೆ?" ಎಂದಳು ಮೆಲ್ಲನೆ.

"ಹಿಡೀತೇನೆ. ನನಗೆ ನೀನು ಹೆಂಡತಿಯಾದರೆ ಆದೀತು. ನಿನಗೆ ನಾನು ಗಂಡನಾದರೆ ಆದೀತಾದರೆ ಕೈ ಮೇಲೆ ಎತ್ತು." ಎಂದೆ ನಾನು.

ಅವಳು ನಾಚಿಕೆಯ ನಗುವನ್ನು ಮುಖ ಪೂರಾ ತುಂಬಿಸಿಕೊಂಡು, ಕೈ ಮೇಲೆ ಎತ್ತಿದಳು

ಅವಳು ದಿಟ್ಟತನದಿಂದ—"ಈಗ ನಾನು ಸಣ್ಣವಳು. ನನಗೊಂದೂ ಗೊತ್ತಿಲ್ಲ" ಎಂದಳು.

"ನಾನೂ ಸಣ್ಣವ; ನನಗೂ ಒಂದೂ ಗೊತ್ತಿಲ್ಲ. ನಾನು ದೊಡ್ಡವನಾಗುವಾಗ ನೀನೂ ದೊಡ್ಡವಳಾಗುತ್ತೀ'' ಎಂದು ನಾನಂದೆ.

ಹಾಗೆಯೇ ಅವಳನ್ನು ಎತ್ತಿ ಮೇಲೆ ತೆಗೆದೆ ಅವಳು ಏನೂ ಮಾತಾಡದೆ ಮುಂದೆ ಮುಂದೆ ನಡೆದಳು. "ಏನೇ ಓಡಿಯೇ ಹೋಗುತ್ತಿ? ನಿನ್ನನ್ನು ತೋಡಿನಿಂದ ಮೇಲೆತ್ತಿದ್ದಕ್ಕೆ ನನಗೆ 'ಥ್ಯಾಂಕ್ಸ್' ಅಂತ ಅನ್ನಬೇಡವೇ?'' ಎಂದೆ ನಾನು ಅವಳ ಹಿಂದೆ ಹಿಂದೆ ಹೋಗುತ್ತಾ.

''ನನಗದು ಗೊತ್ತಿಲ್ಲ.''

''ನಾನು ಹೇಳಿಕೊಡುತ್ತೇನೆ. ತುಂಬ ಥ್ಯಾಂಕ್ಸ್ ಅಂತ ಹೇಳು."

''ಹುಂ. ತುಂಬ ಥ್ಯಾಂಕ್ಸ್"

"ನಿನ್ನ ಹೆಸರು ಹೇಳಲೇ ಇಲ್ಲವಲ್ಲ?"

"ನಿಮ್ಮ ಹೆಸರು ನೀವು ಹೇಳಿದಿರಾ?-- '' ಎಂದು ಅವಳ ಮರುಪ್ರಶ್ನೆ.

"ಆಯಿತು ಹಾಗೇ ಮಾಡುವ ಆಗ ನನಗೆ ಇಷ್ಟವಾದ ಕನ್ಯೆಯೊಂದಿಗೆ ನೀನೇ ವಿವಾಹಮಾಡುವಿಯಾ?"— ಗೋಪಾಲನು ಶೀನುವಿನ ಮುಖವನ್ನು ನಗುತ್ತಾ ನೋಡಿದನು.

ಶೀನು ಆಶ್ಚರ್ಯ ಲೇಪನದ ಪ್ರತಿ ನಗುವಿನೊಂದಿಗೆ, "ನಾನೆ? ನಿನಗೆ ವಿವಾಹ ಮಾಡುವುದೆ? ನಿನಗೇನು ಕಡಮೆಯಪ್ಪ? ತಂದೆ-ತಾಯಿ-ಅಣ್ಣ-ತಮ್ಮ-ಮಾವ-ಬಾವ, ಮೊದಲಾದೆಲ್ಲರೂ ಇದ್ದಾರೆ ನಿನಗೆ! ನನ್ನಂಥ ಪರದೇಶಿಯಿಂದ ನಿನಗೇನು ವಿವಾಹವಾದೀತಯ್ಯ?"

"ನಿನ್ನಿಂದಲೇ ಆಗುವಂಥಾದ್ದದು! ನನಗೆ ಯಾರಿದ್ದರೇನು? ಮದುವೆಯೆಂಬುದು ನನ್ನ ಸ್ವಂತ ವಿಷಯ. ಪ್ರೀತಿಯ ಗೆಳೆಯನಾದುದರಿಂದ ಈಗ ನಿನ್ನೊಡನೆ ಹೇಳುತ್ತೇನೆ ಕೇಳು. ನನ್ನ ಹೃದಯದೊಳಗೆ ಒಬ್ಬಳು ಕನ್ಯೆ ಎಂದೋ ಹೊಕ್ಕಿರುತ್ತಾಳೆ. ಈಗಲ್ಲ; ಬಹಳ ವರ್ಷಗಳ ಹಿಂದೆ. ಚಿಕ್ಕಂದಿನಲ್ಲಿ!

ಆಗ ನಾನು ಈ ಊರಿನ ಹೈಸ್ಕೂಲಿನಲ್ಲಿ ಸಿಕ್ಸ್ತ್ ಫಾರಂನಲ್ಲಿದ್ದೆ ಒಂದು ದಿನ ನಾನು ಮೂಡುಗುಡ್ಡೆಯ ತೋಡಿನ ದಾರಿಯಾಗಿ ಶಾಲೆಗೆ ಹೋಗುತ್ತಾ ಇದ್ದೆ. ನಾನು ತೋಡಿನಿಂದ ಮೇಲೆ ಹತ್ತಿ, ಅಲ್ಲಿಯೇ ಒಂದು ಕುಂಟಾಲ ಪೊದರಿನಿಂದ. ಕುಂಟಾಲಹಣ್ಣು ಕೊಯ್ದು ಬಾಯಿಗೆ ಹಾಕಿಕೊಳ್ಳುತ್ತಿದ್ದೆ ಆಗ ಆ ತೋಡಿನಲ್ಲಿ ಒಬ್ಬಳು ಹುಡುಗಿ ಬಂದಳು. ತೋಡಿನಿಂದ ಮೇಲೆ ಹತ್ತಲಿಕ್ಕೆ ಅವಳಿಂದಾಗದೆ ಅತ್ತಿತ್ತ ನೋಡಿದಳು. ಎಲ್ಲಿಯೂ ಅವಳಿಗೆ ಹತ್ತಲು ಅನುಕೂಲವಾದ ಜಾಗೆ ಸಿಕ್ಕಲಿಲ್ಲ. ಆಗ ಅವಳು ನನ್ನನ್ನು ನೋಡಿ,— "ಸ್ವಾಮಿ, ನನ್ನ ಕೈ ಸ್ವಲ್ಪ ಹಿಡಿಯೀರಾ?" ಎಂದು ತನ್ನ ಚೆಂದಳಿರಿನಂತಹ ಕೈಯನ್ನು ಮೇಲೆ ಚಾಚಿದಳು. ನೋಡಿದೆ. ಬಲು ಮುದ್ದಾದ ಹುಡುಗಿ. ಅದಕ್ಕೆ ಮೊದಲು ಶಾಲೆಯಲ್ಲಿ ನಾನು ಅವಳನ್ನು ನೋಡಿದ್ದೆ. ಆಗೆಲ್ಲಾ ನನಗೇನೂ ವಿಶೇಷವಿನಿಸಲಿಲ್ಲ. ಈಗ ಏನೋ ವಿಶೇಷವೆನಿಸಿತು. ಅವಳು ಕೈಯಲ್ಲಿ ಪುಸ್ತಕ ಸಂಚಿಯನ್ನು ಹಿಡಿದುಕೊಂಡು ಶಾಲೆಗೇ ಹೊರಟಿದ್ದಳು. ನಾನು ಮೊದಲೇ ಸ್ವಲ್ಪ ತುಂಟನಷ್ಟೆ? ಅಂತೆಯೇ ನನಗೆ ಸ್ವಲ್ಪ ತಮಾಷೆ ಮಾಡೋಣವೆನಿಸಿತು "ಕೈ ಹಿಡಿಯಬೇಕೆ? ಕೈ ಹಿಡಿದು ಬಿಟ್ಟರೆ ನಾನು ನಿನ್ನ ಗಂಡನಾಗುತ್ತೇನಲ್ಲ!" ಎಂದು ಮುಗುಳ್ನಗುತ್ತ.

"ಆ" ಎಂದು ಅವಳು ಮುಗುಳು ಬಾಯಿಯನ್ನು ಅರೆದೆರೆದು ಎರಳೆ ಕಣ್ಣುಗಳಿಂದ ಪಿಳಿಪಿಳಿ ನನ್ನ ಮುಖವನ್ನು ನೋಡಿದಳು.

"ಹೌದು ಹೌದು. ಹುಡುಗಿಯ ಕೈ ಹುಡುಗ ಹಿಡಿದು ಬಿಟ್ಟರೆ ಅವಳಿಗೆ ಅವನೇ ಗಂಡ! ನಾನು ನಿನಗೆ ಗಂಡನಾದರೆ ಆದೀತೇ ಹೇಳು. ಕೈ ಹಿಡೀತೇನೇ'' ಎಂದೆ ನಾನು.

ಕೂಡಲೇ ಆ ಹುಡುಗಿಗೆ ನಾಚಿಕೆ ಕವಿಯಿತು. ತಲೆತಗ್ಗಿಸಿ ನಿಂತು ಬಿಟ್ಟಳು.

"ಏನನ್ನುತ್ತಿ?'' ಅಂತ ನಾನು ಪುನಃ ಕೇಳಿದೆ.

"ನೀವು ನನ್ನ ಕೈ ಹಿಡಿಯೋದಿಲ್ಲವಾ ಹಾಗಾದರೆ?" ಎಂದಳು ಮೆಲ್ಲನೆ.

"ಹಿಡೀತೇನೆ. ನನಗೆ ನೀನು ಹೆಂಡತಿಯಾದರೆ ಆದೀತು. ನಿನಗೆ ನಾನು ಗಂಡನಾದರೆ ಆದೀತಾದರೆ ಕೈ ಮೇಲೆ ಎತ್ತು." ಎಂದೆ ನಾನು.

ಅವಳು ನಾಚಿಕೆಯ ನಗುವನ್ನು ಮುಖ ಪೂರಾ ತುಂಬಿಸಿಕೊಂಡು, ಕೈ ಮೇಲೆ ಎತ್ತಿದಳು

ಅವಳು ದಿಟ್ಟತನದಿಂದ—"ಈಗ ನಾನು ಸಣ್ಣವಳು. ನನಗೊಂದೂ ಗೊತ್ತಿಲ್ಲ" ಎಂದಳು.

"ನಾನೂ ಸಣ್ಣವ; ನನಗೂ ಒಂದೂ ಗೊತ್ತಿಲ್ಲ. ನಾನು ದೊಡ್ಡವನಾಗುವಾಗ ನೀನೂ ದೊಡ್ಡವಳಾಗುತ್ತೀ'' ಎಂದು ನಾನಂದೆ.

ಹಾಗೆಯೇ ಅವಳನ್ನು ಎತ್ತಿ ಮೇಲೆ ತೆಗೆದೆ ಅವಳು ಏನೂ ಮಾತಾಡದೆ ಮುಂದೆ ಮುಂದೆ ನಡೆದಳು. "ಏನೇ ಓಡಿಯೇ ಹೋಗುತ್ತಿ? ನಿನ್ನನ್ನು ತೋಡಿನಿಂದ ಮೇಲೆತ್ತಿದ್ದಕ್ಕೆ ನನಗೆ 'ಥ್ಯಾಂಕ್ಸ್' ಅಂತ ಅನ್ನ ಬೇಡವೇ?'' ಎಂದೆ ನಾನು ಅವಳ ಹಿಂದೆ ಹಿಂದೆ ಹೋಗುತ್ತಾ.

''ನನಗದು ಗೊತ್ತಿಲ್ಲ.''

''ನಾನು ಹೇಳಿಕೊಡುತ್ತೇನೆ. ತುಂಬ ಥ್ಯಾಂಕ್ಸ್ ಅಂತ ಹೇಳು."

''ಹುಂ. ತುಂಬ ಥ್ಯಾಂಕ್ಸ್"

"ನಿನ್ನ ಹೆಸರು ಹೇಳಲೇ ಇಲ್ಲವಲ್ಲ?"

"ನಿಮ್ಮ ಹೆಸರು ನೀವು ಹೇಳಿದಿರಾ?-- '' ಎಂದು ಅವಳ ಮರು ಪ್ರಶ್ನೆ.

"ನನ್ನ ಹೆಸರು ಗೋಪಾಲ"

"ನನ್ನ ಹೆಸರು ಗೌರಿ---"

''ಗೌರಿ? ನನ್ನ ತಂಗಿ ಗೌರಿಯೆ?—" ಎಂದು ಶೀನು ಆಶ್ಚರ್ಯಾನಂದದಿಂದ ಕೇಳುತ್ತ ಗೋಪಾಲನ ಕೈಯನ್ನು ಹಿಡಿದನು.

''ಹೌದು ಹೌದು. ಶೀನೂ, ನಿನ್ನ ತಂಗಿ ಗೌರಿಯೇ ಅವಳು ಅದು ನನಗೆ ಕ್ರಮೇಣ ಗೊತ್ತಾಯಿತಷ್ಟೆ ಆಗ ನಾನು ನನ್ನ ಸಾಹಜಿಕವಾದ ತುಂಟತನದ ಗೇಲಿಕೆಯಿಂದಲೇ ಹಾಗೆಲ್ಲ ವರ್ತಿಸಿದ್ದೆ. ಆಗ ಮತ್ತಾವಭಾವನೆಯೂ ನನ್ನ ಹೃದಯದಲ್ಲಿರಲಿಲ್ಲ. ಆಮೇಲೆ ಅವಳೊಡನೆ ಮಾತಾಡುವ ಸಂದರ್ಭವೂ ನನಗೆ ದೊರೆಯಲಿಲ್ಲ. ಅವಳು ಸಂಗೀತದಲ್ಲಿಯೂ, ನಾಟ್ಯದಲ್ಲಿಯೂ ಆ ಶಾಲೆಯ ಹುಡುಗಿಯರಲ್ಲೆಲ್ಲಾ ಮೇಲಾದವಳೆಂದೂ ಮತ್ತೆ ನನಗೆ ಗೊತ್ತಾಯಿತು ಅನಂತರ ನಾನು ಬೇಗದಲ್ಲಿಯೇ ಆ ಶಾಲೆ ಬಿಟ್ಟು, ಮಂಗಳೂರಿನ ಕಾಲೇಜನ್ನು ಸೇರಿದೆ. ಆಮೇಲೆ ನನ್ನ ಗತಿ ನಿನಗೆ ಗೊತ್ತೇ ಇದೆ—ಸುತ್ತಾಟ. ಆದರೆ ದಿನ ಹೋದಂತೆ ಹೋದಂತೆ, ಆ ಪ್ರಥಮ ಸಂಭಾಷಣೆಯ ಮೂಲಕವಾದ ಅವಳ ಜ್ಞಾಪಕವು, ಏನೇನೋ ಕಾಲ್ಪನಿಕ ಚಿಗುರುಗಳನ್ನು ಬಿಡುತ್ತ, ಸ್ಪಷ್ಟವಾಗುತ್ತ ಬರುತ್ತಿದೆ— ನನಗೇ ಆಶ್ಚರ್ಯ!—''

ಶೀನು ಆನಂದದಿಂದ— ''ಆಹಾ! ಗೋಪಾಲ! ನಿನ್ನ ಈ ಮಧುರ ರಹಸ್ಯವನ್ನು ಕೇಳಿ ನನ್ನ ಸಂತೋಷವನ್ನು ಎಷ್ಟೆಂದು ಹೇಳಲಿ? ಮಿತ್ರಾ! ಇನ್ನು ನೀನು ಹೇಳಲಿಕ್ಕಿರುವುದೆಲ್ಲವೂ ನನಗೆ ತಿಳಿದುಹೋಯಿತು. ಪ್ರೇಮದ ಒರತೆಯಿಲ್ಲದ, ಒಣನೆಲದಂತೆ ತೋರುವ ನಿನ್ನ ಹೃದಯದೊಳಗೆ, ಇಂತಹ ಅಮೃತದ ಬುಗ್ಗೆ ಇರುವುದೆಂದು ನಾನು ನೆನೆಯಲೇ ಇಲ್ಲ. ಆಹಾ! ನನ್ನ ತಂಗಿ ಗೌರಿಯ ಭಾಗ್ಯಕ್ಕೆ ಎಣೆಯೇ ಇಲ್ಲ!''

''ಹಾಗೇನು! ಹಾಗಾದರೆ ಶೀನು, ನಾನೂ ಧನ್ಯನಾದೆನು. ಅದಿರಲಿ, ಗೆಳೆಯಾ! ನೀನು ತಿಳಿಯುವಂತೆ ನಾನು ಹಾಗೇನೂ ಕಠಿನ ಪ್ರತಿಜ್ಞೆ ಮಾಡಿಯೇ ಇಲ್ಲ. ಅದು ಜನರೇ ತಿರುವಿಬಿಟ್ಟ ತಿರಿಕೆ. ಆದರೆ ಈಗಲೋ ನಾಳೆಯೋ ವಿವಾಹವಾಗುವಂತೆ ನಾನಿಲ್ಲ. ಇದೊಂದು ಹೋರಾಟವು ಯಾವ ರೀತಿಯಾಗಿ ತೀರ್ಮಾನವಾಗಿ ಹೋಗುವುದೋ ನೋಡಬೇಕು. ನಾನು ದೀಕ್ಷಾಬದ್ಧನಾದವನು. ಬದುಕಿದರೆ ಆಮೇಲೆ

ಮದುವೆ. ನೀನು ಧಾರೆಯೆರೆದು ಕೊಟ್ಟರೆ ಮಾತ್ರವೇ ನನ್ನ ಮದುವೆ. ಆದರೆ ಗೌರಿಗೆ ಈಗ ಇಷ್ಟವೋ ಅನಿಷ್ಟವೋ ಯಾರಿಗೆ ಗೊತ್ತು ? ಈಗ ಅವಳು ಎಲ್ಲಿದ್ದಾಳೆ ಶೀನು?"

"ಮಂಗಳೂರಿನ ಕಾಲೇಜಿನಲ್ಲಿ ಕಲಿಯುತ್ತಾಳೆ. ಈಗ ಇಂಟರಿ ನಲ್ಲಿದ್ದಾಳೆ............"

"ಓಹೊ! ಈಗ ಕಾಲೇಜಿಗೆ ರಜೆಯಲ್ಲವೆ?"

"ರಜೆಯಾದರೂ ಅವಳು 'ಮಂಜುಳಕಲಾನಿಲಯ'ದ ವಿದ್ಯಾರ್ಥಿನಿ ಯಾಗಿಯೂ ಇದ್ದಾಳೆ. ನಾಟ್ಯವನ್ನೂ ಸಂಗೀತವನ್ನೂ ಕಲಿಯುತ್ತಿ ದ್ದಾಳೆ. ಅದರಲ್ಲಿ ಅವಳಿಗೆ ಒಳ್ಳೆಯ ಅಭಿರುಚಿಯಿದೆ ಶೀನು. ನಾಟ್ಯಕ್ಕೆ ತಕ್ಕ ವ್ಯೆಮಾಟ! ಆದರೆ ಗೋಪಾಲ, ನಿನಗೆ ಇದು ಕಹಿ ಎನಿಸುವುದೋ ಏನೋ! ಇನ್ನು ನಿನ್ನ ಇಷ್ಟಾನುಸಾರವಾಗಿಯೇ ಅವಳನ್ನು ಪಳಗಿಸ ಬೇಕಷ್ಟೆ? ಕೆಲವರಿಗೆ ನಾಟ್ಯವೆಂದರೆ............"

"ಸಾಕು ಬಿಡು ಶೀನು. ಅಂಥ ಕೆಲವರಂತೆ ನಾನೆಂದು ತಿಳಿ ದಿಯಾ? ಅದೇ ನನಗೆ ಬಹಳ ಸಂತೋಷ. ಅವಳ ಅಭಿರುಚಿಗೆ ತಕ್ಕ ದಾರಿಯನ್ನೆ ಹಿಡಿದಿರುತ್ತಾಳೆ. ಶೀನು! ನನ್ನನ್ನು ಏನೋ ಎಂದು ತಿಳಿದು ಬಿಡಬೇಡ ನಾನು ಕಲಾವಿದನಲ್ಲದಿದ್ದರೂ ಕಲಾರಸಿಕನಿದ್ದೇನೆ. ಹೆಂಗುಸು ಸರಳವಾದ ನಡತೆಯಲ್ಲಿ, ನಾಟ್ಯ-ಸಂಗೀತ ಮೊದಲಾದ ಲಲಿತ ಕಲೆಗಳಲ್ಲಿ ಪ್ರವೀಣಳಾಗಿದ್ದರೆ, ಅವಳೊಬ್ಬಳು ದೇವಿಯೇ ಆಗುತ್ತಾಳೆ. ಸಾರ್ವಜನಿಕರಿಂದ ಅಂತಹ ದೇವೀತ್ವವನ್ನು ಪಡೆಯುವವಳೇ ನನ್ನ ಮಡದಿಯಾಗಬೇಕೆಂದು ನಾನು ಕನಸು ಕಾಣುತ್ತಿದ್ದೇನೆ ಶೀನು! ಆಹಾ! ಆ ಕನಸು ಮೂರ್ತಿವಂತವಾಗುವ ಭರವಸೆ ಇಂದು ನನಗೆ ದೊರೆಯಿತು. ಆದರೆ ಶೀನು! ನಿನ್ನ ತಂಗಿ 'ಮಂಜುಳಕಲಾನಿಲಯದ' ವಿದ್ಯಾರ್ಥಿನಿ ಯಾಗಿದ್ದರೆ ಸಾಲದು. ಮದರಾಸಿನಲ್ಲಿ 'ಮಹಿಳಾಭ್ಯುದಯ ಮಂಡಲಿ' ಎಂದು ಒಂದು ಸಂಸ್ಥೆಯಿದೆ. ಅಲ್ಲಿ ಕಲಾಶಾಖೆಯಲ್ಲಿ ಕಲಿತು ತರ ಬೇತಾದ ಮಹಿಳೆಯರು ಪವಿತ್ರ ಕೀರ್ತಿಯಿಂದ ವಿಖ್ಯಾತರಾಗುತ್ತಾರೆ. ಈಗ ಜಗದ್ವಿಖ್ಯಾತ ನರ್ತಕಿಯಾಗಿರುವ ವಿಮಲಾ ಕುಮಾರಿ ಅಲ್ಲಿಯೇ ಕಲಿತವಳು. ಅಲ್ಲಿ ಎಲ್ಲಾ ವಿಧದ ಕಲೆಗೂ ಒಳ್ಳೇ ನುರಿತ ಪ್ರವೀಣರಿಂದ

ಶಿಕ್ಷಣ ಕೊಡಿಸುತ್ತಾರೆ. ಗೌರಿಯನ್ನು ಅಲ್ಲಿಗೆ ಸೇರಿಸಿದರೆ ಸಾರ್ಥಕ ವಾದೀತು!"

ಶೀನು ಯೋಚನೆ ಮಾಡುತ್ತ— "ಗೋಪಾಲ! ಎಲ್ಲಕ್ಕೂ ಭಗವದ ನುಗ್ರಹವು ಬೇಕು. ದೇವರು ನಮ್ಮ ಕೋರಿಕೆಗಳನ್ನು ಈಡೇರಿಸಲಿ. ಗೋಪಾಲ! ನಾಡದು ನೀನು ನನ್ನೊಂದಿಗೆ ಮಂಗಳೂರಿಗೆ ಬರುತ್ತೀಯಾ? ಗೌರಿಯನ್ನು ನೋಡಿ ಮಾತಾಡೋಣ ದೇವರ ಅನುಗ್ರಹದಿಂದ ಶ್ರೀಮಾನ್ ಶ್ಯಾಮಸುಂದರರು ಅವಳನ್ನು ತಮ್ಮ ಮನೆಯಲ್ಲಿಯೇ ಇರಿಸಿ ಕೊಂಡು, ಮಗಳಂತೆ ಆರೈಕೆ ಮಾಡುತ್ತಿದ್ದಾರೆ!"

"ಹೌದೆ? ಹಾಗಾದರೆ ಅವಳ ಮೇಲೆ ದೇವರ ದಯವಿದೆಯೆಂದೇ ತಿಳಿ. ಅವಳಿಗೆ ಉಜ್ವಲ ಭವಿಷ್ಯವಿರುವುದೆಂದೇ ನಂಬು. ಹಾಗಾದರೆ ನಾಡದ್ದು ಮಂಗಳೂರಿಗೆ ಹೊರಡುವಿಯಾ?...........ಆದರೆ ನಾನು ನಿನ್ನ ಜತೆಯಲ್ಲಿ ಬರಲಾರೆ. ಮೊದಲೇ ನಾನು ಕ್ರಾಂತಿಕಾರ. ಜೈಲಿಗೆ ಹೋಗಿಬಂದವ ನನ್ನ ಬೆನ್ನ ಹಿಂದೆ ಯಾವ ಸಿ ಐ ಡಿ. ಯೋ ಯಾವ ಪೋಲೀಸನೋ! ಮೇಲೆ ನಿಮ್ಮ ಕೋಟಿ ಶೆಟ್ಟರ ಫುಕಾರು ಬೇರೆ. ಈಗ ಪೋಲೀಸರು ನನ್ನನ್ನು ಅರಸುತ್ತಿದ್ದಾರೆ ಗೊತ್ತೆ? ಅದಕ್ಕೇ ನಾನು ಮನೆಗೆ ಹೋಗದೆ ಇಲ್ಲಿ ಬಂದು ಅಡಗಿದ್ದೇನೆ. ಮುಂದೆಯೂ ಎಚ್ಚರದಲ್ಲಿರ ಬೇಕಾಯಿತು. ನನಗೂ ನಾಳೆ ಮಂಗಳೂರಿನಲ್ಲಿ ಕೆಲಸವಿದೆ. ನಿನಗೂ ಕೇಂದ್ರ ಕಾರ್ಯ ಸಂಚಾಲಕರ ಪರಿಚಯ ಮಾಡಿಸುತ್ತೇನೆ. ನಾಡದು ಸಾಯಂಕಾಲ ಐದೂವರೆ ಗಂಟೆಯ ಸಮಯಕ್ಕೆ ಬಾವಟೆಗುಡ್ಡೆಯಲ್ಲಿ ನಿನ್ನನ್ನು ಸಂಧಿಸುವೆನು................"

ಹೀಗೆ ಇವರು ಮಾತುಕತೆಯಾಡುತ್ತಿದ್ದಾಗ ರಾತ್ರಿ ಮೂರನೇ ಯಾಮವು ಕಾಲಿಟ್ಟು ಬಿಟ್ಟಿತ್ತು. ಮಿತ್ರದ್ವಯರು ಮಾತಾಡುತ್ತಾಡುತ್ತಾ ಹಾಗೆಯೇ ನಿದ್ರೆಹೋದರು.

## ೧೫

ಬೆಳಗಾಯಿತು ಎಂಟು-ಎಂಟೂವರೆ ಗಂಟೆಯವರೆಗೂ ನಮ್ಮ ಮಿತ್ರರು ನಿದ್ರಿಸಿಯೇ ಇದ್ದರು. ಅನಂತರ ಶೀನು ಕೈಯಲ್ಲಿ ಗೋಪಾ

ಲನು ಕೊಟ್ಟ ಕೆಲವು ಕಾಗದಗಳನ್ನು ಹಿಡಿದುಕೊಂಡು ಒಬ್ಬನೇ ಹೊರಟು ಮನೆಗೆ ಬಂದನು.

ಆಗ ಮನೆಯಲ್ಲಿ ಕೃಷ್ಣನಿರಲಿಲ್ಲ; ಬಂಡಶಾಲೆಗೆ ಹೊರಟು ಹೋಗಿದ್ದ. ದೊಡ್ಡಮ್ಮನೂ ಮಲ್ಲಿಕೆಯೂ ಮಾತ್ರವೇ ಇದ್ದರು. ರಾತ್ರಿಯಲ್ಲಿ ಎಂದೂ ಮನೆ ಬಿಟ್ಟು ಹೋಗದ ಶೀನು ಹಾಗೆ ಹೋದುದೂ, ಈಗ ಹೊತ್ತೇರಿ ತಡವಾಗಿ ಬಂದುದೂ, ಅವರಿಗೆ ಆಶ್ಚರ್ಯವನ್ನೂ, ಕುತೂಹಲವನ್ನೂ ಉಂಟುಮಾಡಿತ್ತು.

ಅವನು ಬಂದು 'ಭಾರತೀ ಭಾಂಡಾರ' ದ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಲೆ, ದೊಡ್ಡಮ್ಮ "ಎಲ್ಲಿಗೆ ಹೊದ್ದು ಶೀನೂ?" ಎಂದು ಕೇಳಿದಳು.

ಹಿಂದೆಯೇ ಮಲ್ಲಿಕೆ ಬಂದು ಲೋಟಾ ಕಾಫಿಯನ್ನೂ ತಂದಿಟ್ಟಳು.

"ಒಬ್ಬರು ಸ್ನೇಹಿತರ ಮನೆಗೆ ಹೋಗಿದ್ದೆ ದೊಡ್ಡಮ್ಮಾ." ಎಂದು ಶೀನೂ ಉತ್ತರಕೊಟ್ಟ.

"ಅದು ಯಾವ ಸ್ನೇಹಿತರೋ ಅಕಸ್ಮಾತ್ತಾಗಿ ಗಂಟು ಬಿದ್ದವರು?" ಎಂದಳು ಮಲ್ಲಿಕೆ.

"ಅವರೊಬ್ಬರು ಹೊಸಾ ಸ್ನೇಹಿತರು ಅವರ ವಿಷಯ ಅಷ್ಟೇ ಹೇಳಬಹುದಲ್ಲದೆ ಹೆಚ್ಚಿಗೆ ಈಗ ಹೇಳಲು ಸಾಧ್ಯವಿಲ್ಲ!"— ಶೀನೂ ಎಂದನು.

"ಓಹೋ! ಭಾವ ನಿನ್ನೆ ಮನೆಯಿಂದ ಹೊರಡುವಾಗ ತೊಟ್ಟುಕೊಂಡ ಅಂಗಿ ಬಟ್ಟೆಗಳೆಲ್ಲಾ ಹೋಗಿ, ಬರುವಾಗ ಹೊಸ ಖದ್ದರಿನಿಂದ ಬಂದಿದ್ದೀರಿ! ಏನೋ ಶಕ್ತಿ ಉಂಟು ನಿಮ್ಮ ಆ ಹೊಸ ಸ್ನೇಹಿತರಲ್ಲಿ!" ಮಲ್ಲಿಕೆ ನಗುತ್ತಾ ಹೇಳಿದಳು.

"ಹೌದು ಮಲ್ಲಿಕಾ, ನೀನು ಹೇಳಿದ್ದು ಸರಿ" ಎಂದು ಶೀನು ಕಾಗದಗಳನ್ನು ಬಿಡಿಸಿಕೊಂಡು ನೋಡಲಾರಂಭಿಸಿದನು.

ಮಧ್ಯಾಹ್ನ ಊಟಕ್ಕೆ ಬಂದಾಗ ಕೃಷ್ಣನು ಹೀಗೆಂದ:— "ಅಲ್ಲಾ! ನೀನು ಆ ಗೋಪಾಲನ ವಿಷಯದಲ್ಲಿ ಬಹಳ ಜಾಗರೂಕನಾಗಿರಬೇಕು. ಅವನು ಉಪಾಯದಿಂದ ನಮ್ಮಂಥವರನ್ನೆಲ್ಲ ತನ್ನ ದಾರಿಗೆ ಎಳೆಯುವವ. ಪುಣ್ಯಕ್ಕೆ ನಮ್ಮ ಶೆಟ್ಟರು ನಿನ್ನ ಹೆಸರನ್ನು ಪೋಲೀಸರಿಗೆ ಹೇಳಲಿಲ್ಲ. ಈಗ

ಪೋಲೀಸರು ಗೋಪಾಲನನ್ನು ಹುಡುಕುತ್ತಿದ್ದಾರೆ. ಅವನೆಲ್ಲಿಯೋ ತಪ್ಪಿಸಿಕೊಂಡಿದ್ದಾನೆ ನಿನ್ನೆ ಮಧ್ಯಾನ್ಹದ ಮೇಲೆ ಮನೆಯಿಂದ ಹೊರಟವನು ಈವರೆಗೂ ಮನೆಗೆ ಬರಲಿಲ್ಲವಂತೆ. ಮನೆಯಲ್ಲಿ ಅವನ ತಂದೆ ತಾಯಿ ಕೂಡ ವ್ಯಸನ ಪಡುತ್ತಾರಂತೆ."

"ಇದ್ದೀತು. ಅವನ ಕೆಲಸ ಅಂಥಾದ್ದು ಪೋಲೀಸರ ಡ್ಯೂಟಿ ಪೋಲೀಸರು ಮಾಡುತ್ತಾರೆ."– ಎಂದು ಚುಟುಕಾಗಿ ಶೀನು ಉತ್ತರಕೊಟ್ಟ.

ಕೃಷ್ಣನಿಗೆ ಶೀನುವಿನ ಮನಃಪರಿವರ್ತನೆಯ ಮೇಲೆ ಸಂದೇಹ ಬಂತೋ ಇಲ್ಲವೋ ನಮಗರಿಯದು. ರಾತ್ರಿಯಲ್ಲಿ ಎಲ್ಲಿಗೆ ಹೋದುದು ಏನು ಕತೆ ಎಂದೂ ಆತನು ಸ್ಪಷ್ಟವಾಗಿ ಕೇಳಲಿಲ್ಲ. ಅವನು ಕೇಳಬಾರದೆಂದೇ ಶೀನುವಿನ ಮನಸ್ಸಿನಲ್ಲಿತ್ತು. ಅವನು ಕೇಳುವುದು, ಇವನು ಉತ್ತರ ಹೇಳುವುದು, ಅವನ ಪ್ರತ್ಯುತ್ತರ, ಇವನ ಸಮಾಧಾನ, ಈ ಹಾಳು ಹರಟೆಗಳಿಂದ ಸಮಯವು ಹಾಳಾಗುವುದಲ್ಲದೆ ಮನಸ್ಸು ಗಲಿಬಿಲಿಯಾದೀತು ಪುಣ್ಯಕ್ಕೆ ಕಷ್ಣನೇನೂ ಹೆದರಿ ಕೇಳದೆ ಹೋಗಿ ಬಿಟ್ಟನು

ಮಧ್ಯಾನ್ಹ ಊಟವಾದೊಡನೆಯೇ ಶೀನು ಲೇಖನಿಯನ್ನೂ, ಕಾಗದವನ್ನೂ ಇಟ್ಟುಕೊಂಡು ಕುರ್ಚಿಯ ಮೇಲೆ ಕುಳಿತನು. ಉದ್ದೇಶ ಕಾರ್ಯಗಳನ್ನು ಕೃತಿಯಲ್ಲಿಳಿಸುವ ಕೃತನಿಶ್ಚಯವು ಅವನ ಹೃದಯದಲ್ಲಿತ್ತು. ಅವನ ಕಾರ್ಯಗಳು ಈಗ ದ್ವಿಮುಖವಾಗಿವೆ. ಒಂದು ಭಾಷಾ ಸೇವೆ, ಇನ್ನೊಂದು ದೇಶಸೇವೆ.

ದೇಶಸೇವೆ ಎಂಬುದು ಅಖಿಲ ಭಾರತೀಯ ಸಂಬಂಧವುಳ್ಳದು. ಆ ಮಹಾ ಸೇವೆಯಲ್ಲಿ ಇವನದೊಂದು ಕೇವಲ "ಅಳಿಲಸೇವೆ"ಯೇ ಆದೀತು ಭಾಷಾಸೇವೆ ನಿರಾತಂಕವಾಗಿ ಕಳೆ ಬೆಳೆದು ಸಾಗಬೇಕಾದರೆ, ದೇಶಸೇವೆ ಸಫಲೀಕೃತವಾಗಿ ವಿಜಯವನ್ನು ಮುಟ್ಟಬೇಕು ದೇಶಕ್ಕೆ ಸ್ವಾತಂತ್ರ್ಯವು ಸಿಕ್ಕದೆ ಮಾತೃಭಾಷೆಗೆ ಚೇತನವು ಬಾರದು ಪರಕೀಯರು ಹುಟ್ಟಿಸಿ ಹರಡಿಸಿರುವ ಭೇದಭೂತಗಳ ಬಾಧೆಯಿಂದ ದೇಶವೆಲ್ಲ ನಾನಾ ಖಂಡ ತುಂಡುಗಳಾಗಿ ಜರ್ಜರಿತವಾಗಿದೆ "ಕರ್ಣಾಟಕ ಏಕೀಕರಣ" ಅಥವಾ "ಭಾಷಾವಾರು ಪ್ರಾಂತ ರಚನೆ" ಮೊದಲಾದ ಸಾಧು ಚಳವಳಿಗಳು ಎಚ್ಚತ್ತ ದೇಶದಲ್ಲಿ ಹುಟ್ಟಿ ಬೆಳೆದಿವೆ. ಇದಕ್ಕೆ ದೇಶೀಯ ಮುಖಂಡರ ಪ್ರೋತ್ಸಾಹ ರೂಪ ಪೋಷಣೆ ಸಿಕ್ಕಿದೆ. ಆದರೆ ಇದೆಲ್ಲ ಸಾಧ್ಯ

ವಾಗಬೇಕಾದರೆ ಮೊದಲು ಸ್ವಾತಂತ್ರ್ಯ ಲಾಭವಾಗಬೇಕು. ನಮ್ಮ ಮನೆಯೊಳಗೆ ತಳವೂರಿದ ಬರಕೀಯರು ಹೊರಟು ಹೋದ ಮೇಲಲ್ಲವೇ ಉಳಿದ ರಿಪೇರಿಯ ಕೆಲಸಗಳೆಲ್ಲ!

ಆಗೋ ! ಸ್ವಾತಂತ್ರ್ಯೋದಯದ ಕಾಲವು ಸನ್ನಿಹಿತವಾಗುವ ಲಕ್ಷಣ ಗಳು ಕಾಣುತ್ತಿವೆ! ಭರವಸೆ ತೋರುತ್ತದೆ ಅನಂತರ ಆಗಬೇಕಾದ ಕಾರ್ಯಗಳಿಗೆ ಅನಂತರವೇ ಸ್ವಸ್ತಿವಾಚನ ಹಾಕುವುದಕ್ಕಿಂತ, ಈಗಲೇ ಪ್ರಾರಂಭಿಸುವುದು ಒಳ್ಳೆಯದಲ್ಲವೆ? ಹೌದು.

ಮತ್ತೇನಿಲ್ಲ, ಕನ್ನಡದಲ್ಲಿ ಮುಖ್ಯವಾದೊಂದು ಕೊರತೆಯುಂಟೆಂದು ಶೀನುವಿನ ಅಭಿಪ್ರಾಯ. ಅದೇನೆಂದರೆ ಕನ್ನಡ ಪುಸ್ತಕಗಳು ಅಚ್ಚಾಗಿ ಪ್ರಕಟವಾದ ಮೇಲೆ, ಪತ್ರಿಕೆಗಳಲ್ಲಿ ಆ ಪುಸ್ತಕಗಳ ವಿಮರ್ಶೆಗಳು ಬರಲಾರಂಭಿಸುತ್ತವೆ. ಈ ವಿಮರ್ಶೆಗಳಲ್ಲಿ ಎಷ್ಟೋ ಬಗೆಯ ಭೇದಗಳು. ಒಂದರಂತೊಂದಿಲ್ಲ. ಅವರಲ್ಲಿಯೂ ಕೆಲವು ವಿಮರ್ಶೆಗಳು ದ್ವೇಷಾ ಸೂಯೆಗಳ ಬಿಸಿಯಿಂದ ಕೂಡಿದಂತಹವು. ಇಂತಹ ವಿಮರ್ಶೆಗಳಿಂದ ಕನ್ನಡಕ್ಕೆ ಏನು ಪ್ರಯೋಜನವಾದೀತು ? ನಿರ್ದೋಷವಾದ ಗ್ರಂಥವಾ ಗಿದ್ದು ಒಳ್ಳೆಯ ಸರಿಯಾದ ವಿಮರ್ಶೆಯಾಗಿದ್ದರಂತೂ ಸರಿ; ಇಲ್ಲದಿದ್ದರೆ, ಪಾಪ! — ಧನವ್ಯಯ ಮಾಡಿದ ಪ್ರಕಾಶಕರಿಗೂ ಗ್ರಂಥಕರ್ತರಿಗೂ ಅದು ಪಶ್ಚಾತ್ತಾಪಕ್ಕೆ ಕಾರಣ, ಕೊರಗಿಗೆ ಹೇತು, ಉತ್ಸಾಹಕ್ಕೆ ಕುಂದು. ಇದರಿಂದಾಗಿ ಅಪರಿಪಕ್ವವಾದ ಪುಸ್ತಕಗಳೇ ಪ್ರಕಟವಾದರೆ ಏನಾಶ್ಚರ್ಯ? ಇದು ಕನ್ನಡ ಸಾಹಿತ್ಯದಲ್ಲಿ ಒಂದು ದೊಡ್ಡ ದೋಷವಲ್ಲವೆ ? ಇದರ ನಿವಾರಣೆಗೆ ಏನಾದರೊಂದು ಉಪಾಯ ಬೇಡವೆ?

ಒಂದು ಪುಸ್ತಕವು ಪ್ರಕಟವಾದನಂತರ, ಅದರ ದೋಷಾನ್ವೇಷ ಣೆಯೇ ಮುಖ್ಯವಾದ ಪರೀಕ್ಷಾ ವೀಕ್ಷಣವು ಒಳ್ಳೆಯದಲ್ಲ. ಅಂತಹ ಪರೀಕ್ಷೆ ಮೊದಲೇ ಆಗಬೇಕು. ಆ ಪರೀಕ್ಷೆಯಲ್ಲಿ ಪಾಸಾದ ಗ್ರಂಥಗಳೇ ಅಚ್ಚಾಗಿ ಪ್ರಕಟವಾಗಬೇಕು ಪ್ರಕಟವಾದ ಮೇಲೆ ಪತ್ರಿಕೆಗಳಲ್ಲಿ "ಪುಸ್ತಕ ಪರಿಚಯ" ರೂಪದಲ್ಲಿ, ಏತತ್ ಗ್ರಂಥೋಕ್ತ ವಿಷಯಗಳ ಹೊಗಳಿಕೆ ಬಂದರೆ, ಪ್ರಚಾರಕ್ಕೆ ಸಾಧಕವಾಗುತ್ತದೆ. ಈ ಕ್ರಮವು ಪ್ರಕಾಶಕರಿಗೂ ಲೇಖಕರಿಗೂ ಪ್ರೋತ್ಸಾಹಕಾರಿಯಾದೀತಲ್ಲವೆ?

ಹೀಗಾಗಬೇಕಾದರೆ ಕನ್ನಡ ನಾಡು ಒಗ್ಗಟ್ಟಾಗಬೇಕು. ಕನ್ನಡಕ್ಕೊಂದು ಕೇಂದ್ರಸ್ಥಾನ ಗೊತ್ತುಮಾಡಲ್ಪಡಬೇಕು. ಆ ಕೇಂದ್ರಸ್ಥಾನದಲ್ಲಿ "ಹಸ್ತ ಪ್ರತಿಪರೀಕ್ಷಾ ಮಂಡಲಿ"ಯೊಂದು ಸ್ಥಾಪನೆಯಾಗಬೇಕು. ಈ ಸಂಘಕ್ಕೆ ಸಾಹಿತ್ಯದ ಬೇರೆಬೇರೆ ವಿಭಾಗಗಳಲ್ಲಿ ನುರಿತವರಾದ ಸಾಹಿತಿಗಳೂ ವಿದ್ವಾಂಸರೂ, ತಂತಮ್ಮ ಸಾಹಿತ್ಯ ವಿಭಾಗಕ್ಕೆ ಪರೀಕ್ಷಣಾಧಿಕಾರಿಗಳಾಗಿರಬೇಕು. ಅವರು ಪಕ್ಷಪಾತವಿಲ್ಲದ ಬೇರೆಬೇರೆ ಪಾಂತದವರಾಗಿಯೂ ಇರಬೇಕು ಅವರಿಗೆ ಏನಾದರೂ ಪ್ರತಿಫಲವೂ ಸಿಕ್ಕುವಂತಿರಬೇಕು. ಈ ಸಂಘಕ್ಕೆ ಲೇಖಕರೆಲ್ಲರೂ ಮೆಂಬರರಾಗಿರಬೇಕು. ಲೇಖಕರು ತಮ್ಮ ಹಸ್ತ ಪ್ರತಿಗಳನ್ನು ಈ ಸಂಘಕ್ಕೆ ಕಳುಹಿಸಬೇಕು. ಯೋಗ್ಯವಾದ ಹಸ್ತ ಪ್ರತಿಗಳೇ ಬರುವಂತೆ, ತಕ್ಕ ಷರತ್ತುಗಳಿರಬೇಕು. ಹಸ್ತ ಪ್ರತಿಗಳನ್ನು ಪ್ರತಿ ತೆಗೆಯುಲು ತಕ್ಕ ಹಲವು ಗುಮಾಸ್ತರೂ ಬೇಕಾದೀತು. ಅವರಿಗೆ ಸಂಬಳವೋ ಕೂಲಿಯೋ ಬೇಕು. ಮುಖ್ಯವಾಗಿ ಆ ಸಂಘದ ಚಟುವಟಿಕೆಗಳನ್ನು ಪ್ರಕಟಪಡಿಸುವಂತಹ ಒಂದು ಪತ್ರಿಕೆಯಿರಬೇಕು. ಇನ್ನೂ ಇದರಲ್ಲಿ ಎಷ್ಟೋ ಎಡರು-ತೊಡರು-ತಗಾದೆಗಳಿದ್ದಾವು. ಅವುಗಳಿಗೆಲ್ಲ ತಕ್ಕ ಸಮಾಧಾನಬೇಕಲ್ಲವೆ? ಹಾಗೆ ಯೋಚನೆ ಹೇಳಲು ಕನ್ನಡ ನಾಡಿನಲ್ಲಿ ತಕ್ಕ ಮೇಧಾವಿಗಳಿಲ್ಲವೆ? ಮೊತ್ತಮೊದಲು ಬೇಕಾದುದು ಅದಕ್ಕೊಂದು ಮೂಲ ಧನ. ಕನ್ನಡಿಗರ ಸುಹೃದಯತೆಯ ಒಗ್ಗಟ್ಟು. ಈ ಕಾರ್ಯವು ಸಾಧ್ಯವಾಗಿದ್ದು ವಿಬುಧರ ಒಪ್ಪಿಗೆಯಿದ್ದರೆ ಕನ್ನಡಿಗರೇಕೆ ಸಹಕರಿಸಲಿಕ್ಕಿಲ್ಲ?

ಬೆಂಗಳೂರಿನಲ್ಲಿ "ಸಾಹಿತ್ಯ ಸಹಕಾರೀ ಸಭೆ" ಎಂಬ ಸ್ಥಾಪನವು, ಹಲ-ಕೆಲವು ಚಟುವಟಿಕೆಗಳಿಂದ ಬಾಳಿಬದುಕಿಕೊಂಡುದುಂಟು. ಬಳ್ಳಾರಿಯಲ್ಲಿ ಕಮಲಾಬಾಯಿಯ "ಕನ್ನಡ ಕಲಾಸಂಘ"ವೊಂದು ನೆಲೆಸಿದೆ. ಆ ಕಮಲಾಬಾಯಿ ಶೀನುವಿನ ಪರಿಚಿತಳೇ ಆದರೂ, "ಕನ್ನಡ ಕಲಾಸಂಘ" ಇತ್ತೀಚೆಗಿನ ಸ್ಥಾಪನೆ— ಹೊಸದು. ಬೆಂಗಳೂರಿನ "ಸಾಹಿತ್ಯ ಸಹಕಾರೀ ಸಭೆ"ಯಾದರೋ ತುಂಬ ಹಳೆಯದು. ದೊಡ್ಡದೊಡ್ಡ ವಿದ್ವನ್ಮಣಿಗಳ ಸಂಬಂಧವು ಅದಕ್ಕುಂಟು.

ಈ ವಿಷಯವನ್ನೆಲ್ಲ ವಿವರಿಸಿ ಶೀನು ಒಂದು ಕಾಗದವನ್ನು ಬರೆದನು. "ಸಾಹಿತ್ಯ ಸಹಕಾರೀ ಸಭೆ"ಯ ಅಧ್ಯಕ್ಷರಾದ ಪೀತಾಂಬರ

ಶಾಸ್ತ್ರಿಗಳಿಗೆ ಬರೆದ ಕಾಗದವದು. ಈ ಯೋಚನೆ ಸಮಂಜಸವಿದ್ದರೆ, ಪ್ರಥಮ ನಿಧಿಯಾಗಿ ೨೫೦೦೦ ರೂಪಾಯಿಯನ್ನು ಒಬ್ಬರು ಮಹನೀಯರು ಕೊಡಲು ಒಪ್ಪಿದ್ದಾರೆಂತಲೂ ಆ ಪತ್ರದಲ್ಲಿ ಸೂಚಿಸಿದ್ದನು.

ಇದೇ ವಿಷಯದ ಮೇಲೆ ಒಂದು ಚಿಕ್ಕ ಉಪನ್ಯಾಸವನ್ನೂ ಸಿದ್ಧಪಡಿಸಿಕೊಂಡು, ಮರುದಿನ ಬೆಳಗ್ಗೆ ಮಂಗಳೂರಿಗೆ ಹೊರಟನು. ಮೊದಲು "ಜನವದನೀ" ಪತ್ರಿಕೆಯ ಆಫೀಸಿಗೆ ಹೋಗಿ, ಆ ಲೇಖನವನ್ನು ಪ್ರಕಟಿಸಲಿಕ್ಕೆ ಕೊಟ್ಟನು. ಆ ಪತ್ರಿಕೆಯ ಅಧಿಕಾರಿಗಳಾದ ಶ್ಯಾಮಸುಂದರರೂ ಅಲ್ಲಿಯೇ ಇದ್ದರು. ಶೀನು ಅವರೊಡನೆ ಮಾತಾಡುತ್ತಾ ಅವರ ಮನೆಗೆ ಹೋದನು. ಅವನ ತಂಗಿ ಗೌರಿ ಅವರ ಮನೆಯಲ್ಲಿಯೇ ಇದ್ದಾಳಲ್ಲವೆ?

ಶೀನುವಿಗೆ ದೇಶಭಕ್ತ ಗೋಪಾಲನ ಸ್ನೇಹವಾದುದನ್ನು ಕೇಳಿ ಶ್ಯಾಮಸುಂದರರು ಬಹಳ ಸಂತೋಷಪಟ್ಟರು. ರಾತ್ರಿಯ ಊಟಕ್ಕೆ ಗೋಪಾಲನನ್ನು ಅಲ್ಲಿಗೇ ಕರೆದುಕೊಂಡು ಬರಬೇಕೆಂದು ಅವರು ಶೀನುವನ್ನು ಒತ್ತಾಯಿಸಿದರು. ಶೀನುವಿಗೂ ಅದೇ ಬೇಕಾಗಿತ್ತು. ಗೋಪಾಲನಿಗಾಗಿ ರಾತ್ರಿ ವಿಶೇಷ ಪಾಯಸದಡುಗೆ ಮಾಡುವಂತೆ ಶ್ಯಾಮಸುಂದರರು ಮನೆಯೊಳಗೆ ಆಣತಿಯನ್ನೂ ಕೊಟ್ಟರು.

ಶ್ಯಾಮಸುಂದರರ ಮನೆಯೆಂದರೆ ಶೀನುವಿಗೆ ಸ್ವಂತ ಮನೆಯ ಹಾಗೆ. ಅಲ್ಲಿಯ ಜನರೆಲ್ಲ ಅವನ ಕುಟುಂಬದವರ ಹಾಗೆ. ಸಂಜೆಯವರೆಗೂ ಶ್ಯಾಮಸುಂದರರ ಮಕ್ಕಳೊಂದಿಗೆ ಸರಸಾಟವಾಡುತ್ತ ಅವನಿಗೆ ಸಮಯ ಹೋದುದೇ ತಿಳಿಯಲಿಲ್ಲ. ಸಂಜೆಯಾಗುತ್ತ ಬರುವಾಗ ಶೀನು ತಂಗಿ ಗೌರಿಯನ್ನು ಕರೆದುಕೊಂಡು, ಒಂದು ಮುಖ್ಯ ಸ್ಥಳಕ್ಕೆ ಹೋಗಬೇಕೆಂದು ಹೊರಟನು. ಆದುದರಿಂದ ಅವನೊಂದಿಗೆ ಬೇರೆ ಯಾರೂ ಹೊರಡಲಿಲ್ಲ.

ಅಣ್ಣ ತಂಗಿಯರು ಹೊರಟರು. ಗೌರಿ ಹೆಸರಿಗೆ ತಕ್ಕಂತೆ ಗೌರಾಂಗಿಯಾಗಿರುವಳೆಂದು ತಿಳಿಯಬಾರದು; 'ಎಣ್ಣೆಗಪ್ಪು' ಅನ್ನುವರಲ್ಲ— ಅಂತಹ ಬಣ್ಣ ಅವಳದು. ವಯಸ್ಸು ಹದಿನೇಳು. ತುಂಬುಜೌವನದ ತರುಣಿ. ಹಿತ-ಮಿತವಾದ ಸಮಗಾತ್ರ. ಆಹಾ! ಅವಳ ಮೋಹಕವಾದ ಆ ನಡಿಗೆಯ ಬೆಡಗೊಂಡು ಅನ್ಯಾದೃಶವಲ್ಲವೆ? ಅವಳನ್ನು ಎಣ್ಣೆಗಪ್ಪಿನವ

ಳೆಂದು ಹೇಳಿದುದರಿಂದ ಸುಂದರಿಯಲ್ಲವೆಂದು ಭಾವಿಸುವಿರೇನು? ಯಾವ ಸುಂದರಿಗೂ ಅವಳು ಕಡಮೆಯಲ್ಲವೆಂದು ಮುಂದೆ ಮುಂದೆ ನಿಮಗೇ ಗೊತ್ತಾದೀತು. ಹೌದು. ಅವಳ ಸೌಂದರ್ಯವು ಒಮ್ಮೆಗೇ ನಮಗೆ ಕಾಣುವಂತಹುದಲ್ಲ. ಒಮ್ಮೆಗೇ ನೋಡಿದರೂ ಅವಳನ್ನು ಕುರೂಪಿ ಯೆಂದು ಯಾರೂ ಹೇಳಲಾರರು. ನೀಲಿಮವಾದ ವಿಶಾಲಾಯತ ನೇತ್ರ ಗಳು, ಕಾಲಗಂಟಿನ ವರೆಗೆ ಇಳಿದಿರುವ ಕಾಳಕೇಶರಾಶಿ, ಇವೆರಡೇ ಸಾಲವೇ ಚಿತ್ತಾಕರ್ಷಣೆಯ ಸೌಂದರ್ಯಕ್ಕೆ?

ಅವಳು ಒಳ್ಳೆಯ ವಿದ್ಯಾವತಿಯಾಗಿದ್ದರೂ, ನಾಗರಿಕ ಫ್ಯಾಶನ್ನು ಗಳೊಂದೂ ಅವಳಲ್ಲಿ ತೋರುವುದಿಲ್ಲ. ನಡುಬೈತಲೆಯನ್ನೆ ತೆಗೆದಿದ್ದಾಳೆ. ನೀಲೀ ರವಕೆಯನ್ನೂ ಅದಕ್ಕೊಪ್ಪುವ ಒಂದು ಸಾದಾ ಸೀರೆಯನ್ನೂ ಉಟ್ಟಿದ್ದಾಳೆ. ಕೈಯಲ್ಲಿ ಒಂದು ಜತೆ ಗಾಜಿನ ಬಳೆಗಳು. ಕಿವಿಯಲ್ಲಿ ಬೆಂಡೋಲೆ, ಗಲ್ಲಗಳನ್ನು ಮುದ್ದಿಸುವ ಲೋಲಾಕುಗಳು, ಹೀಗೆ ಬಡ ತನದ ಮರ್ಯಾದೆಯಲ್ಲಿರುವ ನಿರಾಡಂಬರ ಸುಂದರಿಯೇ ಗೌರಿ. ಎಣ್ಣೆ ಗಪ್ಪಾದರೂ ಅವಳ ಸರ್ವಾಂಗದಲ್ಲಿಯೂ ಏನೋ ಒಂದು ನಳಿನ ಲಾವ ಣ್ಯದ ಲೇಪನವಿತ್ತು.

ನಡೆಯುತ್ತಾ ಶೀನು ತಂಗಿಯನ್ನು ಕುರಿತು—"ಗೌರಿ! ಈಗ ನಾವು ಒಬ್ಬರನ್ನು ಸಂಧಿಸಿ ಕರಕೊಂಡು ಬರುತ್ತೇವೆ. ಅವರು ಯಾರೆಂದು ನಿನಗೆ ಗೊತ್ತೆ?"

"ಅದೇ ಗೋಪಾಲರಾಯರು ಅಂದಿಯಲ್ಲಾ?"

"ಯಾವ ಗೋಪಾಲರಾಯರು ಗೊತ್ತಿದೆಯೆ?"

"ನನಗೇನು ಗೊತ್ತಣ್ಣ?"

"ಗೊತ್ತಿಲ್ಲವೆ? ನೋಡಿದರೆ ಗೊತ್ತಾದೀತೋ, ನೋಡು."

"ಅದು ಹೇಗೆ ಗೊತ್ತಾದೀತು? ನನಗೂ ಅವರಿಗೂ ಎಲ್ಲಿಯ ಪರಿ ಚಯ?" ಎಂದು ಗೌರಿ ಅರ್ಧ ಒಳಗೂ ಅರ್ಧ ಹೊರಗೂ ಹೇಳಿ ಕೊಂಡಳು.

ಮಂಗಳೂರು ನಗರದಲ್ಲಿ ಎತ್ತರವಾದ ಸುಖ ಸುಂದರ ಸ್ಥಳವೆಂದರೆ ಬಾವಟೆಗುಡ್ಡ. ಸಂಜೆಯ ವೇಳೆಯಲ್ಲಿ ಅಲ್ಲಿಗೆ ನಗರವಾಸಿಗಳು ಏರಿ ಬಂದು, ವಿಶ್ರಾಂತಿ ಸುಖವನ್ನೂ, ಸೃಷ್ಟಿ ಸೌಂದರ್ಯವನ್ನೂ ಒಟ್ಟಿಗೆ

ಸವಿಯುತ್ತಾರೆ. ಗುಡ್ಡದಂಚಿನಲ್ಲಿ ಅಲ್ಲಲ್ಲಿ ಕೆಲವು ಸಿಮೆಂಟುಗಾರೆಯು ಮತ್ತು ಕಬ್ಬಿಣದ ಒರಗು ಬೆಂಚುಗಳುಂಟು ಕೆಲವು ಗೋಳೀಮರಗಳೂ ಬೆಳೆದಿವೆ ಬಂದು ಕುಳಿತವರಿಗೆ ಸೊಗಸಾದ ಗಾಳಿಯನ್ನು ಬೀಸಲು ಆ ಎಲೆದುಂಬಿದ ಮರಗಳು ಸಾಕಾಗಿವೆ ಆ ತಪ್ಪಲಲ್ಲಿ ಹಾಯಾಗಿ ಕುಳಿತು ನೋಡಿದರೆ, ಇಡೀ ಮಂಗಳೂರು ನಗರ—ನಗರಾಂತರ ಪ್ರಾಂತ ಗಳೆಲ್ಲಾ ಸುಂದರಾಕಾರದಿಂದ ಗೋಚರವಾಗಿ ಹೃದಯದಲ್ಲಿ ಆಹ್ಲಾದದ ತೆರೆಗಳೇಳುತ್ತಿದ್ದುವು ಹಸುರು ಮುರಿಯುವ ತೆಂಗಿನ ಓಲೆಗಳ ಬುಡದಲ್ಲಿ ನಗರಾಂಗನೆ ಸುಭದ್ರಳಾಗಿ ತಂಗಿದ್ದಳು ಅವಳ ಸುತ್ತೂ ಬಳಸಿಕೊಂಡು ದೂರದಲ್ಲಿ ಬೆಳ್ಳಿಯ ಹೊಳೆ ಹರಿವಂತೆ ಗುರುಪುರ ಹೊಳೆ ಕಂಗೊಳಿಸು ತ್ತದೆ ಅದರಾಚೆಗೆ ದಕ್ಷಿಣೋತ್ತರವಾಗಿ ಭೂಮ್ಯಾಕಾರದ ಸೀಮೆಯ ವರೆಗೆ ಮುಟ್ಟಿರುವ ವಿಶಾಲಕಾಯಿಯಾದ ಸಾಗರ ಆ ಸಾಗರ ಕಾಸಾರ ದಲ್ಲಿ ಸ್ನಾನಕ್ಕಿಳಿಯಲು ಸಿದ್ಧವಾಗಿರುವ ಸಂಧ್ಯಾ ಸೂರ್ಯ. ಅವನ ವೃದ್ಧ ಕೆಂಪು ಶಾಂತ ಕಿರಣಗಳು ಆಕಾಶದಲ್ಲಿಯೂ, ಕಡಲಲ್ಲಿಯೂ, ಹೊಳೆಯಲ್ಲಿಯೂ ತೆಂಗಿನಗರಿಗಳಲ್ಲಿಯೂ ಬಿದ್ದು ಪ್ರಕೃತಿ ಸೌಂದರ್ಯಕ್ಕೆ ಬಣ್ಣ ಬಳಿಯುತ್ತಿದ್ದುವು ಆ ಬಣ್ಣಕ್ಕೆ ಜೀವಕೊಡುತ್ತ ಹಕ್ಕಿಗಳು ಹಾರಾಡುತ್ತಿದ್ದುವು ಹೂಮುಗಿಲುಗಳು ತೇಲಾಡುತ್ತಿದ್ದುವು. ಅದ ನ್ನೆಲ್ಲ ನೋಡುತ್ತಾ ಸ್ಥಿರಾಕಾರವಾಗಿ ನಿಂತಿದೆ, ಅದೋ ಅಲ್ಲಿ ಗುರುಪುರ ಹೊಳೆಯ ಬಳಸಿನಲ್ಲಿ, ಸುಲ್ತಾನಾ ಬತ್ತೇರಿ! ಅದರೀಚೆಗೆ ಸಾಲಾಗಿ ದಕ್ಷಿ ಣದ ವರೆಗೆ ಹೊಳೆಯ ದಡದಲ್ಲಿ, ಹಂಚಿನ ಕಾರ್ಖಾನೆಗಳ ಹೊಗೆನಳಿಗ ಗಳೂ, ಆ ಬಣ್ಣದ ಸೌಂದರ್ಯಕ್ಕೆ ತಮ್ಮ ಹೊಗೆ ಬಣ್ಣವನ್ನು ಪರಂಪರೆ ಯಾಗಿ ಕಳುಹಿಸುತ್ತಿದ್ದುವು

ಶೀನು ಗೌರಿಯೊಂದಿಗೆ ಅಲ್ಲಿಗೆ ಬಂದನು ಅತ್ತಿತ್ತ ನೋಡಿದನು. ಅಲ್ಲಿ ಸಂಧಿಸುವೆನೆಂದಿದ್ದ ಗೋಪಾಲನು ಎಲ್ಲಿದ್ದಾನೆ? ಎಲ್ಲಿಯೂ ಕಾಣು ವುದಿಲ್ಲ ಅಲ್ಲಿಯೇ ಬೆಂಚಿನ ಮೇಲೆ ಕುಳಿತುಕೊಂಡು ಸ್ವಲ್ಪ ಹೊತ್ತು ನಿರೀಕ್ಷಿಸೋಣವೆಂದು ಯೋಚನೆ ಮಾಡುತ್ತಿದ್ದಾಗ, ಪಕ್ಕದಲ್ಲಿಯೇ ಗೋಳೀ ಮರದ ಬುಡದ ಬಂಡೆಯ ಮೇಲೆ ಕುಳಿತುಕೊಂಡು, ಏನೋ ಒಂದು ಪುಸ್ತಕವನ್ನು ಓದುತ್ತಿದ್ದವನೊಬ್ಬನು "ಯಾರನ್ನು ಹುಡುಕು ವುದು?" ಎಂದು ಶೀನುವಿನ ಮುಖವನ್ನು ನೋಡಿದನು.

ಸ್ವರದ ಗುರುತು ಹಿಡಿದು ಅಚ್ಚರಿಯಿಂದ ಶೀನು ಅವನ ಮುಖವನ್ನು ನೋಡಿದನು. ದೊಡ್ಡ ಮುಂಡಾಸಿನೊಳಗೆ ಅವನ ಮುಖವು ಹುದುಗಿತ್ತು. ಕಣ್ಣಿನಲ್ಲಿ ಒಂದು ಕನ್ನಡಕವಿಟ್ಟಿದ್ದ ಮೊರಟಾದೊಂದು ಷರಟು; ಅಂತಹುದೇ ಮೊರಟು ಪಂಚೆ. ಒಂದು ಖದ್ದರ್ ಶಾಲನ್ನು ಕೊರಳ ಸುತ್ತಲೂ ಸುತ್ತಿಕೊಂಡಿದ್ದ. ನೋಡಿದರೆ ಬಳ್ಳಾರಿಯ ಕಡೆಯಿಂದ ಬಂದ ಹಳ್ಳಿಯ ಗೌಡನೋ ಎಂಬಂತಿದ್ದ.

"ಅರೇ ಗೋಪಾಲ! ಗುರುತೇ ಸಿಕ್ಕಲಿಲ್ಲ!" ಎಂದು ಅವನ ಕೈಯನ್ನು ಹಿಡಿದನು ಶೀನು

ಕೂಡಲೇ ಗೋಪಾಲನು ಎದ್ದು:—"ನಡೆ ಶೀನು. ಹೋಗೋಣ. ಹೋಗುತ್ತಾ ಮಾತಾಡೋಣ." ಎಂದೆಂದು ಮುಂದಕ್ಕೆ ನಡೆದೇ ಬಿಟ್ಟ.

ಶೀನುವೂ ಗೌರಿಯೂ ಅವನೊಂದಿಗೆ ಹೊರಟರು.

## ೧೬

ಇಳಿಜಾರಾದ ಬೀದಿಯಲ್ಲಿ ಬಾವಟಿಗುಡ್ಡವನ್ನಿಳಿಯುವಾಗ, "ಇವಳೇ ಗೌರೀದೇವಿಯೆ?" ಎಂದು ಗೋಪಾಲನು ಶೀನುವನ್ನು ಕೇಳುತ್ತ, ಕೊರಳು ತಿರುಗಿಸಿ ಗೌರಿಯ ಮೇಲೆ ಕಣ್ಣು ಹಾಕಿದ.

ಗೌರಿಯೂ ನೋಡಿದಳು.

"ಹೌದು ಗೋಪಾಲ ಇವಳೇ ನನ್ನ ತಂಗಿ ಗೌರಿ. ಗೌರಿ! ಇವರೇ ದೇಶಭಕ್ತ ಗೋಪಾಲರಾಯರು. ನಿನಗೆ ಗೊತ್ತು ತಾನೆ?"

ಮೂವರೂ ಮಾತಾಡುತ್ತಾ ನಡೆಯುತ್ತಿದ್ದರು. ಗೌರಿಯೆಂದಳು:-

"ನನಗೇನು ಗೊತ್ತಣ್ಣ? ಈಗ ತಾನೇ ಇವರನ್ನು ನೋಡುತ್ತೇನೆ ಆದರೆ ಇವರ ಹೆಸರನ್ನು ಕಿವಿ ತುಂಬಾ ಕೇಳಿದ್ದೇನಣ್ಣ!"

"ಅಷ್ಟೇ ಏನು? ಇವರನ್ನು ನೀನು ಮೊದಲೊಮ್ಮೆ ನೋಡಿದ್ದಿ! ನೆನಪಿದೆಯೆ?"

"ಊಹುಂ"

"ನೋಡಿದ್ದೀ! ಮಾತಾಡಿದ್ದಿ! ಮುಟ್ಟಿದ್ದಿ!"

"ಛೀ! ಹೋಗಣ್ಣ! ಏನಾದರೂ ಹೇಳುತ್ತಿ!"

"ಅಲ್ಲವೇ ಗೋಪಾಲ?"

ಗೋಪಾಲನು ನಗುತ್ತ— "ಕೇಳು ಕೇಳು ! ಪಾಪ ಮರೆತು ಬಿಟ್ಟಿದ್ದಾಳೆ ! "

''ಮರೆತೇ ಬಿಟ್ಟೆಯಲ್ಲ ಗೌರಿ. ನೀನು ಹಿಂದೆ ಶಾಲೆಗೆ ಹೋಗುವಾಗ ಮೂಡುಗುಡ್ಡೆಯ ತೋಡಿನಿಂದ ಮೇಲೇರಲಿಕ್ಕಾಗದೆ ತತ್ತರಿಸಿದಾಗ, ಇವರು ನಿನ್ನ ಕೈ ಹಿಡಿದು ಮೇಲೆತ್ತಲಿಲ್ಲವೆ? ಮರೆತೆಯಾ ಗೌರಿ?"

ಹಳೆಯ ಒಂದು ಸಣ್ಣ ಸಂಗತಿಯದು. ಗೌರಿಯ ಹೃದಯದೊಳಗೆ ಆ ನೆನಪು ಹಾಗೇ ಇತ್ತು. ಕೇಳಿ ಅವಳ ಮುಖವು ನಾಚಿಕೆಯಿಂದ ಕೆಂಪಾಯಿತು. ಸ್ವಲ್ಪಹೊತ್ತು ಸುಮ್ಮನಿದ್ದು— " ಅದನ್ನು ನೀನೆಲ್ಲಿ ನೋಡಿದ್ದೆಯಣ್ಣ?" ಎಂದಳು.

''ನಾನು ಕವಿಯಲ್ಲವೆ ? ಊಹನೆಯಿಂದಲೇ ಹೇಳಿಬಿಟ್ಟೆ. ನಿಜ ತಾನೆ?''

ಗೌರಿ ಮೆಲ್ಲನೆ ''ಕವಿಯಾದರೆ ಇದೆಲ್ಲಾ ಊಹಿಸಲಾಗುತ್ತೆಯೆ ? ಅವರೇ ಹೇಳಿದ್ದು!'' ಎಂದಳು.

ಆಗ ಗೋಪಾಲನು ತಿರುಗಿ ನೋಡಿ— ''ಓ ! ನನ್ನನ್ನು ಬಿಟ್ಟು ಅಣ್ಣ-ತಂಗಿಯರು ಏನು ಗುಟ್ಟು ಮಾತಾಡುತ್ತೀರಿ?"

ಅದಕ್ಕೆ ಶೀನು— "ಗುಟ್ಟೇನೆಂದರೆ, ಎಲ್ಲವೂ ಮತ್ತೆ ರಟ್ಟಾಗುವಂತಾದ್ದೇ. ಪ್ರಕೃತ ಇವಳ ಅನುಮತಿ ಹೇಗೆಂದು ಗುಟ್ಟಾಗಿ ಕೇಳುತ್ತಿದ್ದೇನೆ. ಅಷ್ಟೇ." ಎಂದನು.

''ಛೀ! ಹೋಗಣ್ಣ. ಅಪರಿಚಿತರ ಮುಂದೆ ಏನೇನೋ ಮಾತಾಡುವುದೆ? ಇದಕ್ಕೋ ನನ್ನನ್ನು ಕರಕೊಂಡು ಬಂದದ್ದು?''

''ಯಾಕೆ ಇವರ ಈ ಗೌಡವೇಷವನ್ನು ನೋಡಿ ಮೋಸ ಹೋಗುತ್ತೀಯಾ?''

''ಸುಮ್ಮನಿರಣ್ಣ ಸದ್ಯ!"

''ಹಾಗೇ ಆಗಲಿ ಕೋಪಿಸಬೇಡಮ್ಮ. ಎಲ್ಲವನ್ನೂ ನಿಧಾನವಾಗಿ ಮಾತಾಡೋಣವಂತೆ!"

ಸ್ವಲ್ಪ ಹೊತ್ತಿಗೆಲ್ಲಾ ಕತ್ತಲಾಯಿತು. ಬೀದಿಯಲ್ಲಿ ಎಲೆಕ್ಟ್ರಿಕ್ ದೀಪಗಳಿದ್ದರೂ, ಬ್ಲ್ಯಾಕ್ ಔಟಿನಿಂದ ದಿಗ್ಬಂಧನ ಹೊಂದಿದ ಬೆಳಕು.

ಅಂಗಡಿಗಳೂ ಮನೆಗಳೂ ಎಲ್ಲವೂ ಅಷ್ಟೇ. ಆ ಬೆಳಕು ಕತ್ತಲೆಗಳ ಬೀದಿಗಳಲ್ಲಿ ನಡೆದು, ಕೊಡಿಯಾಲ ಬೈಲಿನಲ್ಲಿರುವ ಶ್ಯಾಮಸುಂದರರ ಮನೆಯನ್ನು ಮುಟ್ಟುವಾಗ ರಾತ್ರಿ ಎಂಟು ಗಂಟೆಯಾಗಿತ್ತು. ಸತ್ಯವಾಗಿ ಆದ ಗಂಟೆ ಏಳು ಎಂಟೆಂದರೆ ಯುದ್ಧಕಾಲದ ಒಂದು ಗಂಟೆ ಮುಂದಾದೆಂದು ನೆನಪಿದೆಯಷ್ಟೆ?

ಶ್ಯಾಮಸುಂದರರು ಗೋಪಾಲನ ವಿಷಯವನ್ನೆಲ್ಲ ಚೆನ್ನಾಗಿ ಬಲ್ಲವರು ಅವನು ಇತ್ತೀಚೆಗೆ ಜೈಲಿನಿಂದ ಬಿಡುಗಡೆಯಾದ ಮೇಲೆ, ಎಲ್ಲೆಲ್ಲೋ ಪ್ರವಾಸ ಮಾಡುತ್ತ ನಾಡೊಳೆಲ್ಲಾ ರಹಸ್ಯವಾಗಿ 'ದೇಶೀಯ ದಳ'ವೊಂದನ್ನು ಸೃಷ್ಟಿಸುತ್ತಿದ್ದಾನೆಂದೂ ಅವರು ಕೇಳಿದ್ದರು ಮಂಗಳೂರಿನಲ್ಲಿಯೂ ಗೋಪಾಲನಿಗೆ ಒಳ್ಳೆಯ ಹೆಸರಿತ್ತು. ಅಂತಹ ಅಚ್ಚ ಸ್ವಚ್ಛ ದೇಶೀಯ ಕ್ರಾಂತಿಕಾರನನ್ನು ಇಂದು ಪ್ರತ್ಯಕ್ಷವಾಗಿ ಕಂಡು, ಅವರಿಗೆ ಬಹಳ ಸಂತೋಷವಾಯಿತು. ಅವನನ್ನು ರಾಜೋಪಚಾರದಿಂದ ಸತ್ಕರಿಸಿದರು.

ರಾತ್ರಿ ಊಟ ಉಪಚಾರಾದಿಗಳೆಲ್ಲಾ ತೀರಿದ ಮೇಲೆ, ಮನೆಯಲ್ಲಿಯೇ ತಮ್ಮ ಮಕ್ಕಳ ಪ್ರದರ್ಶನಕ್ಕೆ ಏರ್ಪಾಡು ಮಾಡಿದರು. ಅವರ ಮಗಳು ವಸಂತಿಯೂ ನಮ್ಮ ಗೌರಿಯೂ ಒಂದೇ ಬಗೆಯ ಅಭಿರುಚಿಯುಳ್ಳ ಓರಿಗೆಯವರು. ಒಂದೇ 'ಮಂಜುಳ ಕಲಾನಿಲಯ'ದ ವಿದ್ಯಾರ್ಥಿನಿಯರು

ನಾಟ್ಯ ಸಂಗೀತಗಳಲ್ಲಿ ತಮ್ಮ ಮಗಳು ವಸಂತಿಗಿಂತಲೂ ಗೌರಿಯೇ ಮೇಲಾದವಳೆಂದು ಶ್ಯಾಮಸುಂದರರಿಗೂ ಗೊತ್ತು. ಗೌರಿಯ "ಕಾಳಿಂಗ ಮರ್ದನ"ವನ್ನು ಅವರು ತುಂಬ ಮೆಚ್ಚುತ್ತಿದ್ದರು. "ಗೌರಿ ಕಾಳಿಂಗ ಮರ್ದನವನ್ನೆ ನರ್ತಿಸಲಿ. ವಸಂತಿ ವಯಲನ್ ಹಿಮ್ಮೇಳವಾದನ ಮಾಡಲಿ." ಎಂದು ಶ್ಯಾಮಸುಂದರರು ಪ್ರೀತಿಯಾಣತಿ ಇತ್ತರು.

ಮಾಳಿಗೆಯ ವಿಶಾಲವಾದ ಹಾಲಿನಲ್ಲಿ, ಶೀನು, ಶ್ಯಾಮಸುಂದರರು, ಗೋಪಾಲ, ಶ್ಯಾಮಸುಂದರರ ಪತ್ನಿ, ಅವರ ಗಂಡು ಮಕ್ಕಳಿಬ್ಬರು, ಇಷ್ಟು ಮಂದಿ ಪ್ರೇಕ್ಷಕರಾಗಿ ಕುಳಿತರು. ಸೇವಕರಿಬ್ಬರು ಬಾಗಿಲೆಡೆಯಲ್ಲಿ ಇಣಿಕಿ ನೋಡುತ್ತ ನಿಂತರು.

ಇದಿರು ಗೋಡೆಯ ಬಳಿಯಲ್ಲಿ ವಸಂತಿ ಕುಳಿತು, ವಯಲನ್ ವಾದನೆಗೆ ಆರಂಭಮಾಡಿದಳು. ಇಂಪಾದ ಕೀಂಕೃತಿಯ ದನಿಯಲೆಗಳು ಹೊರಡತೊಡಗಿದುವು * "ಪೂರ್ವ ಕಲ್ಯಾಣಿಯು" ರಾಗಾಲಾಪನೆಯಿಂದ ಆ ವಾತಾವರಣವು ಕವಿದು, ಅದರ ಬಣ್ಣವು ಬದಲಾಗಲಾರಂಭವಾಯಿತು. ಎಲ್ಲರೂ ನಿಷ್ಪಂದಭಾವದಿಂದ ಆ ರಾಗರಸದಲ್ಲಿ ಮೆಲ್ಲಮೆಲ್ಲನೆ ತೇಲಾಡತೊಡಗಿದರು ಮಂದಾನಿಲವು ರೊಂಯ್ಯರೊಂಯ್ಯನೆ ಸುಳಿಯತೊಡಗಿತು; ಪುಷ್ಪ ಸೌರಭವು ಹರಡಿಕೊಂಡು ಗಮಗಮಿಸಿತು. ಯಾವುದೋ ಒಂದು ಸುಂದರ ವನಾಂತದೊಳಗೆ ಸುಖಾಸೀನರಾದಂತೆ ನಮಗೆ ತೋರತೊಡಗಿತು ಅಗೋ–ಅಲ್ಲೊಂದು ನಿರ್ಝರಿಣಿಯ ಸಳಸಳವೆಂಬ ದನಿ ಕೇಳಿಸುತ್ತಿದೆ ! ಯಾವುದೋ ಒಂದು ನಿಸರ್ಗ ಸೌಂದರ್ಯದ ನೆಲೆವೀಡಿಗೇ ಬಂದ ಮಧುರಾನುಭವ !

ಶಾಂತ-ಗಂಭೀರ ಭಾವರಸಗಳನ್ನು ಸೂಸುವ, ಸಂಧ್ಯಾವಾತಾವರಣವನ್ನು ರೂಪಿಸುವ "ಪೂರ್ವೀ ಕಲ್ಯಾಣಿಯು ಷಡ್ಜದಿಂದ, ಕೆಳಗಿಳಿಯುತ್ತಾ ಮೂರ್ಛನೆಗೆ ಬದಲಾಗಿ ನಿಷಾದದಿಂದ ಕೆಳಗಿಳಿಯುವ ಮೂರ್ಛನೆಯ ರಾಗವೂ, ನಿಷಾದ-ಮಧ್ಯಮಗಳ ಸ್ವರವೂ ಸೇರಿ ಉತ್ಸಾಹ ರಸಭಾವಗಳನ್ನು ಚೆಲ್ಲುತ್ತ 'ಹಂಸಾನಂದೀ' ರಾಗವಾಗಿ ವಯಲನ್‌ವರ್ಷಣೆ ಮಾಡತೊಡಗಿದಾಗ, ಉತ್ಸಾಹಭಂಗಿಯಿಂದ ಕೊಳಲನ್ನು ಊದಿಕೊಂಡು ನಲಿಯುತ್ತ ಕೃಷ್ಣನು ಕಂಗೆಸೆದನು. ಗೌರಿ ಉಟ್ಟ ಸೀರೆಯಲ್ಲಿಯೇ ಕೃಷ್ಣನಂತೆ ಬಂದಿದ್ದಳು. ಈಗ ವಯಲನ್ ನಾದದೊಡನೆ ಕೊಳಲಿನ ದನಿಯೂ ಮೇಳವಿಸಿತು. ಚದರಿದ ಗೋವುಗಳನ್ನು ಕರೆಯುವಂತೆ ಕೊಳಲೂದುತ್ತಿದ್ದಾನೆ ಕೃಷ್ಣ. ಬಳಸಿ ಬಳಸಿ ನರ್ತಿಸುತ್ತಿದ್ದಾನೆ!

ಇದ್ದಕ್ಕಿದ್ದ ಹಾಗೆ ರಾಗ ಧ್ವನಿ ಬದಲಾಯಿಸಿತು. ಪಾಮರ ರಂಜಕವಾದ "ಪಂತುವರಾಳಿ"ಗೆ ತಿರುಗಿತು ಮೃದುವಾದ ಶೃಂಗಾರ-ಕರುಣಾರಸಗಳಿಂದ ಕೃಷ್ಣನು ಅತ್ತಿತ್ತ ಅಲೆದಾಡುತ್ತಿದ್ದಾನೆ "ಎಲ್ಲಿ? ಗೋವುಗಳೆಲ್ಲಿ ?—" ಎಂದು ನೋಡುತ್ತಿದ್ದಾನೆ. ನೋಡುತ್ತಿರಲು ಹಿಮ್ಮೇಳವು "ಕಾಳಿಂಗ! ಕಾಳಿಂಗ!—" ಚೀರಲಾರಂಭ ಮಾಡಿತು ಕೃಷ್ಣನಾಟ್ಯದಲ್ಲಿ ಕೋಪಾವೇಶವೇರಿತು. "ಅಂಬಾ! ಅಂಬಾ!" ಎಂದು

* ಶ್ರೀ, ಕೆ. ವಾಸುದೇವ ಶಾಸ್ತ್ರಿಗಳ "ರಾಗ ಲಕ್ಷಣಗಳು" ಎಂಬ ಲೇಖನದ ಸಹಾಯವನ್ನಿಲ್ಲಿ ತೆಗೆದುಕೊಂಡಿದೆ.

ಗೋವುಗಳ ಕೂಗಾಟವು ಮೊಳಗಿತು. ಇಲ್ಲಿ ತಿರುಗಿದ "ಸಾರಂಗಾ'' ರಾಗಕ್ಕನುಸಾರವಾಗಿ ಕೃಷ್ಣನು ತಿರುಗಿ ತಿರುಗಿ ಕಾಳಿಂಗ ಮಡುವಿಗೆ ಧುಮುಕಿದನು ಕಲಕಿದನು ಭರತನಾಟ್ಯವು ಅಮೋಘವಾಗಿ ಕಂಗೆಸೆ ಯಿತು ಕೃಷ್ಣನು ಕಾಳಿಂಗನನ್ನು ಹುಡುಕಿಹಿಡಿದು ಎತ್ತಿ ಅವನ ಹೆಡೆಯ ಮೇಲೆ ಮೆಟ್ಟಿ ನಿಂತು, ರುದ್ರನೃತ್ಯವೆಸಗಿದನು. ಆಗ ಹಿಮ್ಮೇಳನದಿಂದ ಪುರಂದರದಾಸರ "ಆಡಿದನು ರಂಗ ಅದ್ಭುತದಿಂದಲಿ................" ಎಂಬ ಕೃತಿಯು, ಕಲಸಾಟದ ಸವಿಯುಳ್ಳ "ಯಮುನಾ ಕಲ್ಯಾಣಿ"ಯಲ್ಲಿ ಹೊರ ಡುತ್ತಿದ್ದಿತು!

ಅನಂತರ ಮತ್ತೆ 'ಷಂತುವರಾಳಿಯು' ಶಾಂತಿ-ಕರುಣಾ, ಶರಣಾಗತ ಕಾಳಿಂಗನಿಗೆ ಕೃಷ್ಣನ ಅಭಯ ಅನಂತರ ಮೊದಲಿನ ಉತ್ಸಾಹದ ಓಟ. "ಪೂರ್ವಿ ಕಲ್ಯಾಣಿ'' ರಾಗದಲ್ಲಿ ಕೃಷ್ಣನು ಗೋವಳರೊಡನೆ ಸೇರಿ ಕೊಂಡು ನಲಿದಾಟ.

ಕೃಷ್ಣನು ನಲಿನಲಿದು ಬಂದು, ಮುಂದೆ ಮುಂದೆ ಬಂದು, ಅಣ್ಣ ನಿಗೂ, ಶ್ಯಾಮಸುಂದರರಿಗೂ ಮೈ ಬಾಗಿಸಿ ಮಣಿದು ಬದಿಯಲ್ಲಿ ನಿಂತಳು. ವಸಂತಿಯ ಹಿಮ್ಮೇಳವೂ ನಿಂತಿತು.

ಆಗ ತಾನೇ ಎಲ್ಲರೂ ಕನಸಿನ ಲೋಕದಿಂದ ನಿಜಲೋಕಕ್ಕಿಳಿದರು! ಏನಾಶ್ಚರ್ಯ! ಕಾಳಿಂಗನಿಲ್ಲ! ಮಡುವಿಲ್ಲ! ಗೋವುಗಳಿಲ್ಲ! ಗೋವಳರಿಲ್ಲ! ಎಲ್ಲವೂ ಇರುವಂತೆ ಗೌರೀ ವಸಂತಿಯರಿಬ್ಬರೇ, ಧ್ವನಿ ವಿಧಾನ, ರಾಗ ಭೇದ, ನಾಟ್ಯ ಕೌಶಲಗಳಿಂದ ಚಿತ್ರಿಸಿ ತೋರಿಸಿ ಬಿಟ್ಟಿದ್ದರಲ್ಲ?

ಎಲ್ಲರಿಗಿಂತ ಹೆಚ್ಚಾಗಿ ಗೋಪಾಲನು ತೀರ ಮುಗ್ಧನಾಗಿ ಹೋಗಿ ದ್ದನು. ರಸಭಾವದಲ್ಲಿ ಬಹಳ ಆಳದವರೆಗೆ ಮುಳುಗಿ ಆನಂದ ಮಯ ನಾದನು ಅವನೇ!—" ಆಹಾ! ಹೊಸ ಲೋಕವನ್ನೇ ಸೃಷ್ಟಿಸಿಬಿಟ್ಟರು ! ದ್ವಾಪಾರಯುಗದ ಕೃಷ್ಣನ ಕಾಲಕ್ಕೇ ಹೋದಂತಾಯಿತು! ಅನ್ಯಾದೃಶ! ಅನ್ಯಾದೃಶ!" ಎಂದು ಮೈಮರೆತು ಹೇಳಿದನು.

ಆ ಮೇಲೆ ಗೌರಿಯ ಹಿಮ್ಮೇಳವಾದನದಲ್ಲಿ ವಸಂತಿಯ ನಾಟ್ಯ ವಾಗಬೇಕೆಂದು ಶೀನೂ-ಗೋಪಾಲರು ಒತ್ತಾಯಮಾಡಿದರು. ಹಾಗೆಯೇ ಆಣತಿಹೊರಡಿಸಿದರು ಶ್ಯಾಮಸುಂದರರು

ಗೌರಿ ವಲಯನ್ ಕೈಗೊಂಡು ಕುಳಿತಳು. ನಾಟ್ಯ ವಿಷಯ 'ಮನ್ಮಥ ದಹನ'. ಗೌರಿ ಮೊದಲು "ಯಮುನಾ ಕಲ್ಯಾಣಿ'' ರಾಗ ದಿಂದ ವಸಂತ ಕಾಲವನ್ನು ಸೃಷ್ಟಿಸುತ್ತ, "ಪೂರ್ವಿ ಕಲ್ಯಾಣಿ" ರಾಗದಿಂದ ಅದನ್ನು ಶೋಭಾಯಮಾನವಾಗಿ ಮಾಡುತ್ತಿರಲು, ವಸಂತಿ ಮನ್ಮಥ ಳಾಗಿ ಭರತನಾಟ್ಯದ ಮುದ್ರೆಗಳಿಂದ ನಾಟ್ಯಾಭಿನಯಗಳನ್ನು ಹಿಡಿದಳು. ಶಿವನೂ, ರತಿಯೂ ಅಲ್ಲಿಲ್ಲದಿದ್ದರೂ, ಮನ್ಮಥ ನಾಟ್ಯದ ಭಾವಭೇದ ಗಳಿಂದ ಅವರಿರುವಂತೆಯೇ ಅಭಿನಯಿಸಿ, ದಹನವಾಗಿ ಬಿದ್ದಳು. ನರ್ತ ನವು ಚೆನ್ನಾಗಿಯೇ ಇದ್ದಿತು. ಆದರೂ ನಾಟಕೀಯದ ರೀತಿಯಲ್ಲಿದ್ದಿತೇ ಹೊರತು, ಗೌರಿಯ ಆ ಸ್ವಾಭಾವಿಕವಾದ ಲಾಲಿತ್ಯ-ವಿನ್ಯಾಸಗಳು ಬರ ಲಿಲ್ಲ. ಗೌರಿ ನಾಟ್ಯ ಮತ್ತು ಹಿಮ್ಮೇಳವಾದನ ಎರಡರಲ್ಲಿಯೂ ಪ್ರವೀಣೆ ಯೆಂದೂ, ವಸಂತಿ ವಯಲನ್ ವಾದನದಲ್ಲಿ ಮಾತ್ರ ಕೈತೋರಿದವ ಳೆಂದೂ ತಿಳಿದುಕೊಳ್ಳಬಹುದಾಗಿತ್ತು

ಅನಂತರ ಗೌರೀ-ವಸಂತಿಯರ ಸಣ್ಣ ಸಂಗೀತ ಕಛೇರಿಯೂ ಕರ್ಣಾಮೃತವಾಗಿ ನಡೆಯಿತು ಅದರಲ್ಲಿಯೂ ಗೌರಿಯ ಸಂಗೀತವು ಕೋಗಿಲೆಯ ಕಂಠದ ಸ್ವಾಭಾವಿಕ ನಾದ ಮಾಧುರ್ಯದಿಂದ ತುಂಬಿತ್ತು. ವಸಂತಿಯದು ಕೊಂಚ ಕಿವಿಯನ್ನು ಚುಚ್ಚುವಂತಹ ಕೀಚು ಧ್ವನಿ. ಗೌರಿಯ ರಾಗದಿಂದ ಹೊರಡುವಷ್ಟು ನಯಬಿಂದುಗಳಿರಲಿಲ್ಲ. ನಿಷ್ಪಕ್ಷ ಪಾತ ಭಾವದಿಂದ ಶ್ಯಾಮಸುಂದರರೇ ಹೇಳಿದರು,— "ಗೌರಿ ಕಲೆ ಗಾಗಿಯೇ ಹುಟ್ಟಿದ ಅಪೂರ್ವಳು. ಇವಳನ್ನೊಂದು ಕಲಾ ಜ್ಯೋತಿ ಯಾಗಿ ಬೆಳಗುವಂತೆ ಮಾಡಿದರೇನೇ ಸಾರ್ಥಕ!"

ಆಗ ಗೋಪಾಲನು:-- "ಹೌದು. ಇವರಿಬ್ಬರನ್ನೂ ಮದರಾಸಿನ ಮಹಿಳಾಭ್ಯುದಯದ ಮಂಡಲಿಗೆ ಕಳುಹಿಸಿದರೆ, ಕಲಾ ಜ್ಯೋತಿಗಳೇ ಆಗಿ ಬೆಳಗುವರು. ಖಂಡಿತವಾಗಿ ಇವರನ್ನು ಅಲ್ಲಿಗೇ ಕಳುಹಿಸಬೇಕು." ಎಂದನು

''ಹೌದು. ಗೋಪಾಲರಾಯರ ಮಾತು ನಿಜ. ಏನನ್ನುವಿ ಶೀನು? ನೀನು ನಿನ್ನ ತಂಗಿಯನ್ನು ಕಳುಹಿಸುವಿಯಾದರೆ ಜತೆಯಲ್ಲಿ ವಸಂತಿಯನ್ನೂ ಕಳುಹಿಸುತ್ತೇನೆ. ಮಹಿಳಾಭ್ಯುದಯ ಮಂಡಲಿಯ ವಿಷಯ ನಾನೂ ಬಲ್ಲೆ. ಅಲ್ಲಿಯ ಕಲಾ-ವಿಭಾಗದಲ್ಲಿ, ಕಥಕಳಿ,

ಮಣಿಪುರಿ, ಭರತನಾಟ್ಯ, ಮೊದಲಾದ ನಾಟ್ಯ ಬಗೆಗಳನ್ನು, ಆ ಆ ಅನುಭವಸ್ಥ ಬೋಧಕರಿಂದ ಗಣನೀಯವಾಗಿ ಬೋಧಿಸಲ್ಪಡುತ್ತದಂತೆ. ಕಲೆಯನ್ನು ಬಾಳುವೆಯೊಂದಿಗೆ ಹೇಗೆ ಹೊಂದಿಸಿಕೊಂಡು ಹೋಗಬಹುದು ಎಂಬುದನ್ನು ಅಲ್ಲಿ ಚೆನ್ನಾಗಿ ಕಲಿಸುತ್ತಾರಂತೆ. ಕಲೆ, ತನ್ನ ಹೊಲಸನ್ನು ಕಳೆದುಕೊಂಡು, ಅಡ್ಡದಾರಿಗೆ ತಿರುಗದಂತೆ, ಪೂಜನೀಯವಾಗಿ ಕಳೆಗೊಂಡು ಮೆರೆಯಬೇಕಾದರೆ ಅಂತಹ ಸ್ಥಳದಲ್ಲಿ ತೇರ್ಗಡೆಹೊಂದಿದರೇನೇ ಸಾಧ್ಯ. ನೀನು ಒಪ್ಪುವಿಯಾದರೆ ಇವರಿಬ್ಬರನ್ನೂ ಕಳುಹಿಸೋಣ. ಗೌರಿಯ ಖರ್ಚಿನ ಚಿಂತೆ ಕೂಡ ನಿನಗೆಬೇಡ ಶೀನು! ನನ್ನ ಇನ್ನೊಬ್ಬಳು ಮಗಳವಳು!" ಎಂದು ಶ್ಯಾಮಸುಂದರರು ನುಡಿದರು. ನೆನೆದ ಕಾರ್ಯವನ್ನು ಕೂಡಲೇ ಮಾಡಿ ಮುಗಿಸುವ ದೃಢಸ್ವಭಾವ ಅವರದು.

ಶೀನು ಕೃತಜ್ಞತೆ ತುಂಬಿದ ಕೊರಳಿನಿಂದ— "ತಮ್ಮ ಔದಾರ್ಯಕ್ಕೆ ನಾನು ಆ ಜನ್ಮ ಋಣಿ. ಆದರೆ ಅವಳನ್ನು ಮದರಾಸಿಗೆ ಕಳುಹಿಸುವ ವಿಷಯದಲ್ಲಿ, ಗೆಳೆಯ ಗೋಪಾಲನು ಒಪ್ಪಿದರೆ ನಾನು ಒಪ್ಪಿದಂತೆ."

ಮದರಾಸಿಗೆ ಹೋಗಿ ಕಲಿಯಬೇಕೆಂಬ ಆತುರವು ಗೌರೀ ವಸಂತಿಯರಿಗೂ ಉಕ್ಕುತ್ತಿದ್ದಿತು. ಅಂತೆಯೇ ಅವರಿಬ್ಬರೂ ಗೋಪಾಲನ ಮುಖವನ್ನು ನೋಡಿದರು. ಆಗ ಗೋಪಾಲನು ನಗುತ್ತ— "ನಾನು ಮೊದಲೇ ಹೇಳಲಿಲ್ಲವೇ ಶೀನು? ಅಗತ್ಯವಾಗಿ ಕಳುಹಿಸಬೇಕು. ಗೌರೀ ವಸಂತಿಯರಿಬ್ಬರೂ, ರಾಣೀ ಭಾರತಮಾತೆಯ, ಅಕ್ಕಪಕ್ಕಗಳ ಎರಡು ದಿವ್ಯ ಕಲಾ ಜ್ಯೋತಿಗಳಾಗಿ ಬೆಳಗಲು ತಕ್ಕವರಾಗಿದ್ದಾರೆ. ಏನೂ ಸಂದೇಹ ಬೇಡ" ಎಂದನು.

"ಹಾಗಾದರೆ ನಾನು ನಾಳೆಯೇ, ಎಲ್ಲಾ ವಿವರಗಳನ್ನೂ ತಿಳಿಸುವಂತೆ ಪತ್ರ ಬರೆಯುತ್ತೇನೆ. ಹೇಗೂ ಮದರಾಸಿನಲ್ಲಿ ನಮ್ಮ ಭಾವ ಗಜವದನರಾಯರಿದ್ದೇ ಇದ್ದಾರೆ. ನಮ್ಮ ಹುಡುಗಿಯರು ಸ್ವಂತ ಮನೆಯಲ್ಲಿರುವಂತೆಯೇ ಅಲ್ಲಿರಬಹುದು" ಎಂದರು ಶ್ಯಾಮಸುಂದರರು.

"ತಮ್ಮ ಸಹಾಯದಿಂದ ನನ್ನ ತಂಗಿಯ ಭವಿಷ್ಯವೂ ಬೆಳಗುವಂತಾಯಿತು. ನಾನು ನನ್ನ ತಂಗಿಯನ್ನು ನಿಮ್ಮ ವಶಕ್ಕೊಪ್ಪಿಸಿ, ಕೊಂಚ ಸೇವಾ ಕಾರ್ಯದಲ್ಲಿ ಪ್ರವಾಸ ಹೊರಡುವ ದೀಕ್ಷೆಯನ್ನು ಕೈಗೊಂಡಿ

ದ್ದೇನೆ. ಆದುದರಿಂದ ಇನ್ನು ಸ್ವಲ್ಪಕಾಲ ನಿಮ್ಮ ಮಗಳ ಜತೆಯಲ್ಲಿ ಗೌರಿಯ ಕ್ಷೇಮಲಾಭಾದಿಗಳನ್ನು ತಾವೇ ನೋಡಿಕೊಳ್ಳಬೇಕೆಂದು ಬೇಡಿಕೊಳ್ಳುತ್ತೇನೆ '' ಎಂದನು ಶೀನು.

''ಬೇಡಿಕೊಳ್ಳುವುದೇಕೆ? ಗೌರಿ ವಸಂತಿಯಂತೆಯೇ ನನ್ನ ಮಗಳು ಎಂದು ನಾನು ಮೊದಲೇ ಹೇಳಿದೆನು? ಅವಳ ಚಿಂತೆಯನ್ನು ಬಿಟ್ಟು ಬಿಡು." ಎಂದರು ಶ್ಯಾಮಸುಂದರರು.

''ಹಾಗೆಲ್ಲಿಗೆ ಹೋಗುತ್ತೀಯಣ್ಣ? ಬಹು ದೂರವೆ?" ಎಂದು ಗೌರಿ ಕೇಳಿದಳು.

"ದೂರವೇನಿಲ್ಲ. ಈ ಗೋಪಾಲರಾಯರ ಕಾರ್ಯಕ್ಕೆ ನಾನೂ ಕೈ ಹಾಕಿದ್ದೇನೆ ಸುಮ್ಮನಿರುವುದು ಬೇಸರವಾಗಿದೆ ಪ್ರಚಾರ ಕಾರ್ಯವನ್ನು ಕೈಕೊಂಡು ಗ್ರಾಮ ಗ್ರಾಮ ತಿರುಗುವುದೇ ಕೆಲಸ. ಭಾಷಾಸೇವೆ ಯೊಂದಿಗೆ ಸಾಧ್ಯವಾದಷ್ಟು ದೇಶಸೇವೆಯೂ ಜರುಗಲಿ ಎಂದು."— ಶೀನುವೆಂದನು

''ಸ್ತುತ್ಯವಾದ ಕೆಲಸ!" ಎಂದರು ಶಾಮಸುಂದರರು.

"ಎಲ್ಲಾ ಇವರ ಸ್ನೇಹದ ಮಹಿಮೆಯೆಂದು ಕಾಣುತ್ತದೆ" ಎಂದು ಗೌರಿ ಗೋಪಾಲನ ತೇಜಸ್ವೀ ಮುಖವನ್ನು ಓರೆ ನೋಟದಿಂದ ನೋಡಿದಳು.

ಆಗ ಹರ್ಷಿತನಾದ ಗೋಪಾಲನು— "ಶೀನೂ! ನೀನೂ ಮದರಾಸಿನ ವರೆಗೆ ಹೋಗಬಹುದಲ್ಲ? ನೀನೇ ಹೋಗಿ ಇವರಿಬ್ಬರನ್ನೂ ಮಹಿಳಾಭ್ಯುದಯ ಮಂಡಲಿಯ ಕಲಾಶಾಲೆಯಲ್ಲಿ ಸೇರಿಸಿ ಬರುವುದು ಒಳ್ಳೇದಲ್ಲವೆ? ಹೋಗುವಾಗ ಪ್ರಚಾರ ಕಾರ್ಯವನ್ನೂ ಸ್ವಲ್ಪಸ್ವಲ್ಪ ಮಾಡುತ್ತ, ಸುತ್ತಿಕೊಂಡೇ ಹೋದರಾಯಿತು.'' ಎಂದು ಇನ್ನೊಂದು ಯೋಚನೆ ಪ್ರೇರೇಪಿಸಿದನು

ಆದನ್ನು ಕೇಳಿ ಗೌರಿ ಉತ್ಸಾಹದಿಂದ— '' ಹೌದಣ್ಣ. ನನಗೆ ಮೈಸೂರಿನ ವೃಂದಾವನ, ಹಳೇಬೀಡು, ಹಂಪೆ, ಎಲ್ಲಾ ಸುತ್ತಿ ನೋಡಬೇಕೆಂದಿದೆ. ಆ ದಾರಿಯಾಗಿ ಸುತ್ತಿಕೋಡೇ ಮದರಾಸಿಗೆ ಹೋದರಾಗದೆ?"

ಶ್ಯಾಮಸುಂದರರು "ಯಾಕಾಗದು? ಕೆಲವು ದಿನ ತಡವಾದೀತು. ಅದರಿಂದೇನಾಯಿತು? ಬೇಕಾದರೆ ನನ್ನ ಕಾರನ್ನೇ ಕಳುಹಿಸುತ್ತೇನೆ."

ಹೊಸ ವಿಷಯವು ತಲೆಹಾಕಿದುದರಿಂದ, ಮಧ್ಯರಾತ್ರಿಯಾದರೂ ಯಾರಿಗೂ ನಿದ್ರೆ ಬರಲಿಲ್ಲ. ಮದರಾಸು ಪ್ರಯಾಣದ ಮಾತು ಮುಂದುವರಿಯುತ್ತಾ ಹೋಯಿತು. ಮದರಾಸಿನ ಮಾತು ಬರುತ್ತಲೇ ವಸಂತಿಯ ತಾಯಿಗೆ ಭಯವಾಯಿತು." ಈ ಸಮಯದಲ್ಲಿ ಮದರಾಸಿಗೆ ಹೋಗಬಹುದೆ? ಅಲ್ಲಿಗೆ ಜಾಪಾನಿನವರು ಬಾಂಬು ಹಾಕುತ್ತಾರೆ ಅಂತ ಹೆದರಕೆ ಉಂಟಂತೆ! ಮದರಾಸು ಬಿಟ್ಟು ಜನರೆಲ್ಲಾ ಓಡಿ ಓಡಿ ಹೋಗುತ್ತಾರಂತೆ ಇಂಥಾ ಕೆಟ್ಟ ಸಮಯದಲ್ಲಿ ಹುಡುಗಿಯರನ್ನು ಮದರಾಸಿನಲ್ಲಿ ಬಿಡುವ ಆಲೋಚನೆ ಮಾಡುತ್ತೀರಲ್ಲಾ!" ಎಂದು ಅವಳು ತನ್ನ ಅಂಜಿಕೆಯನ್ನು ಬೈಲಿಗಿಟ್ಟಳು.

ಅದಕ್ಕೆ ಶ್ಯಾಮಸುಂದರರು ಅಲಕ್ಷ್ಯವಾಗಿ ನಗುತ್ತಾ "ಈಗ ಅಂತಹ ಭಯ ಏನೂ ಇಲ್ಲ. ಸುಮ್ಮಸುಮ್ಮನೆ ಜನರು ಹೂಂ ಅಂದರೆ ಹುಲೀ ಅನ್ನುತ್ತಾರೆ. ಹಾಗೆ ನೋಡಿದರೆ ಮದರಾಸಿಗಿರುವಷ್ಟೇ ಭಯ ಈ ಮಂಗಳೂರಿಗೂ ಇದೆ. ಕಡಲಬದಿಯ ಎಲ್ಲಾ ಊರುಗಳಿಗೂ ಇದೆ. ಈಗ ಮದರಾಸು ಖಾಲೀಮಾಡಿ ಜನರು ಓಡಾಡುತ್ತಿದ್ದಾರಂತ ಯಾರು ಹೇಳಿದ್ದು? ಅದು ಕಳೆದ ವರ್ಷ ಜಾಪಾನು ಯುದ್ಧವನ್ನು ತೊಡಗಿಸುತ್ತಲೇ, ಜನರೆಲ್ಲಾ ಭಯಭ್ರಾಂತರಾಗಿ ಎಲ್ಲಾ ಬಿಟ್ಟುಗೊಟ್ಟು ಓಡಲಾರಂಭಿಸಿದ್ದು ಅಂಥ ಭಯವನ್ನು ಜನರಿಗೆ ಹುಟ್ಟಿಸಿದ್ದು ಕೂಡಾ ಸರಕಾರದವರೇ. ಜನರೆಲ್ಲಾ ಓಡಲಿ ಎಂದು ಸರಕಾರವೇ ಕೂಗಿತು. ಹೀಗೆ ಸರಕಾರವೇ ಹೆದರಿ ಮುಖ್ಯ ಮುಖ್ಯವಾದ ಆಫೀಸುಗಳನ್ನು ಪೂನಾಗೀನಾ ಮೊದಲಾದ ಎಲ್ಲೆಲ್ಲಿಗೋ ಸಾಗಿಸಲಾರಂಭಿಸಿದಾಗ ಜನರು ಏನೋ ಎಂತೋ ಎಂದುಕೊಂಡು ಊರೂರಿಗೆ ಓಡಲಾರಂಭಿಸಿದರು. ಹಾ ಹಾ ಎಂಬಷ್ಟರೊಳಗೆ ಮದ್ರಾಸು ಪೂರಾ ಹಾಳು ಸುರಿಯುವಂತೆ ಖಾಲಿಯಾಯಿತು. ಬಾಯಾರಿದರೆ ಒಂದು ಲೋಟಾ ಕಾಫಿ ತೊಟ್ಟು ಕೂಡಾ ಸಿಕ್ಕದ ಹಾಗಾಯಿತು. ಎಲ್ಲಿ ನೋಡಿದರೂ ಮಿಲಿಟರೀಮಯ! ಮತ್ತೆ ಬೇಗದಲ್ಲಿಯೇ ಸುಮ್ಮನೆ ಹೆದರಿದ್ದೆಂದು ಜನರಿಗೆಲ್ಲ ಗೊತ್ತಾಯಿತು. ಎಲ್ಲಿದ್ದರೂ ಒಂದೇ ರೀತಿಯ ಭಯವಲ್ಲವೆ? ಈ ತತ್ವ ಬೇಗನೇ ಗೊತ್ತಾ

ಯಿತು ಜನರಿಗೆ ಎಲ್ಲರೂ ಮತ್ತೆ ಬಡಬಡನೆ ಮದರಾಸಿಗೇ ಹೋಗಿ ತುಂಬಿಕೊಂಡು ಬಿಟ್ಟಿದ್ದಾರೆ. ಈಗ ಮದರಾಸಿನ ಜನಸಂಖ್ಯೆ ಕಳೆದ ವರ್ಷಕ್ಕಿಂತ ಒಂದೂವರೆ ಮಡಿ ಹೆಚ್ಚಾಗಿದೆಯಂತೆ ಈಗ ಅಲ್ಲಿ ಎಷ್ಟೋ ಜನ ನಮ್ಮವರೂ ಇದ್ದಾರೆ ಒಂದು ಕನ್ನಡ ಸಂಘವೂ ಅಲ್ಲಿದೆ. ಎಲ್ಲರಂತೆ ನಮ್ಮ ಬಾವ ಗಜವದನರಾಯರೇನೂ ಹೆದರಿ ಓಡಲಿಲ್ಲ ಅಲ್ಲಿಯೇ ಗಟ್ಟಿಯಾಗಿದ್ದಾರೆ ನಮ್ಮ ಮನೆಯಂತೆಯೇ ಅವರ ಮನೆ. ನಮ್ಮ ಮಕ್ಕಳು ಅವರ ಮನೆಯಲ್ಲಿರಲಿಕ್ಕೂ ಅಂಜಿಕೆಯೆ?....... " ಎಂದು ತಮ್ಮ ಪತ್ನಿಗೆ ತುಂಬಾ ಧೈರ್ಯವನ್ನೂ ಮಾಡಿದರು.

"ಏನೋ! ಈಗಿನ ಯುದ್ಧದ ರೀತಿಯೇ ವಿಚಿತ್ರ ಆಕಾಶಾಂತಿಲ್ಲ, ನೀರಂತಿಲ್ಲ, ನೆಲವೆಂತಿಲ್ಲ; ಎಲ್ಲಿದ್ದರೂ ಒಂದೇ ದೇವರೇ ಕಾಪಾಡಬೇಕು ನಿಮ್ಮ ಇಷ್ಟದಂತೆ ಮಾಡಿ '' ಎಂದು ಅವಳು ಸುಮ್ಮನಾದಳು. ಶ್ಯಾಮಸುಂದರರ ಇಷ್ಟಕ್ಕೆ ವಿರೋಧವಾಗಿ ಅವಳು ಹೆಚ್ಚು ಮಾತಾಡುವವಳಾಗಿರಲಿಲ್ಲವೇನೋ !

ಹೀಗೆ ಗೌರೀ ವಸಂತಿಯರನ್ನು ಮದರಾಸಿಗೆ "ಮಹಿಳಾಭ್ಯುದಯ ಮಂಡಲಿ"ಗೆ ಸೇರಿಸುವುದೆಂದು ನಿಶ್ಚಯವಾಯಿತು ಆಗ ರೈಲ್ವೇ ಕಂಪನಿಯನ್ನು ಮಿಲಿಟರೀ ಸರಕಾರವು ಕೈಗೆ ತೆಗೆದುಕೊಂಡಿತ್ತು ರೈಲಿನಲ್ಲಿ ಪ್ರಯಾಣ ಮಾಡುವುದೆಂದರೆ ಬಹಳ ಕಷ್ಟ. ಸದಾಸರ್ವದಾ ಮಿಲಿಟರಿಯವರ ಹೋಗುಬರುವಿಕೆಯೇ ! " ಹೆಚ್ಚು ಪ್ರಯಾಣ ಮಾಡಬೇಡಿ. ಅತೀ ಅಗತ್ಯವಿದ್ದರೆ ಮಾತ್ರ ಪ್ರಯಾಣ ಮಾಡಿ" ಎಂಬ ಬೋರ್ಡುಗಳು ಪ್ರತಿ ಸ್ಟೇಶನ್ನಿನಲ್ಲಿಯೂ. ಕಾಣುತ್ತಿದ್ದುವು. ಹಿಂದೆ "ಬನ್ನಿರಿ. ರೈಲಿನಲ್ಲಿ ಸುಖ ಪ್ರಯಾಣ ಮಾಡಿರಿ" ಎಂದು ಜನರನ್ನು ಕರೆಕರೆದು ಹೇಳಿದ ಅದೇ ರೈಲ್ವೇ ಕಂಪನಿ, ಈಗ " ಬರಬೇಡಿರಿ ರೈಲೇರಿ ಹೋಗಬೇಡಿರಿ " ಎಂದು ಪ್ರಚಾರ ಮಾಡುತ್ತಿತ್ತು! ಎಂಥ ವಿಪರೀತ ಕಾಲವಿದು! ಪ್ರಯಾಣ ಮಾಡಿದರೂ ಅಬ್ಬಬ್ಬ !--ಅದೇನು ನುಗ್ಗುನುರಿ ! ಅನುಭವಿಸಿದವರಿಗೇ ಗೊತ್ತು ಆ ನರವೇದನೆ! ಮದರಾಸಿನಂತಹಲ್ಲಿಗೆ ದೀರ್ಘ ಪ್ರಯಾಣವನ್ನು ರೈಲಿನಲ್ಲಿ ಮಾಡಿದರೆ, ಅಲ್ಲಿಗೆ ಹೋಗಿ ಮುಟ್ಟುವಾಗ, ಮೈಪೂರಾ ಅರ್ಧಂಬರ್ಧ ಬಜ್ಜಿಯೇ ಸರಿ ! 'ರಿಸರ್ವ್ಡ್', 'ಫಸ್ಟ್‌ಕ್ಲಾಸ್', 'ಸೆಕೆಂಡ್ ಕ್ಲಾಸು' 'ಇಂಟರ್' ಇಲ್ಲಿಯೂ ದೊಡ್ಡ ದೊಡ್ಡ ಮಿಲಿಟರೀ ಅಧಿಕಾರಿ

ಗಳೇ ಆಕ್ರಮಿಸುವುದರಿಂದ, ಯಾರಿಗಾದರೂ ರೈಲ್ವೇ ಪ್ರಯಾಣವೆಂದರೆ ಮೈಮುಳ್ಳೇಳುವಂತಿತ್ತು.

ಇನ್ನು ಬಸ್ಸನ್ನು ನೋಡಿದರೋ—ಮತ್ತೂ ಅಧ್ವಾನ್ನ ! ಹೆಸರಿಗೆ ಒಂದೋ ಎರಡೋ ಇರುವ ಬಸ್ಸು ಸರ್ವಿಸುಗಳು, ಪೆಟ್ರೋಲಿನ ಪಸೆ ಇಲ್ಲದೆ ಇದ್ದಲಿಯ ಗ್ಯಾಸಿನಿಂದ ಜಗ್ಗಿ ಹಾಕಿಕೊಂಡು ಹೋಗುತ್ತಿದ್ದುವು. ಅದಕ್ಕೂ ಎಷ್ಟು ಜನ ಕಾದಿದ್ದಾರೋ ! ಸೀಟೇ ಸಿಕ್ಕದು. ಇಂತಹ ಸಮಯದಲ್ಲಿ ಮಹಿಳೆಯರನ್ನು ಕರೆದುಕೊಂಡು ಪ್ರಯಾಣ ಮಾಡುವುದು ಬಹಳ ಕಷ್ಟವಲ್ಲವೆ ? ಮೊದಲಿನ ಕಾಲವಾದರೆ, ಮಂಗಳೂರಿನಲ್ಲಿ ರೈಲೇರಿ ಹಾಯಾಗಿ ಕುಳಿತು ಬಿಟ್ಟರೆ, ಮದರಾಸಿನಲ್ಲೇ ಇಳಿವರೆ ತೀರಿತು. ಆ ಸೌಕರ್ಯ ಕನಸಿನಂತಾಗಿದೆ.

ಅದಕ್ಕಾಗಿಯೇ ಶ್ಯಾಮಸುಂದರರರು ತಮ್ಮ ಕಾರನ್ನೆ ಮದರಾಸಿಗೆ ಕಳುಹಿಸುವ ತೀರ್ಮಾನ ಮಾಡಿದರು. ಮಡಿಕೇರಿಯ ಮಾರ್ಗವಾಗಿ ಮೈಸೂರಿಗೆ ಹೋಗಿ, ಅಲ್ಲಿಂದ ಶಿವಮೊಗ್ಗಾ ಹರಿಹರಕ್ಕಾಗಿ ಸುತ್ತಿಕೊಂಡು ಹೊಸಪೇಟೆಗೆ ಹೋಗಿ ಹಂಪೆಯನ್ನು ನೋಡಿಕೊಂಡು, ಬಳ್ಳಾರಿಯ ಮಾರ್ಗವಾಗಿ ಮದರಾಸಿಗೆ ಹೋಗುವುದೆಂದೂ, ಅನಂತರ ಆ ಕಾರನ್ನು ಮಾರಿಬಿಡಬೇಕೆಂದೂ, ಅವರ ಯೋಚನೆ. ಅವರ ಡ್ರೈವರ್ ಸದಾಶಿವನು ಅವರ ವಿಶ್ವಾಸಕ್ಕೆ ಪಾತ್ರನಿದ್ದನು. ಡಿ. ಎಸ್. ಪಿ ಮೊದಲಾದ ದೊಡ್ಡ ದೊಡ್ಡ ಉದ್ಯೋಗಸ್ಥರು ಶ್ಯಾಮಸುಂದರರ ಗೆಳೆಯರಾದುದರಿಂದ, ಕಾರಿಗೆ ಬೇಕಾದ ಲೈಸನ್ಸು, ಪೆಟ್ರೋಲು ಕೂಪನ್ನು ಪಡೆದುಕೊಳ್ಳುವುದು ಅವರಿಗೇನೂ ಕಷ್ಟವಿರಲಿಲ್ಲ.

ಆದರೆ ಶೀನು ಮದರಾಸಿನವರೆಗೂ ಬಂದಾನೆಂಬ ನಂಬುಗೆ ಹೇಗೆ ? ಅವನು ಕೈಗೊಂಡ ಕಾರ್ಯದಲ್ಲಿ ಅಕಸ್ಮಾತ್ತಾಗಿ ಪೋಲೀಸರ ಖೈದಿಯಾಗುವ ಸಂಭವವೂ ಉಂಟಲ್ಲವೆ? ಶ್ಯಾಮಸುಂದರರಿಗೆ ಪ್ರಕೃತ ಮದರಾಸಿಗೆ ಹೊರಡಲು ಸೌಕರ್ಯವಿಲ್ಲ. ಆದರೆ ಎಲ್ಲ ಭಾರವನ್ನೂ ನಿರ್ವಹಿಸಲು ಸಮರ್ಥನಾದ ಪ್ರಾಮಾಣಿಕನಾದ ಡ್ರೈವರ್ ಸದಾಶಿವನಿದ್ದಾನೆ. ಜತೆಯಲ್ಲಿ ಶ್ಯಾಮಸುಂದರರ ೧೫ ವರ್ಷದ ಹುಡುಗ ಕೇಶವನೂ ಹೋಗಿ, ಸದಾಶಿವನೊಂದಿಗೇ ವಾಪಾಸು ಬರಲಿ. ಮದರಾಸಿಗೆ ಸೇರಿದ ಮೇಲೆ ಗೌರೀ-ವಸಂತಿಯರ ಮೇಲು ವಿಚಾರಕ್ಕೆಲ್ಲ ಗಜವದನರಾಯರಿದ್ದೇ

ಇದ್ದಾರೆ. ಆದುದರಿಂದ ಶೀನು ಅವರನ್ನು ಕರೆದುಕೊಂಡು ಹೋಗು ತ್ತಾನೆ ಎನ್ನುವುದಕ್ಕಿಂತ, ಅವರ ಜತೆಯಲ್ಲಿ ಶೀನು ಹೋಗುತ್ತಾನೆ ಎಂದರೇ ಸಮಂಜಸ.

## ೧೭

ಆ ದಿನ ಗೋಪಾಲನು ಶೀನುವಿನ ಜತೆಯಲ್ಲಿಯೇ ಮಲಗಿ ಉಳಿದ ರಾತ್ರಿಯನ್ನು ಅಲ್ಲಿಯೇ ಕಳೆದನು. ಮರುದಿನ ಬೆಳಗ್ಗೆ ಶೀನು ಎದ್ದು ಮುಖ ಮಾರ್ಜನಾದಿಗಳನ್ನು ತೀರಿಸಿಕೊಳ್ಳುತ್ತಿದ್ದಾಗ, ಗೌರಿ ಅವನ ಬಳಿಗೆ ಬಂದು, ತನ್ನ ಹೃದಯದೊಳಗಿದ್ದ ಒಂದು ಸಂದೇಹವನ್ನು ಬಿಡಿಸಿ ಕೊಂಡಳು "ಅಣ್ಣ! ಮದರಾಸಿಗೆ ನಾನು ಹೋಗಿ ಕಲಿಯಬಹುದೆಂದು ಎಲ್ಲರ ಇದಿರಿನಲ್ಲಿ ಅವರೇನೋ ಒಪ್ಪಿದ್ದಾರೆ. ಉತ್ತೇಜನವನ್ನೂ ಕೊಟ್ಟಿದ್ದಾರೆ................"

"ಯಾರೇ ಅದು?"

"ಅವರೇ—ನಿನ್ನ ಆ ಸ್ನೇಹಿತರು........"

"ಓಹೋ ! ಗೋಪಾಲನೆ ? ಈಗಲೇ ಅವನು ನಿನ್ನ ಅವರು ಆಗಿ ಬಿಟ್ಟನೆ? ಸಹಜ! ಸಹಜ! ನಿನ್ನ ಸಂದೇಹ ಗೊತ್ತಾಯಿತು ಗೌರಿ. ಅವನ ಒಪ್ಪಿಗೆಯ ವಿಷಯದಲ್ಲಿ ನನಗೆ ಏನೂ ಸಂದೇಹವಿಲ್ಲ ಮೊತ್ತಮೊದಲು ಈ ಮಾತನ್ನು ನನ್ನ ಮನಸ್ಸಿಗೆ ಹಾಕಿದವನೇ ಅವನು ಆದರೂ ನಿನ್ನ ಸಂದೇಹವು ಯಥಾರ್ಥವೇ ಆಗಿದೆ. ಅದರ ನಿವಾರಣೆಯಾಗಬೇಕಾದರೆ ನೀನೇ ಅವನೊಡನೆ ಮಾತಾಡಬೇಕು. ಆದರೆ ಗೌರಿ, ನೀನು ಈಗಲೇ ಅವನನ್ನು 'ಅವರು' ಎನ್ನುವುದೇಕೆ? ದೇವರು ನಡೆಸಿ ಮದುವೆಯಾಗಲಿ! ಆ ಮೇಲೆ ಹಳೇಕಾಲದವಳ ಹಾಗೆ ಹೆಸರು ಹೇಳದೆ ಅವರು ಎನ್ನು...." ಎಂದು ಶೀನು ಹೇಳುತ್ತಿದ್ದಾಗ, ಗೋಪಾಲನೇ ಅಲ್ಲಿಗೆ ಬಂದು, "ಏನು ಶೀನು? ಹಳೇ ಕಾಲದ ಅವರು ಯಾರಪ್ಪಾ?" ಎಂದನು

"ಅದು ನೀನೇ ಅಪ್ಪಾ,—" ಎಂದು, ಶೀನು ಓಡಿ ಹೋಗಲಿಕ್ಕಿದ್ದ ಗೌರಿಯನ್ನು ಹಿಡಿದು ನಿಲ್ಲಿಸಿ,— "ಇಕೋ, ಗೌರಿ. ನಿನ್ನ ಸಂದೇಹ

ವನ್ನೆಲ್ಲಾ ಇವನೊಡನೆ ನೇರಾಗಿ ಕೇಳು, ಏನೂ ತಪ್ಪಿಲ್ಲ ನಾನು ಸ್ನಾನ ತೀರಿಸಿಕೊಂಡು ಬರುತ್ತೇನೆ" ಎಂದು ನುಡಿದು ಆ ಕೋಣೆಯ ಬಾಗಿಲೆಳೆದುಕೊಂಡು ಹೊರಟುಹೋದನು

ಕೋಣೆಯ ಬಾಗಿಲು ಅರೆತೆರೆದಂತಿತ್ತು. ಓಡಿ ಹೋಗಬಹುದಾದವರೆ ಗೌರಿಗೆ ಸುಲಭವಾಗಿ ಓಡಿಹೋಗಬಹುದಿತ್ತು ಹೋಗದೆ ತಲೆತಗ್ಗಿಸಿ ನಿಂತಿದ್ದ ಗೌರಿಯನ್ನು ನೋಡಿ ಗೋಪಾಲನು-- "ಏನು ಗೌರಿ ? ಏನು ಸಂದೇಹ ನಿನಗೆ ? '' ಎಂದು ಕೇಳಿದನು.

ಗೌರಿಯ ತುಂಬುಗಲ್ಲಗಳಲ್ಲಿ ಲಜ್ಜೆಯ ಛಾಯೆ ಆವರಿಸಿತು ಒಮ್ಮೆ ಕೆಳಗೂ, ಮತ್ತೊಮ್ಮೆ ಅವನ ಮೋರೆಯನ್ನೂ ನೋಡುತ್ತ ಸುಮ್ಮನಿದ್ದಳು. ಪ್ರಥಮ ಸಂದರ್ಶನವಲ್ಲವೆ ? ಯಾವ ನುಡಿಯನ್ನು ಹೇಗೆ ಮೊದಲು ಹೇಳಬೇಕೆಂದು ಯೋಚಿಸುತ್ತಿರುವಳೇನೋ !

"ಸರಿ. ನಾನೇ ಹೇಳುತ್ತೇನೆ ನನ್ನ ನಿಶ್ಚಯವನ್ನು ! ಕೇಳು ಗೌರಿ. ನಾನು ನಿನ್ನನ್ನು ವಿವಾಹಮಾಡಿಕೊಳ್ಳಬೇಕೆಂದು ಸಂಕಲ್ಪಿಸಿದ್ದೇನೆ. ಆದರೆ ಈಗಲ್ಲ ಬದುಕಿದ್ದರೆ ಇನ್ನೆರಡು ವರ್ಷದ ಮೇಲೆ............"

ತಟ್ಟನೆ ಗೌರಿ ಮುಖವೆತ್ತಿ ಕೇಳಿದಳು— "ಬದುಕಿದ್ದರೆ ಎಂದೇಕೆ ಹೇಳುತ್ತೀರಿ?''

"ಏಕೆಂದರೆ ನಾನೀಗ ತುಳಿದಿರುವ ದಾರಿ ಅಂಥಾದ್ದು, ಇನ್ನೆರಡು ವರ್ಷದೊಳಗೆ ಸ್ವರಾಜ್ಯ ಚಳುವಳಿಯ ಕಟ್ಟಕಡೆಯ ಸಂಗ್ರಾಮವು ನಡೆದೀತು, ನಡೆಯಲೇಬೇಕು. ಅದರಲ್ಲಿ ನಾನೂ ದೀಕ್ಷಾಬದ್ಧನಾಗದ್ದೇನೆ. ಅದರಿಂದಲೇ ಹಾಗಂದೆ. ಆದುವರೆಗೆ ಸೈಸಿಕೊಂಡಿರಲಿಕ್ಕೆ ನಿನಗಾಗದಿದ್ದರೆ ನೀನು ಬೇರೆ ತಕ್ಕ ವರನನ್ನು ವರಿಸಿಕೊಂಡು........"

"ಛೆ! ಹಾಗನ್ನಬೇಡಿ. ನಾನು ದೇವರನ್ನು ಬೇಡುತ್ತಾ ಎರಡು ವರ್ಷಲ್ಲ, ಹತ್ತು ವರುಷ—ಬೇಕಾದರೆ ಅದಕ್ಕಿಂತಲೂ ಹೆಚ್ಚು ವರುಷ ಕೂಡಾ ಇರಬಲ್ಲೆ."

"ಹೌದು ಗೌರಿ. ನಿನ್ನ ಹೃದಯವನ್ನು ನಾನೂ ಅರಿತಿದ್ದೇನೆ. ಶೀನು ನನಗೆ ಎಲ್ಲವನ್ನೂ ಹೇಳಿದ್ದಾನೆ. ನಿನ್ನನ್ನು ನನಗೇ ಧಾರೆ ಎರೆದು ಕೊಡುವುದಾಗಿ ಮಾತು ಕೂಡಾ ಕೊಟ್ಟಿದ್ದಾನೆ. ನಿನಗೇನೋ ಸಂದೇಹವೆಂದೆಯಲ್ಲಾ—ಏನದು ಗೌರಿ?"

"ಮತ್ತೇನಿಲ್ಲ ಇಂದಿನಿಂದ ನಾನು ನಿಮ್ಮ ಇಷ್ಟಕ್ಕೆ ವಿರೋಧವಾಗಿ ನಡೆಯಬಾರದೆಂದು ತೀರ್ಮಾನಿಸಿದ್ದೇನೆ ನಾನು ಮದರಾಸಿಗೆ ಹೋಗಿ ಮಹಿಳಾಭ್ಯುದಯ ಮಂಡಲಿಯ ಕಲಾಶಾಲೆಗೆ ಸೇರಿ ನಾಟ್ಯ ಸಂಗೀತಗಳನ್ನು ಕಲಿಯುವುದು ನಿಮಗಿಷ್ಟವೋ ಹೇಳಿ; ಮುಚ್ಚುಮರೆ ಇಲ್ಲದೆ ಹೇಳಿ.''

ಗೋಪಾಲನು ನಗುತ್ತ— "ಓಹೋ! ಈ ಸಂದೇಹವೊ! ಅಂದರೆ ನಾಟ್ಯ ಸಂಗೀತಗಳಲ್ಲಿ ಕೀರ್ತಿಶಾಲಿಗಳಾಗಿರುವ ಹೆಂಗುಸರು ಕೆಟ್ಟು ಹೋಗುವರೆಂಬ ಪ್ರವಾದ ಉಂಟಲ್ಲವೆ? ಆದ್ದರಿಂದ ಕೇಳುತ್ತೀ ಅಲ್ಲವೆ? ಅಂತಹ ಪ್ರವಾದವನ್ನು ಸಟೆಗೊಳಿಸ ತಕ್ಕಂತಹ ವಿಖ್ಯಾತ ಕಲಾವಿದೆಯನ್ನೆ ವರಿಸಬೇಕೆಂಬುದು ನನ್ನ ಆಶೆಯ ಕನಸು. ಅದು ನನಗೊಂದು ಹೆಮ್ಮೆ! ನೀನು ಅಂತಹಳಾಗಬೇಕು! ನಾಟ್ಯ ಸಂಗೀತಗಳನ್ನು ಸರಳ ದಾರಿಯಲ್ಲಿ ಬೆಳಗಿಸುವಂತಹ ಆದರ್ಶ ನಾರಿಯಾಗಬೇಕು ನೀನು! ಒಂದು ವೇಳೆ ನಾನು ಹೋರಾಟದಲ್ಲಿ ಮಡಿದು ಹೋದರೂ, ನಿನ್ನ ಕಲಾ ವಿಲಾಸಗಳನ್ನು ಪರಲೋಕದಲ್ಲಿದ್ದೇ ನೋಡಿ ಆನಂದ ಪಡುವೆನು! ಸ್ವಾತಂತ್ರ್ಯದ ಹೋರಾಟದಲ್ಲ ದಣಿದ ಪ್ರಜೆಗಳು ನಿನ್ನ ಕಲಾವಿಲಾಸ ನೋಡಿ ಆನಂದಗೊಳ್ಳುವಂತಾಗಬೇಕು ಅಗತ್ಯವಾಗಿ ಮದರಾಸಿಗೆ ಹೋಗಿ ಉತ್ಸಾಹದಿಂದ ಕಲಿ!— ಏನು ಗೌರಿ? ಈಗ ನಿನ್ನ ಸಂದೇಹವು ಹೋಯಿತೆ?"

ಮುಗುಳ್ನಗುತ್ತ ಗೌರಿಯೆಂದಳು:— "ಹೋಯಿತು. ನಿಮ್ಮ ಹರಕೆಯಂತೆಯೇ ನಡೆಯುವೆನು. ದೇವರು ನಿಮ್ಮ ಕೋರಿಕೆಯಂತೆಯೇ ನಡೆಸಲೆಂದು ದಿನಾ ಬೇಡಿಕೊಳ್ಳುವೆನು"

ಗೌರಿಯ ಕಣ್ಣುಗಳಲ್ಲಿ ಭಕ್ತಿ ಬಾಷ್ಪವು ತುಂಬಿತು. ಕೈಗಳು ಜೋಡಿಕೊಂಡುವು—ಆ ಭಗವಂತನ ಕಡೆಗೆ! "ಹಾಗಾದರೆ ಇನ್ನು ನೀವು ನನಗೆ ದರ್ಶನವೀಯುವುದು ಯಾವಾಗ?'' ಎಂದು ಮತ್ತೆ ಕೇಳಿದಳು.

"ಹೇಗೆ ಹೇಳಲಿ? ಈಗಲೇ ನಾನು ತಲೆ ಮರೆಸಿಕೊಂಡಿರುವ ಆಸಾಮಿ. ನಾಳೆಯೇ ಪ್ರವಾಸ ಹೊರಡುತ್ತೇನೆ ಬೊಂಬಾಯಿಯ ಕಡೆಗೆ. ಸಮಯಾನುಕೂಲ ಸರಿ ಬಂದಾಗ, ನೀನು ಎಲ್ಲಿದ್ದರೂ ನಾನು ಬಂದು ನಿನ್ನನ್ನು ಕಾಣುತ್ತೇನೆ."

"ಆಗಾಗ ನನಗೆ ಪತ್ರ ಬರೆಯುವಿರಾ?''

"ನಾನು ನಿನಗೆ ಬರೆದೇನು; ಆದರೆ ನೀನು ನನಗೆ ಬರೆಯಲಾರಿ. ಕಾರಣ ನನಗೆ ಸರಿಯಾದ ವಿಳಾಸವೆಲ್ಲಿದೆ? ಆದರೂ ವಿಳಾಸದಲ್ಲಿ ನನ್ನ ಹೆಸರನ್ನು ಬರೆಯುದೆ, 'ವಾಮನ ಮರಕಾಲ, ಮೋಗೇರಕೇರಿ, ಗೋಗಟ್ಟಿ ಪೋಸ್ಟ್' ಎಂದು ಬರೆದರೆ, ನನ್ನ ನಂಬುಗೆಯುವನಾದ ವಾಮನ ಮರ ಕಾಲನು, ನಾನೆಲ್ಲಿದ್ದರೂ ಅದನ್ನು ನನಗೆ ಕಳುಹಿಸುತ್ತಾನೆ. ನಿಧಾನ ವಾಗಿಯಾದರೂ ನನಗೆ ಸಿಕ್ಕೀತು"

"ಆಗಲಿ"— ಎಂದು ಗೌರಿ, ಆ ವಿಳಾಸವನ್ನು ಕೂಡಲೇ ಬರೆದಿಟ್ಟುಕೊಂಡು, "ನನಗೆ ಬರೆಯುವುದಾದರೆ, ನನ್ನನ್ನು ತಂದೆಯಂತೆ...."

"ಅದೆಲ್ಲ ಯಾಕೆ? ಮದ್ರಾಸಿನ ಮಹಿಳಾಭ್ಯುದಯ ಮಂಡಲಿಯ ಕಲಾಶಾಲೆಗೇ ಬರೆದರಾಯಿತಲ್ಲ?''

''ಸರಿ. ಹಾಗೇ ಬರೆಯಿರಿ.''

'' ಆದರೆ ಅನಾವಶ್ಯಕ ಪತ್ರವ್ಯವಹಾರವು ನಮ್ಮೊಳಗೆ ಬೇಡ ಗೌರಿ."

''ಹಾಗೆಯೇ ಆಗಲಿ ನೀವಿಷ್ಟು ಭರವಸೆ ಕೊಟ್ಟುದರಿಂದ ನನ್ನ ಹೃದಯವು ತುಂಬ ಹಗುರಾಯಿತು!''

''ನನ್ನದು ಕೂಡಾ!"

ಆಗ ಶೀನು ಟವೇಲಿನಿಂದ ಮೈಯನ್ನು ಒರೆಸಿಕೊಳ್ಳುತ್ತಾ ಅಲ್ಲಿಗೆ ಬಂದು— ''ಏನು ಗೋಪಾಲ್! ನನ್ನ ತಂಗಿಯ ಸಂದೇಹವನ್ನೆಲ್ಲ ಹತ್ತಿಯಂತೆ ಹಾರಿಸಿಬಿಟ್ಟೆಯಾ?—'' ಎಂದು ಕೇಳಿದನು.

'' ಓಹೋ! ಬೇಕಾದರೆ ಗೌರಿಯನ್ನೆ ಕೇಳು'' ಎಂದನು ಗೋಪಾಲ।

''ತೀರಿತೇ ಗೌರಿ?" ಎಂದು ಕೇಳಿದ ಶೀನುವನ್ನು ಗೌರಿ ನಗುತ್ತ ಭಾವ ಪೂರ್ಣ ಲೋಚನದಿಂದ, ನೋಡಿದಳು.

''ಶೀನು! ಈಗೊಂದು ಕಷ್ಟ ಬಂತು ನನಗೆ—'' ಎಂದು ಗೋಪಾಲನು ಹೇಳತೊಡಗುತ್ತಲೇ ಶೀನು ಕಣ್ಣರಳಿಸಿ ''ಏನಪ್ಪಾ!'' ಎಂದನು. ಗೌರಿಯೂ ಬೆಚ್ಚಿನಿಂತಳು.

"ಮತ್ತೇನಿಲ್ಲ ಗಾಬರಿಬೇಡ ಇದು ವರೆಗೆ ದೇಶಕ್ಕಾಗಿ ನಾನು ಜೀವದ ಹಂಗುದೊರೆದೇ ನಿಂತಿದ್ದೆ. ಈಗ ಹಂಗು ಇಟ್ಟುಕೊಂಡು ಎಚ್ಚರಿಕೆಯಿಂದ ಇರಬೇಕು ಅನಿಸುತ್ತದೆ!" ಎಂದು ಗೌರಿಯನ್ನು ನೋಡಿ ಗೋಪಾಲನು ನಕ್ಕನು.

"ಅಂತಹ ಪ್ರಸಂಗವೇ ಬರುವುದಿಲ್ಲ ಗೋಪಾಲ್. ಯಾಕೆಂದರೆ ನಮ್ಮದು ಅಹಿಂಸೆಯ ಹೋರಾಟವಲ್ಲವೆ? ಏನೂ ಭಯವಿಲ್ಲ." ಎಂದನು ಶೀನು.

ಗೌರಿ "ಕಾಫಿಯನ್ನು ತರುತ್ತೇನೆ" ಎಂದಂದು ಒಳಗೆ ಹೋದಳು.

ಒಂದು ನೋಡಿದರೆ ಗೌರಿಯ ಹೃದಯವೀಗ ಭಾರವಾಗಬೇಕಿತ್ತು. ಏಕೆಂದರೆ, ನಿನ್ನೆಯವರೆಗೆ ಅವಳ ಹೃದಯದೊಳಗೆ ಯಾವ ಕಳ್ಳನೂ ಹೊಕ್ಕಿರದೆ ನೆಮ್ಮದಿಯಾಗಿತ್ತು ನಿನ್ನೆಯಿಂದ ಅವಳ ಹೃತ್ಪೀಠದಲ್ಲಿ ಗೋಪಾಲನು ಅಧಿಷ್ಠನಾದ ಮೇಲೆ, ಹೃದಯವು ಭಾರವಾಗಬೇಕಲ್ಲವೆ? ಆದರೆ ಆ ಹೊಸ ಭಾರವು ಭಾರವೇ ಅಲ್ಲ! ಹೂವಿನಂತೆ ಹಗುರಾದ ಆನಂದ ಭಾವವಾಗಿತ್ತು. ಆದುದರಿಂದ ಹಗುರಾಗಿತ್ತು.

ಕಾಫಿ ಕುಡಿದನಂತರ ಗೋಪಾಲನು ಶ್ಯಾಮಸುಂದರರಿಂದ ಅಪ್ಪಣೆ ಪಡೆದು ಹೊರಟನು. ಹೊರಡುವಾಗ ಗೋಪಾಲನನ್ನೂ ಸಂಗಡ ಕರೆದೊಯ್ದನು.

"ಶೀನೂ! ಅಚಲನಾಗಿರುವಿಯಷ್ಟೆ?"— ಹೋಗುತ್ತಾ ಗೋಪಾಲನು ಕೇಳಿದನು.

"ನನ್ನ ಮೇಲೆ ನಿನಗೇನೂ ಸಂದೇಹ ಬೇಡ ಗೋಪಾಲ."

ಗೋಪಾಲನು ಅವನನ್ನು ಪೆಂಟ್ಲೆಂಡ್ ಪೇಟೆಯಲ್ಲಿರುವ ಒಂದು ದೊಡ್ಡ ಮಾಳಿಗೆಯ ಮನೆಗೆ ಕರೆದೊಯ್ದನು. ಮನೆಯ ಮುಂದೆ ವಿಶಾಲವಾದ ಕಂಪಾವುಂಡ್. ಗೇಟಿನಲ್ಲಿ "ಬಿ ಗಣೇಶ ಕಾಮತ್, ಬಿ ಎ. ಎಲ್‌ಎಲ್. ಬಿ." ಎಂದಿತ್ತು.

ವಕೀಲ ಗಣೇಶ ಕಾಮತರು ಗೋಪಾಲನನ್ನು ಪರಮಾದರದಿಂದ ಬರಮಾಡಿಕೊಂಡರು. ಗೋಪಾಲನು ಅವರಿಗೆ ಚಿಟುಕಾಗಿ ಶೀನುವಿನ ಪರಿಚಯ ಮಾಡಿಸಿ,— "ಶೀನು! ಇವರು ವಕೀಲ ಗಣೇಶ ಕಾಮತರು. ಮಹಾತ್ಮರ ಅಡಿಯಮೇಲೆ ಅಡಿ ಇಡುವಂತಹ ಕಟುನಿಷ್ಠಾವಂತರು.

ಇವರೇ ಈ ಜಿಲ್ಲೆಯ ಕೇಂದ್ರ ಕಾಂಗ್ರೆಸ್ ಕಾರ್ಯದರ್ಶಿಗಳು. ಇದು ಇವರ ಮನೆ. ಇಲ್ಲಿ ಇವರ ರಹಸ್ಯ ಕಾರ್ಯಾಲಯವಿದೆ ವಯರ್ ಲೆಸ್ಸಿನ ಸಹಾಯದಿಂದ, ಇವರು ಎಲ್ಲೆಲ್ಲೋ ನಡೆಯುವ ಸಂಗತಿಗಳನ್ನು ಕೂಡ ಕೂಡಲೇ ತಿಳಿದುಕೊಳ್ಳುತ್ತಾರೆ! ಈಗ ಕಾಂಗ್ರೆಸ್ಸಿಗರು ದ್ವಿಮುಖ ವಾಗಿ ಕೆಲಸ ಮಾಡಬೇಕಾಗಿದೆಯಷ್ಟೆ? ಒಂದು ಬಹಿರಂಗ ಭಾಷಣ, ಲೇಖನ ಇತ್ಯಾದಿ ಇನ್ನೊಂದು ಊರಿನೊಳಗೆ ರಹಸ್ಯವಾಗಿ ತಿರುಗಾಡಿ, ಈ ಹೋರಾಟದ ಕಾರ್ಯಕ್ರಮಗಳ ಪ್ರಚಾರ ಹಾಗು ದೇಶೀಯದಳ ವಿಸ್ತರಣೆ ಇದಕ್ಕೆ ಬೇಕಾದ ಸಕಲ ಸೌಕರಣೆಗಳನ್ನೂ ಇವರೇ ನಿನಗೆ ಕೊಡುತ್ತಾರೆ—'' ಎಂದಂದು ಗಣೇಶ ಕಾಮತರನ್ನು ಕುರಿತು— ''ಇವ ರನ್ನು ಪ್ರಮಾಣ ಪತ್ರದಲ್ಲಿ ಸಹಿ ಮಾಡಿಸಿ, ಕಾರ್ಯಕ್ರಮಗಳ ಪಟ್ಟಿ ಪುಸ್ತಕಗಳನ್ನು ಕೊಟ್ಟು ಕಳುಹಿಸಿರಿ. ಇವರು ಮಡಿಕೇರಿ, ಮೈಸೂರು. ಹೊಸಪೇಟೆ, ಹಂಪೆ, ಬಳ್ಳಾರಿಗಳನ್ನು ಬಳಸಿಕೊಂಡು, ಮದರಾಸಿನವರೆಗೆ ಹೋಗುತ್ತಾರೆ ನಾನು ಉಡುಪಿ, ಕುಂದಾಪುರಗಳ ಮಾರ್ಗವಾಗಿ ಬೊಂಬಾಯಿಗೆ ಹೋಗುತ್ತೇನೆ ಆಗೋಸ್ತ್ ಮೊದಲನೇ ವಾರದ ಮಹಾಸಭೆಗೆ ಸರಿಯಾಗಿ ನಾನು ಬೊಂಬಾಯಿಗೆ ಹೋಗಿ ಸೇರುತ್ತೇನೆ. ಅಷ್ಟರೊಳಗೆ ಶೀನು, ಸೀನು ಮದರಾಸಿನಿಂದ ಗುಂತಕಲ್ಲು, ಹುಬ್ಬಳ್ಳಿ, ಪೂನಾ ಮಾರ್ಗವಾಗಿ ಹೊರಟು ಬೊಂಬಾಯಿ ಬಂದು ನನ್ನನ್ನು ಸೇರು. ಅಲ್ಲಿ ಮಹಾತ್ಮರ ಸಂದರ್ಶನವು ನಿನಗಾದೀತು. ದೇವರು ನಡೆಸಿದರೆ ಇನ್ನು ನನ್ನ-ನಿನ್ನ ಭೇಟಿ ಬೊಂಬಾಯಿಯಲ್ಲಿಯೇ!" ಎಂದು ಮುಗಿಸಿ ದನು.

ಗಣೇಶ ಕಾಮತರು ಅವರಿಬ್ಬರನ್ನೂ ಒಂದು ರಹಸ್ಯವಾದ ಕೋಣೆ ಯೊಳಗೆ ಕರೆದೊಯ್ದರು ಸುಮಾರು ಒಂದು ಗಂಟೆಯಮೇಲೆ ಅವ ರಿಬ್ಬರೂ ಹೊರಗೆ ಬಂದಾಗ, ಶೀನೂ-ಗೋಪಾಲರ ಕೈಗಳಲ್ಲಿ ಒಂದೊಂದು ಬ್ಯಾಗು ನೇತಾಡುತ್ತಿದ್ದುವು ಕಾಮತರನ್ನು ಬೀಳ್ಕೊಟ್ಟು ಹೊರಡು ವಾಗ ಕಾಮತರೆಂದರು— ''ಶ್ರೀನಿವಾಸರಾಯರೆ, ನಿಮ್ಮಾಗಮನದ ಸಮಾಚಾರವನ್ನು ನಾನು ಮುಂದಾಗಿ ಮಡಿಕೇರಿಯ ಕಾರ್ಯಾಲಯಕ್ಕೆ ತಿಳಿಸುತ್ತೇನೆ. ಅಲ್ಲಿ ನೀವು ಎರಡು ಮೂರು ದಿನ ತಂಗಿರುವಂತೆ ಏರ್ಪಾಡಾಗಲಿ'' ಎಂದರು.

"ಒಳ್ಳೆಯದು. ನಾನು ನಾಡಿದು ಶನಿವಾರ ಬೆಳಿಗ್ಗೆ ಮಂಗಳೂರಿನಿಂದ ಹೊರಡುವೆನು. ಹೊರಡುವ ಮುನ್ನ ಇನ್ನೊಮ್ಮೆ ತಮ್ಮನ್ನು ಕಾಣುವೆನು." ಎಂದನು.

ಇಬ್ಬರೂ ಅಲ್ಲಿಂದ ಹೊರಟಾಗ, ಗೋಪಾಲ ಬೇರೆ ಶೀನು ಬೇರೆ ಅಗಲಿಕೊಂಡರು ಅಗಲುವಾಗ ಆ ಗೆಳೆಯದ್ವಯರ ಕಣ್ಣುಗಳಲ್ಲಿ ಸ್ನೇಹಭಾವವು ತುಂಬಿ ತುಳುಕಿತು.

ಆ ಮಧ್ಯಾಹ್ನ ಶೀನು ಶ್ಯಾಮಸುಂದರರ ಮನೆಯಲ್ಲಿಯೇ ಊಟ ಮುಗಿಸಿಕೊಂಡ ಮೇಲೆ, ಗೌರಿಯನ್ನು ಕರೆದುಕೊಂಡು ಕಿರುಗಟ್ಟೆ ಗ್ರಾಮಕ್ಕೆ ಬಂದನು.

ಗೌರಿ ಮದ್ರಾಸಿಗೆ ಹೊರಡುವ ಮುನ್ನ ಕೃಷ್ಣಣ್ಣ, ದೊಡ್ಡಮ್ಮ ಮೊದಲಾದವರೊಡನೆ. ಹೇಳಿಕೊಳ್ಳಬೇಕೆಂದೇ ಬಂದಿದ್ದಳು. ಯಾರಿಗೂ ಅವಳ ಆ ಪ್ರಯಾಣವು ಇಷ್ಟವಿಲ್ಲವೆಂದು ಚೆನ್ನಾಗಿ ಗೊತ್ತಿದ್ದರೂ ಹೇಳಿಕೊಳ್ಳದೆ ಹೋಗುವುದು ಸರಿಯಲ್ಲವಷ್ಟೆ?

ತಾನು ಮದರಾಸಿಗೆ ಹೋಗುವೆನೆಂಬ ಹೆಮ್ಮೆಯ ವಿಷಯವನ್ನು ಊರಲ್ಲಿರುವ ಅವಳ ಗೆಳತಿಯರೊಡನೆ ಹೇಳಿಕೊಂಡು ಹೆಚ್ಚಳಪಡುವ ಇಷ್ಟವೇ ಅವಳಿಗಿಲ್ಲ ಈ ಸುದ್ದಿ ಊರಲ್ಲೆಲ್ಲಾ ಹರಡಿದರೆ ಎಲ್ಲರೂ ಗೇಲಿಮಾಡಿ ನಗುವರೆಂದೂ ಅವಳಿಗೆ ಗೊತ್ತು

ಮನೆಗೆ ಬಂದ ಮೇಲೆ ಸಮಯ ನೋಡಿ. ಶೀನು ತನ್ನ ಹಾಗು ಗೌರಿಯ ಪ್ರಯಾಣ ಸಂಗತಿಯನ್ನು ಉಪಾಯವಾಗಿ ಕೃಷ್ಣನಿಗೆ ತಿಳಿಯಪಡಿಸಿದನು ಯೋಚಿಸಿದಂತೆಯೇ ಇತ್ತು ಅವನ ಉತ್ತರ. ಶೀನು ಸಾಧ್ಯವಾದಷ್ಟು ಸಮಾಧಾನ ಹೇಳಿದ:— "ಕೃಷ್ಣ ! ಮನೆಯಲ್ಲಿಯೇ ಬರಿದೇ ಕುಳಿತು ಕುಳಿತು ಬಹಳ ಬೇಸರ ಬಂತು ಅದಕ್ಕೆಯೇ ಪ್ರತಿಜ್ಞೆ ಮಾಡಿಕೊಂಡದ್ದು ಈ ಸ್ವದೇಶೀ ಪ್ರಚಾರ ಕಾರ್ಯ. ಗೌರಿಯೂ ಇನ್ನೂ ಕಲಿಯಬೇಕೆಂದು ಉತ್ಸಾಹಿಯಾಗಿದ್ದಾಳೆ ಅವಳನ್ನು ಮದರಾಸಿನ, ಒಳ್ಳೆಯ ನಡತೆಯ ಕಲೆಗಳಿಗೆ ಪ್ರಸಿದ್ಧವಾದ ಮಹಿಳಾಭ್ಯುದಯ ಮಂಡಲಿಗೆ ಸೇರಿಸಿ ಬಂದುಬಿಡುತ್ತೇನೆ' ಅಲ್ಲಿಯೇ ನನಗೂ ಏನಾದರೂ ಕೆಲಸ ಸಿಕ್ಕಿದರೆ ನಾನೂ ಬರಲು ತಡವಾದೀತು ——" ಎಂದು ಶೀನು

ಹೇಳುವಾಗ, ಕೃಷ್ಣನು, "ಎಲ್ಲಾ ಬಲ್ಲ ನೀನೇ ಹೀಗೆಂದರೆ ನಾನೇನು ಹೇಳಲಿ ಅಣ್ಣ? ಆದರೂ ನಾನು ಖಂಡಿತವಾಗಿಯೂ ಈ ನಿನ್ನ ಕೆಲಸವನ್ನು ಒಪ್ಪುವುದಿಲ್ಲ. ನಾಟ್ಯ ಸಂಗೀತಗಳೆಂದರೆ ಜನರನ್ನು ಮೋಹಿಸಿ ಕೆಡಿಸಿ, ತನ್ನನ್ನು ಕೆಡಿಸಿಕೊಳ್ಳುವಂಥಾ ವಿದ್ಯೆ. ಅದೆಲ್ಲಾ ಕುಲೀನ ಸ್ತ್ರೀಯರಿಗೆ ಹೇಳಿಸಿದ್ದೇ ಅಲ್ಲ!........"

ಶೀನು ಕೂಡಲೇ— "ಇದು ಕೀಳುಮನಸ್ಸಿನ ಅಭಿಪ್ರಾಯ ಕೃಷ್ಣ. ಸುಸಂಸ್ಕೃತರು ಹಾಗೆಲ್ಲ ಭಾವಿಸುವುದೇ ಇಲ್ಲ. ನಾಟ್ಯ-ಸಂಗೀತ ಮೊದಲಾದ ದಿವ್ಯ ಕಲೆಗಳ ಶಾಸ್ತ್ರಗಳನ್ನು ಬರೆದವರು ಮಹಾನ್ ಮಹಾನ್ ಋಷಿಗಳು. ಆದರೆ ಕಲೆ, ದುಡ್ಡುಮಾತ್ರವುಳ್ಳವರಾದ ಅಸಂಸ್ಕೃತರ ಕೈಗೆ ಸೇರಿ, ಕಲೆಯಲ್ಲಿ ಅಶ್ಲೀಲತೆಗಳು ತುಂಬಾ ಬೆರೆತು ಪ್ರಚಾರವಾಗಿರುವುದರಿಂದಲೇ ನಿನ್ನಂಥವರ ಈ ಭಯಕ್ಕೆ ಕಾರಣ. ಆದರೆ ನಿಜವಾದ ಸಾತ್ವಿಕ ಕಲಾವಿದೆಯರೂ ಕೆಲವರಿದ್ದಾರೆ. ಅಂತಹರನ್ನೇ ತಯಾರಿಸುವ ಸಂಸ್ಥೆಯೇ 'ಮಹಿಳಾಭ್ಯುದಯ ಮಂಡಲಿ' ಎಂದು ವಾದಿಸಿದನು.

"ಅಷ್ಟು ದೂರ ಯಾಕೆ ಹೋಗಬೇಕು? ಇಲ್ಲಿಯೇ ಕಲಿತಷ್ಟು ಸಾಲದೆ? ಸುಮ್ಮನೆ ಪ್ರಪಂಚವನ್ನೇ ಹಾರಬೇಕೆಂಬ ಸಾಹಸ ಹೆಂಗುಸರಿಗೇಕೆ? ಅಲ್ಲದೆ ಮದರಾಸಿನಲ್ಲೀಗ ಯುದ್ಧದ ಗಲಾಟೆ, ಮಿಲಿಟರೀಮಯ. ಹೆಂಗುಸರು ಸರಿಯಾಗಿ ಹೋಗಿ ಬಂದಾರೆಂಬ ನಂಬುಗೆಯೇ ಇಲ್ಲ........"

"ಅದೆಲ್ಲ ಸುಮ್ಮನೆ, ವಿಪರೀತ ವರ್ತಮಾನಗಳು. ಅಲ್ಲಿ ನಮ್ಮೂರಿನವರೂ ತುಂಬಾ ಮಂದಿ ಇದ್ದಾರೆ. ಶ್ಯಾಮಸುಂದರರ ಮಗಳು ವಸಂತಿಯೂ ಗೌರಿಯ ಜತೆಗಿದ್ದಾಳೆ. ಅವರ ಭಾವ ಗಜವದನರಾಯರಲ್ಲಿಯೇ ಇವರಿರುವ ಏರ್ಪಾಡು. ಇಷ್ಟು ಅನುಕೂಲವೂ, ಗೌರಿಗೆ ಕಲಿಯಬೇಕೆಂಬ ಬಲುತ್ಸಾಹವೂ ಇರುವಾಗ, ಇಲ್ಲ-ಸಲ್ಲದ ಭಯ ಸಂದೇಹಗಳಿಂದ ಉದಾಸೀನ ಮಾಡಿ ವಿದ್ಯಾರ್ಜನೆಗೆ ಕಲ್ಲು ಹಾಕುವುದು ನ್ಯಾಯವೆ? ಮಹಿಳಾಭ್ಯುದಯ ಮಂಡಲಿಯಲ್ಲಿ ಸೇರಿದವರು, ಅಲ್ಲಿಂದ ಬರುವಾಗ ಉತ್ತಮ ಗೃಹಿಣಿಗೆ ಬೇಕಾದ ಎಲ್ಲಾ ಶಿಕ್ಷಣದೊಂದಿಗೆ ಹೊರಗೆ ಬರುತ್ತಾರೆ. ಅಖಿಲ ಭಾರತದಲ್ಲಿಯೇ ಮೊದಲಿಗಳೆಂದು ವಿದೇಶೀಯರಿಂದಲೂ ಹೆಸರುಗಳಿಸಿದ ಕಲಾನ್ವಿತೆಯರಾದ ಶ್ರೀಮತಿ ವಿಮಲಾ ಶ್ಯಾಮಲಾ ಮೊದಲಾದವರು ಆದರ್ಶ ಗೃಹಿಣಿಯರಾಗಿಲ್ಲವೆ? ಹಾಗೆಯೇ

ಚಿತ್ರಾ, ಶೈವಲಾ, ಕನಕಾಂಗಿ ಮೊದಲಾದ ಕಲಾವಿದೆಯರೂ ಹೇಗೆ ಕಲೆಯ ಹಿರಿಮೆಯನ್ನೂ ಗೌರವವನ್ನೂ ಸರಳ ದಾರಿಯಲ್ಲಿದ್ದು ಮೆರೆಸುತ್ತಿದ್ದಾರೆ! ನಮ್ಮ ಗೌರಿ ಅಂತಹಳಾಗುವಂತೆ ಹರಸಿ ಕಳುಹಿಸು ಕೃಷ್ಣ ! ನಿರ್ಮಲ ಮನಸ್ಸಿನಿಂದ ಒಪ್ಪಿಬಿಡು. ಅನುಮತಿ ಕೊಡು................" ಎಂದು ಶೀನು ಬಹಳವಾಗಿ ಹೇಳಿದ ಮೇಲೆ, ಕೃಷ್ಣನು ನಿವೃತ್ತಿಯಿಲ್ಲದೆ ಒಂದು ರೀತಿಯಾದ ಅಪ್ರಸನ್ನತೆಯಿಂದಲೇ, "ನನಗೇನಣ್ಣ? ಎಲ್ಲದಕ್ಕೂ ನೀನಿದ್ದೀಯಲ್ಲಾ! ಇದುವರೆಗೆ ಅವಳ ವಿಷಯವೆಲ್ಲಾ ನಿನ್ನಿಷ್ಟದಂತೆಯೇ ನಡೆಯಿತಲ್ಲವೆ ? ನಂದೇನು ? ಮುಂದೆಯೂ ಹಾಗೆಯೇ ನಡೆಯಲಿ. ಒಳ್ಳೆಯದಾದರೆ ನನಗೂ ಸಂತೋಷವೆ " ಎಂದು ಚೊಗರಾಗಿಯೇ ಹೇಳಿದನು. ಆಗ ಅವನು ಮನಸ್ಸಿನಲ್ಲಿ " ಹುಂ. ಕಡೆಗೆ ನಾನು ಯೋಚಿಸಿದಂತೆಯೇ ಆಯಿತು ಆ ಸುಂದರಿ ಮಹಿಳಾಭ್ಯುದಯ ಮಂಡಲಿಯಲ್ಲಿಯೇ ಇದ್ದಾಳೆ. ಈ ಅಣ್ಣನೂ ಹೋಗಿ ಅವಳನ್ನೇ ಸೇರಿಕೊಳ್ಳುತ್ತಾನೆ ಗೌರಿಯೂ ದೊಡ್ಡ ಸಿನಿಮಾ ರಾಣಿಯಾದಳು." ಎಂದು ನೆನೆಯುತ್ತಿದ್ದನು.

ಶೀನು ಹೊರಡುವ ಸಿದ್ಧತೆಗೆ ತೊಡಗಿದನು. ಮೊದಲು ಮಡಿಕೇರಿಯಲ್ಲಿ ಅವನದೊಂದು ಭಾಷಣವಾಗಬೇಕಾಗಿತ್ತು. ಸಾರ್ವಜನಿಕ ಸಭೆಯಲ್ಲಿ ಅವನು ಮಾಡಲಿದ್ದ ಭಾಷಣ ಅದೇ ಮೊದಲು. ಅದಕ್ಕೆ ತಕ್ಕ ಯೋಚನೆ ಮಾಡಿ ಆ ಭಾಷಣವನ್ನು ಒಂದು ಲೇಖನವಾಗಿ ಬರೆದು ತಯಾರು ಮಾಡಿಕೊಂಡನು "ಅಹಿಂಸೆಯ ಹೋರಾಟದ ಮಹತ್ವ" ಎಂಬುದು ಅದರ ತಲೆಬರಹ

ನಾಳೆಯೇ ಅವನು ಮಂಗಳೂರಿನಿಂದ ಹೊರಡಬೇಕಾಗಿತ್ತು. ಗೌರೀ ವಸಂತಿಯರು ಎರಡು ಮೂರು ದಿನ ತಾಳಿ, ಕಾರಿನಲ್ಲಿ ಹೊರಟು, ಮಡಿಕೇರಿಯಲ್ಲಿ ಶೀನುವನ್ನು ಕೂಡುವುದಾಗಿ ಮೊದಲೇ ನಿರ್ಣಯವಾಗಿತ್ತು. ಆ ಪ್ರಕಾರ ಶೀನು ಆ ದಿನ ಸಂಜೆಯೇ ಮನೆಯಿಂದ ಹೊರಟನು ಸದ್ಯಕ್ಕೆ "ಭಾರತೀ ಭಾಂಡಾರ"ದ ಮೇಲು ವಿಚಾರಗಳನ್ನು ಕೃಷ್ಣನಿಗೆ ಬಿಟ್ಟು ಕೊಟ್ಟಿದ್ದನು. ಗೌರಿ ಇನ್ನೆರಡು ದಿನ ಮನೆಯಲ್ಲಿದ್ದು ದೊಡ್ಡಮ್ಮನ ಔತಣವನ್ನು ತೀರಿಸಿಕೊಂಡು ಮಂಗಳೂರಿಗೆ ಹೊರಡುವವಳಾಗಿದ್ದಳು.

## ೧೮

"ದೇಶ ಭಾಷಾ ಸೇವಕ 'ಕನ್ನಡ ಗೆಳೆಯ' ಶ್ರೀ ಶ್ರೀನಿವಾಸ ರಾಯರು ಮಡಿಕೇರಿಗೆ ಬರುತ್ತಾರೆ. ಇಲ್ಲಿ ಮೂರು ದಿನ ಇರುತ್ತಾರೆ. ಒಂದು ಸಾರ್ವಜನಿಕ ಸಭೆಯನ್ನು ಕೂಡಿಸಿ ಜನರಿಗೆ ಅವರ ಪರಿಚಯ ಮಾಡಿಸಿ ಕೊಡಬೇಕು" ಎಂಬ ಸೂಚನೆ ಮಡಿಕೇರಿಯ ಕಾಂಗ್ರೆಸ್ಸು ಕಾರ್ಯಾಲಯಕ್ಕೆ ಮೊದಲೇ ತಲುಪಿತ್ತು. ಮಡಿಕೇರಿಯ ಶಾಲೆಯ ಮೈದಾನದಲ್ಲಿ ?—?—೪೨ ರಂದು ಮಹಾಸಭೆ ನೆರೆಯುವುದೆಂದೂ, .................. ಶ್ರೀ. ಶ್ರೀನಿವಾಸರಾಯರು "ಅಹಿಂಸೆಯ ಹೋರಾಟದ ಮಹತ್ವ" ಎಂಬ ವಿಷಯದ ಮೇಲೆ ಭಾಷಣ ಮಾಡುವರೆಂದೂ ಕರಪತ್ರ ಗಳು ಊರೊಳಗೆಲ್ಲ ಹಂಚಲ್ಪಟ್ಟವು

ಬೆಳಗ್ಗೆ ಮಂಗಳೂರಿನಲ್ಲಿ ಬಸ್ಸು ಹತ್ತಿದ ಶೀನು ಅಪರಾಹ್ನ ಮೂರು ಗಂಟೆಗೆ ಮಡಿಕೇರಿಯಲ್ಲಿಳಿದನು. ಆಗ ಅವನ ಜತೆಯಲ್ಲಿ ಒಬ್ಬ 'ಸ್ವಯಂಸೇವಕ'ನು ಮಂಗಳೂರಿನಿಂದಲೇ ಹೊರಟು ಬಂದಿದ್ದನು ಶೀನುವಿನ ಕೈಯಲ್ಲಿಯೂ ಅವನ ಕೈಯಲ್ಲಿಯೂ ಒಂದೊಂದು ಬ್ಯಾಗು ಮಾತ್ರವೇ ಇದ್ದವು.

ಅಲ್ಲಿಯ ನಾಯಕರು ಬಸ್ ಸ್ಟ್ಯಾಂಡಿಗೇ ಬಂದು ಶೀನುವಿಗೆ ಸ್ವಾಗತವಿತ್ತರು. ನಮಸ್ಕಾರ ಪೂರ್ವಕವಾಗಿ ಅವರಿಬ್ಬರ ಭೇಟಿಯಾಗು ವಾಗ ಜನರೆಲ್ಲ ಕೌತುಕದಿಂದ ನೋಡಿದರು. ಅದುವರೆಗೆ ಶೀನುವನ್ನು ಎಲ್ಲರ ಹಾಗೆಂದೇ ತಿಳಿದವರಿಗೆ, ಆ ಊರ ಮುಖಂಡರಾದ ಕಾಂಗ್ರೆಸ್ ನಾಯಕರೇ ಇದಿರುಗೊಳ್ಳ ಬಂದುದು ನೋಡಿ, ಶೀನು ಯಾರೋ ಒಬ್ಬ ದೊಡ್ಡ ಮನುಷ್ಯನಾಗಿರಬೇಕೆಂದು ತೋರಿತು. ಅದಕ್ಕೆ ತಕ್ಕ ಹಾಗೆಯೇ ಶೀನು ಗೌರವನೀಯವಾದ ಖಾದೀ ಪಂಚೆ, ಖಾದೀ ಜಿಬ್ಬಾ, ಖಾದೀ ಟೋಪಿಯಿಂದ ಶುಭ್ರ ತೇಜಸ್ಸಿನಿಂದ ಒಪ್ಪುತ್ತಿದ್ದನು. ಆಗ ಯಾರೋ ಒಬ್ಬನು, ಯಾರಿಗೋ ಹೇಳಿದ,—"ಇವರೇ ಆ ದೇಶಭಾಷಾ ಸೇವಕರು! ಕನ್ನಡ ಗೆಳೆಯರು! ಶ್ರೀನಿವಾಸರಾಯರು!" ಹೀಗೆ ಸುದ್ದಿ ಒಬ್ಬರಿಂದೊ ಬ್ಬರಿಗೆ ಹರಡಿತು.

ಮೊದಲೇ ಶೀನು "ಕನ್ನಡ ಗೆಳೆಯ"ನೆಂದು ಪ್ರಸಿದ್ಧನಾಗಿದ್ದನು. ಅವನೇ ಈಗ ದೇಶ ಸೇವಕನಾಗಿ ಬಂದಿದ್ದಾನೆ. ಅವನನ್ನು ನೋಡ ಬೇಕು, ಅವನ ಭಾಷಣವನ್ನು ಕೇಳಬೇಕು, ಎಂದು ಜನರಿಗೆಲ್ಲ ಕುತೂಹಲ ಹುಟ್ಟುವುದು ಸ್ವಾಭಾವಿಕವೇ. ಆದುದರಿಂದ ಅವನ ಭಾಷಣವನ್ನು ಕೇಳಲು ಮೈದಾನದಲ್ಲಿ ಸಾವಿರಾರು ಜನರು ನೆರೆದುಬಿಟ್ಟರು.

ಶೀನು ಅದುವರೆಗೆ ಎಲ್ಲಿಯೂ ಭಾಷಣ ಮಾಡಿದವನಲ್ಲದಿದ್ದರೂ, ದೇಶಮಾತೆಯ ಮೇಲೆ ತುಂಬಿಬಿಟ್ಟಿರುವ ಭಕ್ತಿಯಿಂದ, ತನ್ನಿಂದ ಭಾಷಣ ಮಾಡಲಾದೀತೆಂಬ ಧೈರ್ಯವೂ ಆತ್ಮವಿಶ್ವಾಸವೂ ಅವನಿಗಿತ್ತು. ಆದುದರಿಂದ ಅವನು ಕೊಂಚವೂ ಅಳುಕದೆ ದೃಢವಾಗಿ ನಿಂತುಬಿಟ್ಟಿದ್ದನು. ಮಹಾಜನ ಸಮುದ್ರವನ್ನು ಕಂಡು 'ಸಭಾ ಕಂಪನದ' ಗಾಳಿ ಕೂಡ ಅವನ ಮೈಯನ್ನು ಮುಟ್ಟಲಿಲ್ಲ. ಅವನು ಕಾಂಗ್ರೆಸ್ ನಾಯಕರೊಂದಿಗೆ ಬಂದು ವೇದಿಕೆಯನ್ನೇರಿ ಕುರ್ಚಿಯಲ್ಲಿ ಕುಳಿತಿದ್ದನು. ನಾಯಕರೇ ಅಧ್ಯಕ್ಷರಾಗಿದ್ದರು.

ಮೊದಲು ಅಧ್ಯಕ್ಷರು ಶೀನುವಿನ ಪರಿಚಯವನ್ನು ಸಭಿಕರಿಗೆ ಮಾಡಿಸಿದರು. "................ಇವರು 'ಕನ್ನಡ ಗೆಳೆಯನೆಂ'ಬ ಗುಪ್ತ ನಾಮದಿಂದ ಸಾಹಿತ್ಯದಲ್ಲಿ ಅಂತರ್ಯಾಮಿಯಾಗಿದ್ದು, ಇದೀಗ ತಾನೇ ನಿಮ್ಮೆದಿರಿಗೆ ಬಯಲಿಗೆ ಬಂದಿದ್ದಾರೆ. ಇವರು ಭಾಷಾ ಸೇವೆಯನ್ನು ತನ್ನಂ ತಾನೇ ಮಾಡುತ್ತ, ಈಗ ದೇಶಮಾತೆಯ ಕೈಂಕರ್ಯವನ್ನೂ ಕೈಕೊಂಡು ಹೊರಟಿದ್ದಾರೆ. ಇವರೀಗ 'ಅಹಿಂಸೆಯ ಹೋರಾಟದ ಮಹತ್ವ' ಎಂಬ ವಿಷಯದ ಮೇಲೆ ಭಾಷಣ ಮಾಡುತ್ತಾರೆ. ಅಹಿಂಸೆಯ ವಿಷಯವಾಗಿ ಎಷ್ಟಿದ್ದರೂ ಕೇಳಿಕೊಳ್ಳಬೇಕಾದುದು ಈಗ ನಮ್ಮ ಕರ್ತವ್ಯವಾಗಿದೆ..................." ಎಂದು ಸಣ್ಣ ಪೂರ್ವಭಾಷಣ ಮಾಡಿ ವಿರಮಿಸಿದರು.

ಶೀನು ಎದ್ದನು. ಯಾರೋ ಇಬ್ಬರು ಎದ್ದು ಬಂದು, ಎರಡು ಮಂಗಳೂರ ಮಲ್ಲಿಗೆಯ ಮಾಲೆಗಳನ್ನು ವೇದಿಕೆಯ ಮೇಲೆ ತಂದು, ಒಂದನ್ನು ಅಧ್ಯಕ್ಷರ ಕೊರಳಿಗೂ, ಇನ್ನೊಂದನ್ನು ಶೀನುವಿನ ಕೊರಳಿಗೂ ಹಾಕಿದರು. ಸಭೆ ಪೂರಾ ಕೈಚಪ್ಪರಿಗುಟ್ಟಿತು.

ಶೀನು ಕೈಯೆತ್ತಿ ಅವರನ್ನೆಲ್ಲ ಸಮಾಧಾನ ಪಡಿಸುತ್ತ— "ವಂದೇ ಮಾತರಂ" ಎಂದು ಗಂಭೀರ ಧ್ವನಿಯಿಂದ ಉಚ್ಚರಿಸುತ್ತ ಕೈಮುಗಿದನು. ಜನರೂ "ವಂದೇ ಮಾತರಂ" ಎಂದು ಪ್ರತಿಧ್ವನಿಸಿದರು "ಮಹಾತ್ಮಾ ಗಾಂಧೀಜೀ ಜೈ! ಭಾರತಮಾತಾ ಕೀ ಜೈ! ಕರ್ಣಾಟಕ ಮಾತಾ ಕೀ ಜೈ!" ಎಂದು ಘೋಷಿಸಿದನು ಶೀನು ಜನ ನೆರವಿಯಿಂದ ಅದೂ ಅಲೆಯಲೆಯಾಗಿ ಮಾರ್ಮೊಳಗಿತು.

ಈ ಜಯಘೋಷಣದಿಂದ ಶೀನುವಿಗೆ ಸ್ಫೂರ್ತಿ ಚೆನ್ನಾಗಿ ವಿಕಸಿತವಾಯಿತು. ಜನರು ತನ್ನ ಮೇಲೆ ತೋರಿಸುವ ಆದರವನ್ನು ನೋಡಿ ಶೀನುವಿಗೆ ಎದೆಯುಬ್ಬಿತು ಉತ್ಸಾಹ ಕೆರಳಿತು. ಬರೆಹವನ್ನು ನೋಡದೆಯೇ ಮಾತಾಡಬಹುದೆನ್ನಿಸಿತು. ಆದರೂ ಅದನ್ನು ಮೇಜಿಯಮೇಲೆ ಆಧಾರಕ್ಕಾಗಿ ಇಟ್ಟುಕೊಂಡಿದ್ದನು

ಆಗ ಸಾರ್ವಜನಿಕ ಸಭೆಯಲ್ಲಿ ಮಾತಾಡುವಾಗ ತುಂಬಾ ಎಚ್ಚರಿಕೆ ಬೇಕಾಗಿತ್ತು. ಅಪ್ಪಿ-ತಪ್ಪಿ ಯಾವುದೊಂದು ಹೂಂಕಾರವೆದ್ದರೂ 'ದೇಶ ಸಂರಕ್ಷಣೆಯ ಕಾನೂನಿನ ಮೇಲೆ ಕೈದು ಮಾಡಿಬಿಡುತ್ತಿದ್ದರು. ಇದನ್ನರಿತೇ ಅವನು ಭಾಷಣ ಮಾಡುತ್ತಿದ್ದನು

"................ ಪ್ರಿಯ ವೀರ ಮಡಿಕೇರಿಯ ಬಂಧು ಬಾಂಧವರೆ, ಹೊಸಬರಾದ ನಿಮ್ಮನ್ನೆಲ್ಲಾ ಕಾಣುವ ಭಾಗ್ಯವು ಬಂದುದಕ್ಕಾಗಿ ನಾನು ಬಹಳ ಸಂತೋಷ ಪಡುತ್ತೇನೆ ನಾನು ನಿಮ್ಮ ಮುಂದೆ ಹೇಳಬೇಕೆಂದಿರುವ ವಿಷಯವು ನಿಮಗೆ ತಿಳಿಯದ ಹೊಸತೇನೂ ಅಲ್ಲ. ಅಹಿಂಸೆಯ ತತ್ವವನ್ನು ಮಹಾತ್ಮರ ಮೂಲಕವಾಗಿ ನೀವು ಎಷ್ಟೋ ಕೇಳಿದ್ದೀರಿ. ತಿಳಿದಿದ್ದೀರಿ. ಕೇಳಿದ್ದನ್ನೇ ಕೇಳಲು ಬೇರೆ ವಿಷಯದಲ್ಲಾದರೆ ನಿಮಗೆ ಬೇಸರವಾದೀತು. ಅಹಿಂಸೆಯ ವಿಷಯ ಹಾಗಲ್ಲ. ರಾಮಾಯಣ ಭಾರತಾದಿಗಳು ಯಾರಿಗೆ ಗೊತ್ತಿಲ್ಲ? ಆದರೂ ಓದಲಿಕ್ಕೆ. ನೋಡಲಿಕ್ಕೆ ಕೇಳಲಿಕ್ಕೆ ಬೇಸರ ಬರುತ್ತೆಯೆ? ಅಹಿಂಸೆಯೂ ಅದರಂತಹುದೇ ಆದ ಮಧುರ ಮಂವಾದ ವಿಷಯ.

"ಅಹಿಂಸಾ ಪರಮೋ ಧರ್ಮಃ" ಎಂದು ಪೂರ್ವಜರೇ ಎತ್ತಿಕೊಟ್ಟಿದ್ದಾರೆ ಆದರೂ ಇದು ಅನುಷ್ಠಾನದಲ್ಲಿ ಬಳಕೆಗೆ ತರಲು ಸಾಧ್ಯವಾ

ಗವೆ, ಆ ವಾಕ್ಯದೊಳಗೇ ಅಡಗಿಕೊಂಡಿತ್ತು. ಈಗ ನಮ್ಮ ಸುತ್ತು ಮುತ್ತ ಖಂಡಾಂತರಗಳಲ್ಲಿ ನಡೆಯುತ್ತಿರುವ ಮಾರಣ ಯುದ್ಧ ವಾವದರೋ, ಹಿಂದೆಂದೂ ಕೇಳಿ ಬರದಂತಹ ಕ್ರೂರ ಹಿಂಸಾಮಯವಾಗಿ ವಿಜೃಂಭಿಸುತ್ತಿದೆ. ಇಂತಹ ಹಿಂಸಾಶಕ್ತಿಯ ಪ್ರಚಂಡ ಬಲದಿದಿರಿನಲ್ಲಿ ಇಲ್ಲವೇ ಅಹಿಂಸೆಯ ಶಕ್ತಿಯನ್ನು ಅಳೆಯಬೇಕು? ಈಗಲೇ ಅದಕ್ಕೆ ತಕ್ಕ ಪರೀಕ್ಷಾಯೋಗವು ಪ್ರಾಪ್ತವಾಗಿದೆ.

"ಮಹಾತ್ಮರು ಅಹಿಂಸೆಯ ಸಾಧನೆಯಲ್ಲಿ ಈವರೆಗೂ ಅಪಜಯ ಹೊಂದಿಲ್ಲ. ಆದುದರಿಂದ ಅವರಿಗೆ ಅದರಲ್ಲಿ ಅಚಲ ವಿಶ್ವಾಸವಿದೆ. ಅವ ರೊಬ್ಬರ ವಿಶ್ವಾಸವು ಮಾತ್ರವಿದ್ದರೆ ಹೇಗೆ ಸಾಕು ? ನಿಮ್ಮೆಲ್ಲರ ವಿಶ್ವಾ ಸವೂ ಅವರಂತೆಯೇ ಇರಬೇಕು. ಇದೆ ಎಂಬುದನ್ನು ಅವರಿಗೆ ತೋರಿಸಿ ಕೊಡಬೇಕು. ಆಗ ತಾನೇ ಅವರು ನಿಮ್ಮೆಲ್ಲರಿಗೂ ನಾಯಕರಾಗಿ ನಡೆಸಿ ವಿಜಯ ಮಾಲೆಯನ್ನು ಗಳಿಸಿ ಕೊಡಬಲ್ಲರು ಮಹಾತ್ಮರ ನಾಯಕತ್ವ ದಲ್ಲಿ ನಡೆಯುವ ಧೈರ್ಯವೂ ದೃಢತೆಯೂ ನಿಮಗಿದೆಯೆ ? ಇಲ್ಲದಿದ್ದರೆ ನೀವು ಇಷ್ಟು ದೃಢವಾಗಿ ಜಯಘೋಷಣವನ್ನು ಮಾಡಬಲ್ಲಿರಾ ? ನಿಮ್ಮ ಜಯಧ್ವನಿಯಲ್ಲಿ ದೃಢತೆಯಿದೆ, ಶಕ್ತಿಯಿದೆ, ವಿಶ್ವಾಸವಿದೆ.

ಆದರೆ ಮಹಾತ್ಮರ ಕಟ್ಟಾಣತಿಯನ್ನು ಕೇಳಬೇಕಾದರೆ ಇದು ಇನ್ನೂ ಇನ್ನೂ ಹೆಚ್ಚಾಗಿ ಬಲಿಯಬೇಕು ವೀರ ಬಂಧುಗಳೇ ! "ನಿಮ ಗಿನ್ನೂ ಒಂದು ಸಂದೇಹವಿದ್ದಿತು; ನಮ್ಮ ಸುತ್ತುಮುತ್ತಲೂ ನಡೆಯುವ ಬಾಂಬು, ಗುಂಡು, ಟ್ಯಾಂಕ್, ಮಿಶನ್‌ಗನ್ ಮೊದಲಾದ ಕ್ರೂರ ಹಿಂಸ್ರ ಯುದ್ಧದ ಮಧ್ಯದಲ್ಲಿ ನಮ್ಮ ಅಹಿಂಸೆ ಏನು ಮಾಡೀತು ? ಎಂಬ ಸಂದೇ ಹವು ಯಾರಿಗೂ ಬರುವಂತಹುದೇ ಹಾಗೆ ನೋಡಿದರೆ ಹಿಂಸೆಯಿಲ್ಲದೆ ಲೋಕದಲ್ಲಿ ಯಾವುದೂ ನಡೆಯದು ಜೀವೋ ಜೀವಸ್ಯ ಜೀವನಂ— ಎಂಬಂತೆ ಹಿಂಸೆಯಿಲ್ಲದೆ ಯಾವ ಪ್ರಾಣಿಯೂ ಬದುಕಲಾರದು. ಆದರೆ, ತತ್ವವೇನೆಂದರೆ ಒಂದು ದೊಡ್ಡ ಹಿಂಸೆಯನ್ನು ಕಾಪಾಡಲಿಕ್ಕಾಗಿ ಒಂದು ಸಣ್ಣ ಹಿಂಸೆ ಮಾಡಿದರೆ ಅದು ಅಹಿಂಸೆ ಎನಿಸುತ್ತದೆ ಸಾವಿರಾರು— ಲಕ್ಷೋಪಲಕ್ಷ ಜನರನ್ನು ಕೊಲ್ಲುವ ನೂರಾರು ಕ್ರೂರರನ್ನು ಕೊಂದರೆ ಅದೊಂದು ಅಹಿಂಸೆಯೇ. ಅದರೂ ಈ ಬಗೆಯ ವಿಧಾನವನ್ನು ಕಟ್ಟ ಕಡೆಗೇ ಹಿಡಿಯಬೇಕು. ಚತುರೋಪಾಯಗಳಲ್ಲಿ ದಂಡೋಪಾಯವು

ಕಟ್ಟ ಕಡೆಗೇ ಎಂದು ಆರ್ಯರೇ ವಿಧಿಸಿಟ್ಟಿದ್ದಾರೆ. ನಮ್ಮ ಮಹಾತ್ಮ ರಾದರೂ ಹಾಗೆಯೇ. ಆವೇಶಗೊಂಡೇಳುತ್ತಿರುವ ನಿಮ್ಮನ್ನೆಲ್ಲಾ ತಾಳಿರಿ, ತಾಳಿರಿ, ಕಾಯಿರಿ, ಕಾಯಿರಿ, ಶಾಂತರಾಗಿ ನಿಮ್ಮ ಬಲವನ್ನು ಹೆಚ್ಚಿಸಿರಿ. ಪ್ರಥಮಾವೇಶದಿಂದ ದುಡುಕಿ ವಿಜೃಂಭಿಸಿದರೆ, ಶೀಘ್ರಪತನವುಂಟಾದೀತು ಹಿಂಸೆಯೇ ಮುಖ್ಯವಾಗಿರುವ ಯುದ್ಧದಲ್ಲಿ ಶೀಘ್ರ ವಿಜಯ ದೊರೆತರೂ ಅದು ಚಿರವಿಜಯವಾಗದು; ಸ್ಥಿರವಿಜಯವಾಗದು ತಾಳಿ ತಾಳಿ ಹೆಚ್ಚಳಗೊಂಡ ಶಕ್ತಿಯಿಂದ, ಅಹಿಂಸೆಯೇ ಮುಖ್ಯವಾದ ಹೋರಾಟದಿಂದ ಬಂದ ವಿಜಯವು ಸ್ನೇಹ ವಿಜಯ, ಚಿರ ವಿಜಯ; ಸ್ಥಿರ ವಿಜಯ ಒಂದು ವೇಳೆ ಅಹಿಂಸೆಯ ಯುದ್ಧದಲ್ಲಿ ಸೋಲೇ ಬಂದರೂ ಅದು ಗೌರವನೀಯವಾದ, ಲೋಕವೇ ಮೆಚ್ಚುವಂತಹ, ಪ್ರತಿಪಕ್ಷಕ್ಕೆ ಅವಮಾನಕಾರಿಯಾದ, ಮತ್ತೂ ಮತ್ತೂ ಹೋರಾಟವು ಮುಂದುವರಿಯುವಂತೆ ವಿಶಾಲ ದಾರಿಯನ್ನು ತೋರಿಸುವ, ಸ್ಥಿರ ವಿಜಯದ ಕಡೆಗೆ ಸಾಗಿಸುವ ಸೋಲೆಂಬ ಒಂದು ಮೆಟ್ಟಲೆಂದೇ ತಿಳಿಯಬೇಕು. ಅಹಿಂಸೆಯ ಯುದ್ಧಕ್ಕೆ ಹಿಂಸೆಯ ಯುದ್ಧಕ್ಕಿಂತಲೂ ಮುಮ್ಮಡಿ ನಾಲ್ಮಡಿಯಾದ ಧೈರ್ಯ ಸ್ಥೈರ್ಯ ಆತ್ಮ ವಿಶ್ವಾಸಗಳು ಬೇಕು. ನಮ್ಮಲ್ಲೆಲ್ಲಾ ಅದು ಹೆಚ್ಚಬೇಕೆಂದು ಮಹಾತ್ಮರು ಬಯಸುತ್ತಾರೆ ಅನೇಕ ವರ್ಷಗಳಿಂದ ಮಹಾತ್ಮಾ ಗಾಂಧಿಯವರ ಸತ್ಯ-ಅಹಿಂಸೆಗಳ ಸಾಧನೆಯ ಮೇಲುಪಜ್ಞೆಯನ್ನು ನೋಡುತ್ತಾ ಅನುಸರಿಸುತ್ತಾ. ಮೆಚ್ಚುತ್ತಾ ಬಂದ ನಾವು ಅವರ ದಾರಿಯ ಮೇಲೆ ನಂಬುಗೆಯಿಲ್ಲವೆಂದು ಹೇಳಬಲ್ಲೆವೆ? ಇಲ್ಲ, ಇಲ್ಲ. ಅಂತಹ ಕಾಲವು ಹೋಯಿತು ನಾವೆಲ್ಲಾ ದೃಢವೃದ್ಧಿಯಿಂದ ಅಚಲ ಸ್ಥೈರ್ಯದಿಂದ ಮಹಾತ್ಮರನ್ನೆ ನಂಬಿದ್ದೇವೆ ಆ ನಂಬುಗೆಯನ್ನು ಅವರಿಗೆ ರುಜುಪಡಿಸಿ ಕೊಡಬೇಕು ನಾವು. ಅದಕ್ಕೆ ನೀವೆಲ್ಲರೂ ಸಿದ್ಧರಾಗಿರಬೇಕು....................."

ಹೀಗೆ ಸುಮಾರು ಒಂದು ಗಂಟೆಯವರೆಗೆ ಶೀನು ಭಾಷಣ ಮಾಡಿದನು. ಅವನ ಧ್ವನಿಯಲ್ಲಿ ಶಾಂತತಾ ಮಾಧುರ್ಯವಿತ್ತು; ಶಕ್ತಿಯಿತ್ತು. ವಕ್ತೃತ್ವಶಕ್ತಿ ತನಗುಂಟೆಂಬ ನಂಬುಗೆಯೂ ಅವನಿಗಾಯಿತು. ಜನರೂ ಸದ್ದು ಗುಲ್ಲು ಗಲಾಟೆಮಾಡದೆ ಉದಾತ್ತಭಾವದಿಂದ ಅವನ ಭಾಷಣವನ್ನು ಕೇಳಿದರು

ಭಾಷಣ ಮುಗಿಯುತ್ತಲೇ ಜನಸಮುದಾಯದಲ್ಲಿ ಆನಂದ ಪರವಶನಾದ ಯಾರೋ ಒಬ್ಬನು "ದೇಶ ಭಾಷಾಸೇವಕ ಕನ್ನಡ ಗೆಳೆಯ - ಕೀ ಜೈ!'' ಎಂದು ಕೂಗಿದನು.

ಒಡನೆಯೇ ಶೀನು--- "ಪ್ರಿಯ ಮಿತ್ರ ಮಹಾಶಯರೆ! ನನ್ನ ಹೆಸರಿನಲ್ಲೇನೂ ಇಲ್ಲ. ನಿಮ್ಮಂತೆಯೇ ನಾನು ಒಬ್ಬ ಸೇವಕ ಮಹಾತ್ಮಾ ಗಾಂಧಿಯ ಹೆಸರಿಗೂ, ಭಾರತಾಂಬೆಯ ಹೆಸರಿಗೂ ಜಯಜಯಕಾರ ಮಾಡಿರಿ'' ಎಂದನು ಜಯಜಯಕಾರದೊಂದಿಗೆ ಸಭೆ ಚದರಿತು.

ಶೀನು ಈಗ ಅಲ್ಲಿಯ ನಾಯಕರ ಅತಿಥಿಯಾಗಿ ಅಲ್ಲೇ ಇದ್ದನು. ಮರುದಿನ ನಾಯಕರು ಅವನ ಜತೆಗೆ ಒಬ್ಬ ಸ್ವಯಂಸೇವಕನನ್ನು ಕೊಟ್ಟು, ಮನೆಮನೆಗೆ ತಿರುಗಾಡಲು ಕಳುಹಿಸಿದರು. ಆ ಸ್ವಯಂಸೇವಕನಿಗೆ ಆ ಊರೆಲ್ಲ ಪರಿಚಯವಿತ್ತು. ಅವನು ಶೀನುವನ್ನು ವಿಶ್ವಾಸಾರ್ಹರಾದವರ ಮನೆಗಳಿಗೆಲ್ಲ ಕರೆದೊಯ್ದನು ಶೀನು ಆ ಮನೆಯ ಒಡೆಯರನ್ನು ಸಂಧಿಸಿ, ಮಹಾತ್ಮಾ ಗಾಂಧಿಯ ಮುಂದಾಳ್ತನದಲ್ಲಿ ಇನ್ನು ಬೇಗದಲ್ಲಿಯೇ ಆರಂಭಿಸಲಿರುವ ಹೋರಾಟದ ನಿಯಮಾವಳಿಯ ಪಟ್ಟಿಯನ್ನು ಅವರಿಗೆ ತೋರಿಸಿ, ಅದನ್ನು ಅರ್ಥವತ್ತಾಗಿ ವ್ಯಾಖ್ಯಾನ ಮಾಡಿ, ಸಂದೇಹವೇನಾದರೂ ಎದ್ದಲ್ಲಿ ಸಮಂಜಸವಾದ ಉತ್ತರಕೊಟ್ಟು, ಅವರ ಸಹಕಾರ ಅಥವಾ ಸಹಾನುಭೂತಿಯ ಸಮ್ಮತಿಯ ಸಹಿಯನ್ನು, ಸಹಿಪುಸ್ತಕದಲ್ಲಿ ಪಡೆದುಕೊಂಡನು ಹೀಗೆಯೇ ಎರಡು ದಿನಗಳವರೆಗೆ ಆ ಊರಿನಲ್ಲಿಯೇ ತಿರುಗಾಡುತ್ತ, ಗಾಂಧೀ ತತ್ವದಲ್ಲಿ ಪಾಮರರ ಮನಸ್ಸು ಚೆನ್ನಾಗಿ ನೆಡುವಂತೆ ಸಾಕಷ್ಟು ಪ್ರಯತ್ನ ಮಾಡಿದನು ದೇವಾಲಯದ ಪಟಾಂಗಣದಲ್ಲಿಯೂ, ಶಾಲೆಯ ಕಟ್ಟೋಣದಲ್ಲಿಯೂ ಅವನ ಮತ್ತೆರಡು ಭಾಷಣಗಳು ನೆರವೇರಿದವು ಅವನ ಭಾಷಣಮಾಧುರ್ಯವನ್ನು ಎಲ್ಲರೂ ಕೊಂಡಾಡಲಾರಂಭ ಮಾಡಿದರು.

ಎರಡನೇ ದಿನದಲ್ಲಿ ಒಬ್ಬ ಪೋಲೀಸಿನವನು ಬಂದು ಶ್ರೀನಿವಾಸರಾಯನಿಗೆ ಒಂದು ಪತ್ರವನ್ನು ಕೊಟ್ಟನು. ಅದರಲ್ಲಿ ಅವನು ಪೋಲೀಸ ಸ್ಟೇಶನ್ನಿಗೆ ಬಂದು ಸರ್ಕಲ್ ಇನ್ಸ್‌ಪೆಕ್ಟರರೊಡನೆ ಮಾತಾಡಿ ಹೋಗಬೇಕೆಂಬ ಆಜ್ಞೆ ಲಿಖಿತವಾಗಿತ್ತು ಶೀನು ಆ ಪೋಲೀಸನ ಜತೆಯಲ್ಲಿಯೇ ಅಲ್ಲಿಗೆ ಹೋದನು.

ಸರ್ಕಲ್ ಇನ್ಸ್‌ಪೆಕ್ಟರು ಅವನನ್ನು ಮರ್ಯಾದೆಯಿಂದಲೇ ಮಾತಾಡಿಸಿದರು.— "ನೀವು ಯಾರು ? ಯಾವ ಪಕ್ಷಕ್ಕೆ ಸೇರಿದವರು ? ದೇಶೀಯ ಸಂರಕ್ಷಣೆಯ ಕಾನೂನು ನಿಮಗೆ ಗೊತ್ತಿದೆಯೊ ? " ಎಂದು ಕೇಳಿದರು.

"ಗೊತ್ತಿದೆ. ನಾನು ಗಾಂಧೀವಾದಿ. ಸ್ವಂತದಲ್ಲಿ ಒಬ್ಬ ಸಾಹಿತಿ. ಸ್ವಂತ ಕಾರ್ಯದೊಂದಿಗೆ ಸಾಧ್ಯವಾದಷ್ಟು ಗಾಂಧೀತತ್ವವನ್ನೂ ಪ್ರಚಾರ ಪಡಿಸಬೇಕೆಂದು ಪ್ರವಾಸ ಹೊರಟಿದ್ದೇನೆ."

"ಇದರಿಂದ ನಿಮಗೇನು ಪ್ರಯೋಜನ ?"

"ಏನೂ ಇಲ್ಲ."

"ಹೀಗೆ ಎಲ್ಲಿಗೆ ಹೋಗುತ್ತೀರಿ?"

"ಮೈಸೂರು ಬಳಸಿಕೊಂಡು ಹಂಪೆಯವರೆಗೆ ಹೋಗಿ ಅಲ್ಲಿಂದ ಮದರಾಸಿಗೆ "

"ಮದರಾಸಿಗೇಕೆ?"

"ನನ್ನ ತಂಗಿ ಮತ್ತು ಇನ್ನೊಬ್ಬಳು ನನ್ನ ಸ್ನೇಹಿತರ ಮಗಳು, ಇವರನ್ನು ಮದರಾಸಿನ ಮಹಿಳಾಭ್ಯುದಯ ಮಂಡಲಿಯಲ್ಲಿ ಸೇರಿಸಲಿಕ್ಕೆ"

"ಓಹೋ! ಹೆಣ್ಣುಮಕ್ಕಳೂ ನಿಮ್ಮ ಜತೆಯಲ್ಲಿರುವರೆ ? ಅಂದ ಮೇಲೆ ನೀವು ತುಂಬಾ ಜಾಗರೂಕರಾಗಿರುವಿರಷ್ಟೆ ? ಗಾಂಧೀ ತತ್ವ ಪ್ರಚಾರವೆನ್ನುತ್ತಾ ಜನರಿಗೆ ಆವೇಶ ಬರುವಂತೆ ನೀವೇನೂ ಮಾಡಿಬಿಡಬೇಡಿ."

"ಆ ಎಚ್ಚರ ನನಗಿದ್ದೇ ಇದೆ."

"ನಿಮ್ಮ ಜತೆಯಲ್ಲಿರುವಾತನ ಹೆಸರೇನು?"

"ಯಾರವನು?"

"ಅದೇ—ಮಂಗಳೂರಿನಿಂದ ನಿಮ್ಮೊಂದಿಗೇ ಬಂದನಲ್ಲ?"

"ಅವನೊಬ್ಬ ಸ್ವಯಂಸೇವಕ. ಹೆಸರು ಭುಜಂಗ."

"ಗೋಪಾಲರಾವ್ ಎಂದಲ್ಲವೆ?"

ಶೀನು ಆಶ್ಚರ್ಯದಿಂದ— "ಯಾವ ಗೋಪಾಲರಾವ್?"

"ಅವನೇ—ದೇಶಭಕ್ತ ಗೋಪಾಲರಾವ್. ಗೋಗಟ್ಟೇ ಪೇಟೆಯಲ್ಲಿ ನಿಮ್ಮ ಜತೆಯಲ್ಲಿದ್ದನಲ್ಲ?"

"ಓಹೋ! ಗೋಗಟ್ಟೇ ಪೇಟೆಯಲ್ಲಿ ಆತನು ಒಂದು ಅರ್ಧ ಗಂಟೆ ನನ್ನ ಜತೆಯಲ್ಲಿದ್ದುದು ನಿಜ ಅವನು ನಮ್ಮ ಪ್ರಾಂತದವನೇ. ಆ ಪರಿಚಯದಿಂದ ಕೊಂಚ ಹೊತ್ತು ನಾನು ಅವನೊಡನೆ ಮಾತಾಡಿದ್ದೆ. ಅನಂತರ ಅವನನ್ನು ನಾನು ಸಂಧಿಸಲೇ ಇಲ್ಲ."

"ಓಹೋ! ಹಾಗೇನು? ನನಗೇನು ಗೊತ್ತು? ಮಂಗಳೂರು ಸರ್ಕಲಿನಿಂದ ಹಾಗೊಂದು ಸಂದೇಹ ವಾರ್ತೆ ಇಲ್ಲಿಗೆ ಬಂದಿದೆ. ಸರಿ. ನೀವು ಹೋಗಿ ಎಚ್ಚರದಲ್ಲಿ ನಡೆಯುವೆನೆಂದು ಇಲ್ಲಿ ಒಂದು ಭರವಸೆಯ ದಸ್ಕತು ಕೊಟ್ಟು ಹೋಗಿ"

ಶೀನು ಹಾಗೆಯೇ ಅವರು ತೋರಿಸಿದ ಕಾಗದದಲ್ಲಿ ದಸ್ಕತ್ತು ಹಾಕಿ ಹೊರಟುಹೋದನು.

ಅವನನ್ನು ಪೋಲೀಸರು ಕರೆದುದೂ, ಅವನು ಅಲ್ಲಿಗೆ ಹೋಗಿ ಬಂದುದೂ ಕೆಲವರು ನೋಡಿ, ಹಲವರಿಗೆ ತಿಳಿಸಿ, ಈ ಸುದ್ದಿ ಊರೆಲ್ಲಾ ಗೊತ್ತಾಗಿ, ಅವನ ಮುಂದೊಂದು ಕೀರ್ತಿಯ ಬೆಳಕು ಹಿಡಿದು ತೋರಿಸಿದಂತಾಯಿತು.

## ೧೯

ಅಂದು ಸಂಜೆಯಲ್ಲಿ ಶ್ಯಾಮಸುಂದರರ ಕಾರು ಮಡಿಕೇರಿಯ ಕಾರ್ಯಾಲಯಕ್ಕೆ ಬಂದು ಸೇರಿತು. ಗೌರಿಯೂ ವಸಂತಿಯೂ ವಸಂತಿಯ ತಮ್ಮ ಕೇಶವನೂ, ಡ್ರೈವರ್ ಸದಾಶಿವನೂ ಇಷ್ಟು ಮಂದಿ ಬಂದಿದ್ದರು. ಮರುದಿನ ಬೆಳಿಗ್ಗೆ ಶೀನುವೂ ಅವರೊಂದಿಗೆ ಸೇರಿ ಎಲ್ಲರೂ ಅಲ್ಲಿಂದ ಹೊರಟರು

ಒಂದು ಊರಿನಿಂದ ಇನ್ನೊಂದು ಊರಿಗೆ ಇವನು ಮುಟ್ಟುವ ವಾರ್ತೆ ಮುಂದಾಗಿಯೇ ಆ ಊರಿಗೆ ತಿಳಿಸಲಾಗುತ್ತಿತ್ತು. ದಾರಿಯಲ್ಲಿ ಹತ್ತಿದ ಒಂದೊಂದು ಊರಿನಲ್ಲಿಯೂ, ಅರ್ಧ ದಿನ—ಒಂದು ದಿನ—ಎರಡು ದಿನಗಳನ್ನು ಆ ಆ ಊರಿನ ಸ್ವಯಂ ಸೇವಕನೊಂದಿಗೆ ಸುತ್ತಾಡಿ ಶೀನು ಆದಷ್ಟು ಸಹಿಯನ್ನು ಗಳಿಸಿಕೊಂಡನು. ಕೆಲವು ಕಡೆ ಅವನ

ಭಾಷಣಗಳೂ ನಡೆದುವು. ಆ ಆ ಊರಿನ ಕಾಂಗ್ರೆಸು ನಾಯಕರೂ ಪ್ರಜೆಗಳೂ ಶ್ರೀನಿವಾಸರಾಯನಿಗೆ ಅಮೋಘವಾದ ಸ್ವಾಗತ ಮಾಡಿದರು. ಮೈಸೂರಿನಲ್ಲಿ ಒಂದು ವಾರದವರೆಗೂ ತಂಗಿದ್ದನು. ಅಲ್ಲಿಯ ದೊಡ್ಡ ದೊಡ್ಡ ಸಾಹಿತಿಗಳನ್ನೂ ರಾಜಕಾರಣ ಪಟುಗಳನ್ನೂ ಪರಿಚಯಮಾಡಿಕೊಳ್ಳುವ ಅನುಕೂಲಯೋಗ ಅವನಿಗೊದಗಿತು. ಅಲ್ಲಿ ಅವನು ಎರಡು ದಿನ ಸಾಹಿತ್ಯಪರವಾಗಿಯೂ ಭಾಷಣಮಾಡಿದನು. "ಸ್ವಾತಂತ್ರ್ಯಲಾಭಾನಂತರ ಸಾಹಿತ್ಯದ ಸ್ವರೂಪ" ಎಂಬ ವಿಷಯವನ್ನೆತ್ತಿಕೊಂಡು ತನ್ನ ಹೃದಯದೊಳಗಿದ್ದ ಅಭಿಪ್ರಾಯವನ್ನು ಬಿಚ್ಚಿಟ್ಟನು. ಅದಕ್ಕೆ ಅಲ್ಲಿಯ ಅನೇಕ ಪಂಡಿತರಿಂದ ಸಹಕಾರ-ಸಹಾನುಭೂತಿಗಳು ದೊರೆತುವು. "ಈಗಣ ಮುಖ್ಯ ಕರ್ತವ್ಯ" ಎಂಬ ವಿಷಯದ ಮೇಲೆ ಅವನು ಮಾಡಿದ ಭಾಷಣವು ರಾಜಕೀಯವಿದ್ದು ಮಹಾತ್ಮರ ತತ್ವವನ್ನು ಎತ್ತಿ ತೋರಿಸುವಂತಹುದಿತ್ತು.

ಇಷ್ಟೇ ಅಲ್ಲದೆ ಅವನೊಂದಿಗಿರುವ ಗೌರೀ ವಸಂತಿಯರು ಕಲೋಪಾಸನೆಗಾಗಿಯೇ ಹೊರಟಿರುವರೆಂದು ತಿಳಿದು, ಅವರ ಕಲಾಭಿರುಚಿಯನ್ನು ಪ್ರತ್ಯಕ್ಷ ನೋಡಬೇಕೆಂದು, ಆ ನಗರದ ಪ್ರಮುಖರು ತಮ್ಮ ಉತ್ಕಟೇಚ್ಛೆಯನ್ನು ವ್ಯಕ್ತಪಡಿಸಿದರು. ಶೀನು ನಿರಾಕರಿಸಲಾರದಾದ. ತಂಗಿಯನ್ನೂ ವಸಂತಿಯನ್ನೂ ಒಪ್ಪಿಸಿದ. ಅಲ್ಲಿಯ 'ರಾಜಾಧಿಯೇಟರ'ನಲ್ಲಿ ಮುಖ್ಯ ಮುಖ್ಯರಾದ ಪ್ರಮುಖರಿದಿರಿನಲ್ಲಿ ಗೌರೀ ವಸಂತಿಯರ ನಾಟ್ಯ ಪ್ರದರ್ಶನವು ನೆರವೇರಿತು. ಅಲ್ಲಿಯ "ಭುವನೇಶ್ವರೀ ನಾಟಕ ಮಂಡಳಿ"ಯ ಆರ್ಕೆಸ್ಟ್ರಾದವರು ಸುಶ್ರಾವ್ಯವಾದ ಧ್ವನಿ ಭೇದಗಳಿಂದ ಹಿನ್ನೆಲೆಯನ್ನು ಸೃಷ್ಟಿಸಿದರು. ಅದೇ "ಕಾಳಿಂಗ ಮರ್ದನ." ಮೊದಲು ಗೌರಿ ಕೃಷ್ಣನಾಗಿ ವಸಂತಿ ಕಾಳಿಂಗನಾಗಿ ನೃತ್ಯವೆಸಗಿದರು. ಎರಡನೆಯ ಬಾರಿ ಗೌರಿ ಕಾಳಿಂಗನಾಗಿ, ವಸಂತಿ ಕೃಷ್ಣನಾಗಿ ಕುಣಿದಾಡಿದರು. ಗೌರಿಯ ಹಾವಿನ ನೃತ್ಯವೂ, ಕೃಷ್ಣನ ನೃತ್ಯವೂ ನೋಟಕರನ್ನು ಆಶ್ಚರ್ಯಾನಂದದಲ್ಲಿ ತೇಲಾಡಿಸಿತು. ಗೌರಿಯ ಮೈಮಾಟವು ಆಗ ತಾನೇ ಎಲ್ಲರಿಗೂ ತಿಳಿದು ಮುಗ್ಧಗೊಳಿಸಿತು. ಮನದುಂಬಿ ಮೆಚ್ಚಿಹೋದ ಆ ಪ್ರಮುಖರು, ಒಡನೆಯೇ ಅಲ್ಲಿಯೇ ತಮ್ಮ ತಮ್ಮೊಳಗೆ ವಂತಿಗೆ ಕೂಡಿಸಿ ಎರಡು ಮೆಡಲುಗಳನ್ನು ತರಿಸಿ ಗೌರಿವಸಂತಿಯರ

ಹೆಸರುಗಳನ್ನು ಕೂರೆಯಿಸಿ, ಅವರಿಬ್ಬರಿಗೂ ಕೊಟ್ಟು ಗೌರವಿಸಿದರು. ಶೀನು ಅವರೆಲ್ಲರಿಗೂ ಹೃತ್ಪೂರ್ವಕವಾದ ಕೃತಜ್ಞತೆಯನ್ನು ವ್ಯಕ್ತ ಪಡಿಸಿದನು

ಆ ಪದಕಗಳನ್ನು ಕೊಟ್ಟ ಮಹಾನುಭಾವರು, ತಮ್ಮ ಚಿಕ್ಕ ಭಾಷಣದಲ್ಲಿ, ಗೌರೀ ವಸಂತಿಯರು ನಾಟ್ಯಕಲೆಯಲ್ಲಿ ಸೇರಿರುವ ಕೊಳೆಗಳನ್ನು ಕಳೆಯಿಸಿ, ಚೆನ್ನಾಗಿ ಬೆಳಗಿಸಬಲ್ಲ ಯೋಗ್ಯ ವಿದ್ಯಾರ್ಥಿನಿಯರೆಂದೂ ಇವರಿಂದ ನೃತ್ಯಕಲೆ ನವತೇಜಸ್ಸಿನಿಂದ ಬೆಳಗುವಂತಾಗಲೆಂದೂ, ಗೌರೀದೇವಿ ಈ ಕಲೆಯ ಜೀರ್ಣೋದ್ಧಾರಕ್ಕಾಗಿಯೇ ಹುಟ್ಟಿ ಬಂದ, ಮಯೂರವಾಹಿನಿಯ ಅಂಶಸಂಭೂತಳಿರುವಳೆಂದೂ, ಇವರಿಬ್ಬರಿಗೂ ಉತ್ತರೋತ್ತರ ಶ್ರೇಯೋಭಿವೃದ್ಧಿಯಾಗಲೆಂದೂ ಹೇಳಿ ಹರಸಿ ಕಾಣಿಕೆ ಕೊಟ್ಟಿದ್ದರು ತಾರತಮ್ಯವಾಗದಂತೆ ಇಬ್ಬರಿಗೂ ಒಂದೇ ವಿಧವಾದ ಪದಕವು ದೊರೆತಿತ್ತು

ಜನರೆಲ್ಲರೂ ಹೊರಟು ಹೋಗುವಾಗ, ''ಆಹಾ! ಗೌರೀದೇವಿಯ ನಟನೆಯೇ ನಟನೆ!'' ಎಂದು ಹಲವರು ಅವಳ ಹೆಸರನ್ನೆ ಶ್ಲಾಘಿಸಿಕೊಂಡುದನ್ನು ಕೇಳಿ, ವಸಂತಿಯ ಕೆಮ್ಮೊಗವು ಕೊಂಚ ಕಂದಾಗಿತ್ತು!

ಡ್ರೈವರ್ ಸದಾಶಿವನು ಕಾರಿಗೆ ಬೇಕಾದ, ಲೈಸನ್ಸು ಬದಲಾವಣೆ, ಪೆಟ್ರೋಲು, ಇದ್ದಿಲಿ, ಮೊದಲಾದವನ್ನು ಸಂಗ್ರಹಿಸಿಕೊಂಡು ಸಿದ್ಧನಾದನು. ಮೈಸೂರಿನಿಂದ ಹಳೇಬೀಡಿಗೆ ಹೋಗಿ ಅಲ್ಲಿಯ ದೇವಾಲಯಗಳ ಶಿಲ್ಪ ಕೌಶಲ್ಯಗಳನ್ನು ಕಂಡು ತಲೆದೂಗಿದರು ವೃಂದಾವನದ ಅಂದಚೆಂದಗಳನ್ನು ಕಂಡು ಬೆರಗಾದರು ಅನಂತರ ಹರಿಹರ, ಹರಪನಹಳ್ಳಿ, ಕೊಟ್ಟೂರು ಮೊದಲಾದ ಊರುಗಳಲ್ಲಿ ತಂಗಿ ತಂಗಿ, ಶೀನು ತನ್ನ ಪ್ರಚಾರ ಕಾರ್ಯ ಮಾಡುತ್ತ, ಜನರ ಸಹಿಗಳನ್ನೂ ಪಡೆಯುತ್ತ, ಅವರು ಹೊಸಪೇಟೆಗೆ ಬಂದು ಮುಟ್ಟಿದಾಗ, ಮಂಗಳೂರಿನಿಂದ ಹೊರಟು ಒಂದು ತಿಂಗಳ ಮೇಲಾಯಿತು.

ಹೊಸಪೇಟೆಯಲ್ಲಿಯೂ ಶ್ರೀನಿವಾಸರಾಯರಿಗೆ ಅಮೋಘ ಸ್ವಾಗತವು ದೊರೆಯಿತು. ಜನರು ಅವನ ಪಳಗಿದ ಭಾಷಣವನ್ನು ಕೇಳಿ, ನವಚೇತನದಿಂದ ಹುರಿದುಂಬಿ ಜಯಘೋಷಣ ಮಾಡಿದರು.

ಶೀನು ಹೊಸಪೇಟೆಯಲ್ಲಿದ್ದಾಗ, ಶ್ಯಾಮಸುಂದರರ ಕಾಗದ ಅಲ್ಲಿಗೆ ಬಂದಿತ್ತು. ಅವರು ಮದರಾಸಿಗೆ ಕಾಗದ ಬರೆದುದಕ್ಕೆ, ಗಜವದನ ರಾಯರು ಎಲ್ಲಾ ಅನುಕೂಲಗಳನ್ನು ಮಾಡಿಕೊಡುವುದಾಗಿ ಉತ್ತರ ಬರೆದಿರುವರೆಂದೂ, ಗೌರೀ ವಸಂತಿಯರನ್ನು ಯಾವಾಗ ಬೇಕಾದರೂ ಆ ಮಂಡಲಿಗೆ ಸೇರಿಸಬಹುದೆಂದು ಅವರು ವಿಚಾರಿಸಿ ತಿಳಿಸಿರುವರೆಂದೂ ಮುಂತಾಗಿ ತಿಳಿಸಿದ್ದರು. ಶೀನುವೂ ಶ್ಯಾಮಸುಂದರರಿಗೊಂದು ಪ್ರತ್ಯುತ್ತರವನ್ನು ಬರೆದು ಹಾಕಿದನು. ಅನಂತರ ಅವರ ಕಾರು ಹಂಪೆಯ ದಾರಿಯನ್ನು ಹಿಡಿಯಿತು.

ಶೀನುವಿನ ಕಾರು ಹೊಸಪೇಟೆಯ ರೈಲ್ವೇ ಗೇಟನ್ನು ದಾಟಿ ಸ್ವಲ್ಪ ಮುಂದೆ ಹೋಗುತ್ತಿದ್ದಾಗ, ಅವರ ಹಿಂದಿನಿಂದಲೇ ಇನ್ನೊಂದು ಜೀಪ್ ಕಾರು ವೇಗವಾಗಿ ಬರುತ್ತಿತ್ತು. ಡ್ರೈವರ್ ಸದಾಶಿವನು ಆ ಜೀಪ್ ಕಾರಿಗೆ ಸೈಡುಕೊಟ್ಟರೂ, ಅದು ಶೀನುವಿನ ಕಾರಿನ ಹಿಂದೆಯೇ ಬರುತ್ತಿತ್ತಲ್ಲದೆ, ದಾಟಿ ಮುಂಚೆ ಹೋಗಲಿಲ್ಲ. 'ಸೂಳೆಯಬಾವಿ'ಯ ಬಳಿಯಲ್ಲಿ ಶೀನು ಕಾರನ್ನು ನಿಲ್ಲಿಸಲಿಕ್ಕೆ ಹೇಳಿದನು. ಸದಾಶಿವನು ಕಾರನ್ನು ನಿಲ್ಲಿಸುತ್ತಲೇ, ಹಿಂದಿನಿಂದ ಜೀಪ್ ಕಾರೂ ನಿಂತಿತು. ಆ ಜೀಪ್ ಕಾರಿನೊಳಗೆ ಇಬ್ಬರೇ ಇಬ್ಬರಿದ್ದನು. ಇಬ್ಬರೂ ಖಾಕೀ ಪೋಷಾಕಿನಿಂದ ಭೂಷಿತರಾಗಿದ್ದರು. ಒಬ್ಬನು ಗೌರಕಾಯನಾದ ಸುಂದರ ಯುವಕ. ಇನ್ನೊಬ್ಬನು ಎಣ್ಣೆಗಪ್ಪಿನ ಬಣ್ಣದವ. ಅವನೂ ಯುವಕನೇ. ಈ ಎಣ್ಣೆಗಪ್ಪಿನವನೇ ಆ ಕಾರನ್ನು ನಡೆಸುತ್ತಿದ್ದನು

ಶೀನು ಕಾರಿನಿಂದ ಇಳಿಯುವುದಕ್ಕೂ, ಆ ಗೌರಾಂಗನು ಜೀಪ್ ಕಾರಿನಿಂದಿಳಿಯುವುದಕ್ಕೂ, ಒಂದೇ ಸಮಯವಾಗಿ, ಇಬ್ಬರೂ ಪರಸ್ಪರ ನೋಡಿಕೊಂಡರು. ನೋಡುತ್ತಲೇ ಯುವಕನ ಮುಖವು ಪರಿಚಯದ ನಗುವನ್ನು ತೋರಿತು. ಶೀನುವೂ ಪ್ರತಿನಗು ತೋರಿಸುತ್ತ— "ಓಹೊ! ವರದರಾಯರು! ನಮಸ್ಕಾರ." ಎಂದು ಕೈಮುಗಿದನು.

ವರದನು ಪ್ರತಿವಂದಿಸುತ್ತ— "ಏನಯ್ಯ! ಬಹಳ ದೊಡ್ಡ ಮನುಷ್ಯನಾಗಿ ಬಿಟ್ಟೆಯಲ್ಲ! ಏನು ನಿನ್ನ ಲೆಕ್ಚರು! ಏನು ನಿನ್ನ ವೇಷ! ದೊಡ್ಡ ಗಾಂಧೀವಾಲಾ ಆಗಿಬಿಟ್ಟೆಯಲ್ಲೋ! ಇದೇನು ಹಂಪಿ ಪ್ರಯಾಣವೊ?

ಇವರಿಲ್ಲ ಯಾರು ?" ಎನ್ನುತ್ತ ಕಾರಿನ ಬಳಿಗೆ ಬಂದು, ಒಳಗಿದ್ದವರನ್ನು ನೋಡಿಕೇಳಿದನು.

ಹಿಂದೆ ಶೀನು ಬಳ್ಳಾರಿಯಲ್ಲಿದ್ದಾಗ, ಮುಕುಂದರಾಯರ ಮಗ ವರದನ ಪರಿಚಯವು ಅವನಿಗಾಗಿತ್ತು. ಶೀನುವಿನ ಹೆಂಡತಿಯಾದ ಸುಂದರಿ ಈ ವರದನ ತಂಗಿ ಎಂದೂ ಅನಂತರ ಗೊತ್ತಾಗಿತ್ತು!

ತಂದೆಯ ಮಾತನ್ನು ಕೇಳದೆ ಅವನು ಮದರಾಸಿನಲ್ಲಿ ಸಿನೆಮಾ ನಟನಾಗಿ ಪ್ರಖ್ಯಾತನಾಗುತ್ತಿದ್ದ ಅವನೊಂದಿಗೆ ಸುಂದರಿಯೂ ವಿಖ್ಯಾತಳಾಗಿದ್ದಳು ಇತ್ತೀಚೆಗೆ ಸುಂದರಿ ಸಿನೆಮಾ ಭೂಮಿಯಿಂದ ನಿವೃತ್ತಳಾಗಿದ್ದಳಷ್ಟೆ? ವರದನು ಮಾತ್ರ "ಪ್ರಕೃತಿ ಕಳೋದ್ಧಾರಕ ಫಿಲಿಂ" ಸಂಸ್ಥೆಯಲ್ಲಿಯೇ ಇದ್ದನು ಈಗ ಅವನ ಹೆಸರೂ "ಡೈರೆಕ್ಟರ್ ವರದನ್" ಎಂದು ದೊಡ್ಡದಾಗಿತ್ತು.

ಈಗ ಅವನೊಂದು ಫಿಲಿಂ ನ ತದ್ರೂಪದ ಫೋಟೋ ಹಿಡಿಯಲಿಕ್ಕಾಗಿ ಹಂಪೆಗೆ ಬಂದಿದ್ದ. ಅವನ ಸಾಮಾನು ಸರಂಜಾಮುಗಳ ಲಾರಿ ಈ ಮೊದಲೇ ಹಂಪೆಗೆ ಹೋಗಿತ್ತು ಹೊಸಪೇಟೆಯಿಂದ ಏನೋ ಸಾಮಾನುಗಳನ್ನು ಕೊಂಡುಕೊಳ್ಳಲಿಕ್ಕಾಗಿ, ಅವನು ಹೊಸಪೇಟೆಗೆ ಬಂದಿದ್ದ. ಅಲ್ಲಿ ಸಾಹಿತ್ಯ ಸೇವಕನಾಗಿದ್ದ ಶೀನು, ಈಗ ದೇಶಸೇವಕ ಶ್ರೀನಿವಾಸರಾಯನಾಗಿ ಮೆರೆಯುವುದನ್ನು ನೋಡಿದ ಅವನೊಂದಿಗಿದ್ದ ಗೌರೀ ವಸಂತಿಯರನ್ನೂ ನೋಡದಿರಲಿಲ್ಲ. ಅವನ ವಿಚಾರವನ್ನು ಅಲ್ಪಸ್ವಲ್ಪ ಕೇಳಿಯೂ ತಿಳಿದಿದ್ದ. ಹಾಗೆಯೆ ಅವರ ಹಿಂದೆಯೇ ಹಂಪೆಗೆ ಹೊರಟಿದ್ದ.

ಆ ಹಳೆಯ ವರದನು ಅಕಸ್ಮಾತ್ತಾಗಿ ಹೀಗೆ ಮೊಳಕೆಯೊಡೆದು ನಿಂತುದನ್ನು ನೋಡಿ ಶೀನು ಬೆರಗಾದನು. ಬೆರಗನ್ನು ಕೂಡಲೇ ಇಳಿಸಿಕೊಂಡು,— "ನಾನೇನು ಮಹಾ ದೊಡ್ಡ ಮನುಷ್ಯನಾದುದು ? ಕೇವಲ ಸೇವಕನಾಗಿಯೇ ಇದ್ದೇನೆ ಆದರೆ ನೀವು ಈಗ ನಿಜವಾಗಿಯೂ ಭಾರೀ ದೊಡ್ಡವರಾಗಿದ್ದೀರಿ ! ನೋಡಿದರೆ ನೀವೀಗ ಮದ್ರಾಸಿನಲ್ಲಿಯೇ ಗಟ್ಟಿಯಾಗಿರುವ ಹಾಗಿದೆ?" ಎಂದನು.

ವರದನೆಂದ:— "ಹಾಗೆ ನೋಡಿದರೆ ಮನುಷ್ಯನು ಯಾವಾಗಲೂ ಚಿಕ್ಕವನೇ. ನೀನು ಹೇಳುವಂತೆ ನಾನು ಮದ್ರಾಸಿನಲ್ಲಿಯೇ ಗಟ್ಟಿ

ಯಾಗಿದ್ದೇನೆ. ಹೊಟ್ಟೆಗೆ ಎಲ್ಲಿ ದೊಡ್ಡ ದಾರಿ ಇದೆಯೋ ಅಲ್ಲಿಯೇ ಇರಬೇಕಷ್ಟೆ? ಅದಿರಲಿ; ನೀನು ಈ ಬಗೆಯ ವೇಷ ಭಾಷಣದೊಂದಿಗೆ ಹೊರಟಿರುವುದಕ್ಕೂ, ಈ ಮಹಿಳೆಯರು ಜತೆಗಿರುವುದಕ್ಕೂ ಸಂಬಂಧ ಹೇಳಲೇ ಇಲ್ಲವಲ್ಲ?"

"ಇವಳು ನನ್ನ ತಂಗಿ ಗೌರಿ. ಇವಳು ಜನವದನೀ ಪತ್ರಿಕೆಯ ಅಧಿಕಾರಿಗಳಾದ ಶ್ರೀಯುತ ಶ್ಯಾಮಸುಂದರರ ಮಗಳು ವಸಂತಿ ಇವರನ್ನು ಮದರಾಸಿಗೆ ಕರೆದುಕೊಂಡು ಹೋಗುತ್ತಿದ್ದೇನೆ ಚರಿತ್ರ ಪ್ರಸಿದ್ಧವಾದ ಹಂಪೆಯನ್ನು ನೋಡಿಕೊಂಡು ಮದರಾಸಿಗೆ ಹೋಗುತ್ತೇವೆ."

"ಹೌದು ಹೌದು. ನೋಡಬೇಕಾದ ಸ್ಥಳ. ಮದರಾಸಿನಲ್ಲಿ ಇವರನ್ನು ಎಲ್ಲಿ ಬಿಡುವುದು?"

"ವಸಂತಿಯ ಮಾವ ಅಡ್ವಕೇಟ್ ಗಜವದನರಾಯರು ಮದರಾಸಿನಲ್ಲಿದ್ದಾರೆ ಅಲ್ಲಿಯೇ ಇವರಿಬ್ಬರೂ ಇರುವರು ಮಹಿಳಾಭ್ಯುದಯ ಮಂಡಲಿಯ ಕಲಾಶಾಲೆಯಲ್ಲಿ ಇವರು ಸೇರುವರು."

"ಓಹೋ! ನಿನ್ನ ಹೆಂಡತಿ ಸುಂದರಿ ಅಲ್ಲಿಯೇ ಇದ್ದಾಳೆ!"

"ಹೌದಂತೆ!"

"ಗೊತ್ತೆ ನಿನಗೆ?"

"ಸ್ವಲ್ಪ ಸ್ವಲ್ಪ ಗೊತ್ತು."

"ಅಂದರೆ ಅವಳ ವಿಷಯ ಹೆಚ್ಚು ತಿಳಿಯಲು ನಿನಗೆ ಇಷ್ಟವಿಲ್ಲವೆಂದು ಕಾಣುತ್ತದೆ. ಅವಳೀಗ ಮೊದಲಿನಂತಿಲ್ಲ ಶೀನು. ತುಂಬ ಕೆಲಸ ಮಾಡುತ್ತಾಳೆ; ಕಲಾಶಾಲೆಯ ಹುಡುಗಿಯರಿಗೆ ನಾಟ್ಯ ಶಿಕ್ಷಣ ಹೇಳಿ ಕೊಡುತ್ತಾಳೆ. ಉಳಿದ ಸಮಯದಲ್ಲಿ ಬರ್ಮಾ ಎವಾಕ್ಯುವೇಶನ್ನಿಗೆ ಹಣ ವಸೂಲು ಮಾಡಲು ಹೊರಡುತ್ತಾಳೆ. ಇನ್ನೂ ಏನೇನೋ ಪುಣ್ಯ ಕಾರ್ಯಕ್ಕೆ ತೊಡಗಿದ್ದಾಳೆ. ಎಲ್ಲಾ ನಿನ್ನ ಹಾಗೆಯೇ. ಈಗ ತುಂಬಾ ಸೇವಾತತ್ಪರಳಾಗಿ ಬಿಟ್ಟಿದ್ದಾಳಯ್ಯ."

"ಆಗಲಿ, ಒಳ್ಳೇದು ತಾನೆ!"

"ನಾನು ಅವಳನ್ನು ನಮ್ಮ ಸಿನೇಮಾ ಸಂಸ್ಥೆಯಲ್ಲಿಯೇ ಇರುವಂತೆ ಎಷ್ಟೋ ಒತ್ತಾಯಪಡಿಸಿದೆ. ಕೇಳಲೇ ಇಲ್ಲ"

"ಓಹೋ" ಎಂದೆಳೆದು ಶೀನು, ವಿಷಯವನ್ನು ತಿರುಗಿಸಿ—"ಗೌರಿ, ವಸಂತಿ, ಬನ್ನಿ. ಆ ಸೂಳೆಯಬಾವಿಯನ್ನು ನೋಡಿಕೊಂಡು ಬರೋಣ" ಎಂದನು.

## ೨೦

ಶೀನುವಿಗೆ ವರದನ ಗುಣದ ಅನುಭವವು ಸುಮಾರಾಗಿದ್ದುದರಿಂದ, ಅವನೊಡನೆ ಹೆಚ್ಚು ಮಾತು ಬೆಳೆಸಲು ಇಷ್ಟವಿರಲಿಲ್ಲ. ಅವನು ಹೇಳಿದುದನ್ನು ಕೇಳಿ ಗೌರಿ "ಒಂದು ಬಾವಿಯಲ್ಲಿ ಅಂತಹ ವಿಶೇಷವೇನಿದೆ ಅಣ್ಣಾ?" ಎನ್ನುತ್ತ ಕಾರಿನಿಂದಿಳಿದಳು. ವಸಂತಿಯೂ ಕೇಶವನೂ ಅವನ ಹಿಂದೆಯೇ ಇಳಿದರು.

"ನೋಡಬೇಕಾದ ಬಾವಿಯಿದು. ಎಷ್ಟು ಕಲಾಮಯವಾಗಿ ಕಟ್ಟಲಾಗಿದೆ ಗೊತ್ತೆ?" ಎಂದಂದು ಶೀನು ಆ ಕಡೆಗೆ ತಿರುಗಿದನು.

ಆಗ ವರದನು— "ಸರಿ, ನಾನು ಹೋಗುತ್ತೇನೆ. ನೀವು ಎರಡು ಮೂರು ದಿನ ಹಂಪೆಯಲ್ಲಿರುತ್ತೀರಷ್ಟೆ?" ಎಂದು ಕೇಳಿದನು.

"ಇರುತ್ತೇನೆ" ಎಂದನು ಶೀನು.

"ನಾಳೆ ನಿನ್ನ ಭಾಷಣವನ್ನು ಕೇಳಲಿಕ್ಕೆ ನಾನೂ ಬರುತ್ತೇನೆ. ನಾಳೆ ನಾವು ವಿಜಯವಿಠ್ಠಲರಾಯನ ಗುಡಿಯ ರಂಗಮಂಟಪದ ಫೋಟೋಗಳನ್ನು ಫಿಲಿಂ ತೆಗೆಯುತ್ತೇವೆ ಅಲ್ಲಿ ನಿನ್ನ ತಂಗಿ ಗೌರೀದೇವಿಯ ನರ್ತನ ದೃಶ್ಯ ಒಂದು ಛಾನ್ಸ್ ಕೊಡಿಸುವಿಯಾ?" ಎಂದು ವರದನು ಮುಖ್ಯ ವಿಷಯವನ್ನು ತೆಗೆದನು.

ಇವನು ಸ್ವಲ್ಪದರಲ್ಲಿ ಬಿಡುವ ಹಾಗಿಲ್ಲವೆಂದು ಶೀನುವಿಗೆ ತೋರಿತು — "ಅಷ್ಟುಮಟ್ಟಿಗೆ ಇವರಿಗೆ ಅಭ್ಯಾಸವಿಲ್ಲ ವರದರಾಯರೆ! ಕಲಿತು ಪಳಗಲಿ; ಮುಂದೆ ನೋಡೋಣ" ಎಂದನು

"ಕಲಿತಷ್ಟೇ ಸಾಕಲ್ಲಾ! ನಿನ್ನ ತಂಗಿ ಗೌರೀದೇವಿಯ ನಾಟ್ಯ ಕೌಶಲವನ್ನು ನಾನು ಕಣ್ಣಾರೆ ಕಾಣದಿದ್ದರೂ ಪತ್ರಿಕೆಯ ಮೂಲಕ ನಾನು ಚೆನ್ನಾಗಿ ಕೇಳಿದ್ದೇನಯ್ಯ" ವರದನೆಂದನು.

"ಪತ್ರಿಕೆಯಲ್ಲಿ ಸಣ್ಣದಿದ್ದರೆ ದೊಡ್ಡದಾಗಿ ಹಾಕುತ್ತಾರೆ. ಅದೆಲ್ಲ ಈಗೇನೂ ಬೇಡ ವರದರಾಯರೆ, ಕ್ಷಮಿಸಿ ! ನಮ್ಮಷ್ಟಕ್ಕೆ ನಾವು ಹೋಗುತ್ತೇವೆ.'' ಎಂದು ಶೀನು ಬಾವಿಯ ಕಡೆಗೆ ಹೆಜ್ಜೆ ಹಾಕತೊಡಗಿದನು.

"ನಿಲ್ಲಪ್ಪಾ, ಅಷ್ಟು ಖಂಡಿತವಾಗಿ ಹೇಳಿದರೆ ಹೇಗೆ? ಕಲಾವಿದನಾದ ನೀನೇ ಕಲೆಗೆ ಪ್ರತಿಕೂಲನಾಗುವುದೆ? ಇವರನ್ನೆ ಕೇಳುವ," ಎಂದು ವರದನು ಗೌರಿಯನ್ನು ನೋಡುತ್ತ— " ಏನಮ್ಮ, ಫಿಲಿಂನಲ್ಲಿ ನಟಿಸುವುದು ಕುಂದಕವೆಂದು ನೀವೂ ಭಾವಿಸುವಿರಾ ? ಎಂತೆಂತಹ.................." ಎನ್ನುತ್ತಿದ್ದಾಗ,

ಗೌರಿ ತಟಕ್ಕನೆ ಉತ್ತರವಿತ್ತಳು:— " ನಮಗೆ ಅದೆಲ್ಲ ಗೊತ್ತಿಲ್ಲ ಸ್ವಾಮಿ! ಅಣ್ಣನ ಇಷ್ಟಕ್ಕೆ ವಿರುದ್ಧವಾಗಿ ನಾವೇನೂ ಮಾಡಲಾರೆವು. ಫಿಲಿಂನಲ್ಲಿ ಸೇರುವ ಯೋಚನೆಯೇ ನಮಗಿಲ್ಲ! ಬಾರೇ ವಸಂತಿ!——" ಎಂದು ನುಡಿದು, ವಸಂತಿಯ ಕೈಯನ್ನು ಹಿಡಿದು ಮುಂದಕ್ಕೆ ಹೆಜ್ಜೆ ತೆಗೆದಳು.

ಕೂಡಲೇ ವಸಂತಿ ಗೌರಿಯಿಂದ ತನ್ನ ಕೈಯನ್ನು ಬಿಡಿಸಿಕೊಂಡು ನಿಂತು, ವರದನನ್ನು ಮುಗುಳ್ನಗುತ್ತ "ಅವರ ಮಾತು ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿ ಫಿಲಿಂನಲ್ಲಿ ನಟಿಸುವುದೆಂದರೆ ನಟನೆಗೆ ಸಾರ್ಥಕವೆಂದು ನನ್ನ ಅಭಿಪ್ರಾಯವಿದೆ'' ಎಂದಳು.

ಅವಳ ಆತುರವನ್ನು ಕಂಡುಹಿಡಿದ ವರದನು ನಗುತ್ತ— " ಭೇಷ್ ! ಹಾಗನ್ನಿ ! ನಾಳೆಗೆ ನೀವು ನಿಮ್ಮ ಗೆಳತಿಯನ್ನೂ ಒಪ್ಪಿಸಿ ಬಿಡುವಿರೆಂದು ನಾನು ನಂಬಲೆ?''

ವಸಂತಿ ಗೌರಿಯನ್ನು ನೋಡಿದಳು. ಗೌರಿ ಶೀನೂವಿನ ಹಿಂದೆ, ಈ ಮಾತನ್ನು ಲಕ್ಷ್ಯಮಾಡದೆಯೇ ಹೋಗುತ್ತಿದ್ದಳು. ಸದಾಶಿವನೂ ಕೇಶವನೂ ವಸಂತಿಯ ಬಳಿಯಲ್ಲಿ ನಿಂತಿದ್ದರು ''ಸರಿ ನನ್ನಿಂದಾದಷ್ಟು ಹೇಳಿ ನೋಡುತ್ತೇನೆ'' ಎಂದಳು ವಸಂತಿ.

''ಹೇಗಾದರೂ ಒಪ್ಪಿಸಲೇ ಬೇಕು ನೀವು. ನಾವೀಗ ಹಿಡಿಯುವ ಚಿತ್ರಕ್ಕೆ ನಾಯಕಿಯ ಪಾತ್ರವೇ ಸರಿಯಾಗಿಲ್ಲ ಒಪ್ಪಿಕೊಂಡವಳು ಸಮಯಕ್ಕೆ ನಿರಾಕರಿಸಿ ಹೋಗಿಬಿಟ್ಟಳು. ಈಗ ಇಲ್ಲಿ ಹಿಡಿಯುವ ಫಿಲಿಂನಲ್ಲಿಯೇ ನಾಯಕಿಯೂ ಸೇರಿಬಿಟ್ಟರೆ ತುಂಬ ಒಳ್ಳೆಯದಾಗುತ್ತಿತ್ತು.

ಇರಲಿ  ನಾಳೆ ನಿಮಗೆ ಸಿಕ್ಕುತ್ತೇನೆ" ಎಂದೆಂದು ವರದನು ತನ್ನ ಜೀಪಿನ ಕಡೆಗೆ ನಡೆದನು  ಮರುನಿಮಿಷವೇ ಆ ಕಾರು ಭಯಂಕರ ಶಬ್ದದಿಂದ, ಆ ಚಾರಿತ್ರಿಕ ಶಿಥಿಲ ಭೂಮಿಯನ್ನು ನಡುಗಿಸಿಕೊಂಡು, ಓಡಿ ಹೋಯಿತು. ವಸಂತಿ ಕೇಶವ ಸದಾಶಿವರು, ಶೀನೂ ಗೌರಿಯರನ್ನು ಕೂಡಿದರು.

ಆಗ ಗೌರಿ ವಸಂತಿಯನ್ನು ಕುರಿತು,—"ವಸಂತಿ, ನೀನು ಸುಮ್ಮ ನಿರಬಹುದಿತ್ತು. ಬೇಕಂತಲೇ ಅವನಿಗೆ ಎಡೆಮಾಡಿ ಕೊಡಬಹುದೆ? ನಮಗೇಕೆ ಅವನ ಫಿಲಿಂನ ಗೊಡವೆ?'' ಎಂದಳು

ಜನ್ಮತಃ ಶ್ರೀಮಂತಳಲ್ಲವೇ ವಸಂತಿ? ಅವಳಿಗೆ ಒಳಗೊಳಗೆ ಸಿಟ್ಟು ಉಕ್ಕಿತು. ಮೊದಲೇ ಯಾರಿಗೂ ತಿಳಿಯದಂತಹ ಅದೊಂದು ಅಸೂಯೆ ಅವಳ ಹೃದಯದೊಳಗೆ ಹುಟ್ಟಿತ್ತು. ಎಲ್ಲರೂ ಗೌರಿಗೇ ಮೊದಲನೆಯ ಸ್ಥಾನವನ್ನೂ ಅವಳಿಗೆ ಎರಡನೆಯ ಸ್ಥಾನವನ್ನೂ ಕೊಡುತ್ತಾರಲ್ಲವೆ? ಆ ಡೈರೆಕ್ಟರ್ ವರದನು ಕೂಡಾ ಹಾಗೆಯೇ, ಎಲ್ಲಾ ಗೌರಿಯನ್ನು ನಿರ್ದೇಶಿಸಿಯೇ ಮಾತಾಡಿದ. ವಸಂತಿಯ ಮೇಲೆ ಅವನಿಗೆ ಲಕ್ಷ್ಯವಿದ್ದಂತೆಯೇ ಇಲ್ಲ. ಇದಕ್ಕೆ ಕಾರಣವೇನು? ಗೌರಿಯ ಕೀರ್ತಿಯೆ? ಹೇಗಾದರೂ ಗೌರಿಗಿಂತ ತಾನು ಮೇಲೇರಿ ಬಿಡಬೇಕೆಂದು, ವಸಂತಿಯ ಹೃದಯವು ಬಯಸುತ್ತಿತ್ತು

ವಸಂತಿ ಉಕ್ಕುತ್ತಿರುವ ಸಿಟ್ಟನ್ನು ಹತ್ತಿಕ್ಕುತ್ತಿಕೊಂಡು—"ನಾನೇನು ಹಾಗಂದೆ? ಅವರು ನಮ್ಮನ್ನು ಕುರಿತು ಹಾಗೆ ಕೇಳಿದ್ದೇ ಹೆಚ್ಚಲ್ಲವೆ? ಅದಕ್ಕೆ ಹಾಗೆ ಒಮ್ಮೆಗೇ ನಿರಾಕರಿಸಿ ಬಿಡುವುದೆ? ಫಿಲಿಂನಲ್ಲಿ ನಟಿಸುವುದರಿಂದ ಏನು ಕಡಮೆಯಾಗುವುದೋ ನನಗೆ ಗೊತ್ತಾಗುವುದಿಲ್ಲ. ಒಂದು ನೋಡಿದರೆ ಅಂತಹ ಸುಯೋಗ ನಮಗೆ ದೊರಕುವುದೇ ಕಷ್ಟ. ದೊರಕಿದರೂ ಮೊದಲಿಗೇ ಕಥಾನಾಯಕಿಯ ಪಾತ್ರವು ಸಿಕ್ಕೀತೇನು?" ಎಂದು ಹೇಳಲಾರಂಭಿಸಿದಳು.

ಗೌರಿ—"ಓಹೋ! ನಿನಗೆ ಸಿನಿಮಾದಲ್ಲಿ ನಟಿಸುವ ಆತುರ ತುಂಬಾ ಇರುವ ಹಾಗಿದೆಯಲ್ಲಾ! ಆದರೆ ವಸಂತಿ, ಈಗಲೇ ನಾವು ಆತುರ ಪಡಬಾರದು. ನಾವಿನ್ನೂ ಕಲಿಯುವಂಥಾದ್ದು ತುಂಬಾ ಇದೆ.''

"ಎಷ್ಟು ಕಲಿತಿದ್ದೇವೋ ಅಷ್ಟೇ ಸಾಕೆಂದು ಡೈರೆಕ್ಟರೇ ಹೇಳುವಾಗ ನಮಗೇನು?" ಎಂದು ಕೇಳಿದಳು ವಸಂತಿ.

"ಹಾಗಾದರೆ ನಾಳೆ ನೀನು ನಟನವಾಡುತ್ತೀಯಾ ?"

"ನೀನೂ ಸೇರಿದರೆ ಆಡೋಣವೆಂದೇ ಇದೆ — ಏನು ಶೀನಣ್ಣ ? ಆಗದೆ?—" ಎಂದು ವಸಂತಿ, ಈ ಸಂಭಾಷಣೆಗಳನ್ನು ಕೇಳುತ್ತಲೇ ಇದ್ದ ಶೀನುವನ್ನು ಕುರಿತು ಕೇಳಿದಳು

"ಆಗವೆಂದೇ ನಾನು ಹೇಳುತ್ತೇನೆ ವಸಂತಿ ಒಂದು ದಾರಿಯಲ್ಲಿ ಒಂದು ಗುರಿಯನ್ನು ಹಿಡಿದು ಹೋಗುವಾಗ, ನಡುವೆ ಚಿತ್ತಚಾಂಚಲ್ಯ ದಿಂದ ಇನ್ನೊಂದು ಗುರಿಯ ಕಡೆಗೆ ತಿರುಗುವುದು ಸರಿಯಲ್ಲ. ನಿನ್ನ ತಂದೆಯೂ ಇದಕ್ಕೆ ಒಪ್ಪಲಾರರು"

ಆಗ ಹುಡುಗ ಕೇಶವನು— "ಅಪ್ಪ ಖಂಡಿತ ಒಪ್ಪಿಯಾರು ಶೀನಣ್ಣಾ ! ಅಕ್ಕ ಸಿನಿಮಾದಲ್ಲಿ ಸೇರಿ ಮುಂದೆ ಬರಬೇಕೆಂದು ಅಪ್ಪ ಎರಡು ಮೂರು ಬಾರಿ ಹೇಳಿದ್ದು ನಾನು ಕೇಳಿದ್ದೇನೆ. ಸಿನಿಮಾದಲ್ಲಿ ಸೇರಿದ್ದು ಕೇಳಿದರೆ ಅಪ್ಪನಿಗೆ ತುಂಬಾ ಸಂತೋಷವಾದೀತು." ಎಂದು ತನ್ನ ಚಪಲ ಬುದ್ಧಿಯ ತೀರ್ಮಾನ ಹೇಳಿದುದನ್ನು ಕೇಳಿ ಶೀನುವಿಗೆ ನಗು ಬಂತು.

ವಸಂತಿ ಏನೋ ಯೋಚನೆ ಮಾಡುತ್ತಿದ್ದಳು. "ಈ ವಿಷವನ್ನು ನನ್ನ ತಂದೆಗೆ ಈ ದಿನವೇ ಕಾಗದ ಬರೆಯುತ್ತೇನೆ." ಎಂದು ತೀರ್ಮಾನಿಸಿ ಕೊಂಡಳು.

ಎಲ್ಲರ ಮನಸ್ಸಿನಲ್ಲಿಯೂ ಇದೊಂದು ಅನಿರೀಕ್ಷಿತ ಪ್ರಶ್ನೆ ನಡುವೇ ಸಿಕ್ಕಿಕೊಂಡು, ಕುರುಕುರು ಮಾಡಲಾರಂಭಿಸಿ ಬಿಟ್ಟುದರಿಂದ, ಮನಸ್ಸು ಗೊಟ್ಟು ಆನಂದವನ್ನು ಉಂಟಿಕೊಂಡು. ಆ ಸೂಳೆಯಬಾವಿಯ ಕಲಾ ಕೌಶಲ್ಯವನ್ನು ನೋಡಿಕೊಳ್ಳಲು ಅವರಿಂದಾಗಲಿಲ್ಲ. ಶೀನು ಆ ಬಾವಿ ಯೊಳಗಿನ ಕಲ್ಲುಗಳು, ಪಡಿಕಟ್ಟುಗಳು, ಕಮಾನುಗಳು, ಮಂಟಪ ಗೂಡು ಗಳು ಮೊದಲಾದುವನ್ನು ತೋರಿಸಿ ತೋರಿಸಿ, ಅದರ ಕಥೆಯನ್ನೂ ಹೇಳಿ ದನು. ಗೌರಿಯೊಬ್ಬಳೇ ಅದನ್ನು ಲಕ್ಷ್ಯಗೊಟ್ಟು ಕೇಳಿರಬೇಕು.

ಅನಂತರ ಎಲ್ಲರೂ ಕಾರಿನಲ್ಲಿ ಆರೋಹಣ ಮಾಡಿಕೊಂಡು ಅಲ್ಲಿಂದ ಹೊರಟರು.

ಪುರಾತನ ಪ್ರಸಿದ್ಧವಾದ ರಾಜಧಾನಿ ಹಂಪೆ. ಜರಿದುಬಿದ್ದ ಕೋಟೆಗಳ ಗೋಡೆಗಳನ್ನೂ, ಪಾಳು ಬಿದ್ದ ನಾನಾ ರಾಜಭವನಗಳನ್ನೂ ನಗರ ಕುರುಹುಗಳನ್ನೂ, ಗೂಗೆ, ಗುಬ್ಬಿಗಳ ವಾಸಸ್ಥಳವಾಗಿ, ಪೊದರು ಗಳ ನಡುವೆ ಎದ್ದೆದ್ದು ನಿಂತಿರುವ ಗುಡಿ–ದೇಗುಲಗಳ ಶಿಥಿಲ ಸ್ವರೂಪ ಗಳನ್ನೂ ನೋಡುತ್ತ, ಕಾಲದೇವನ ತಾಂಡವ ಲೀಲೆಗಾಗಿ ಆಶ್ಚರ್ಯ ಪಡುತ್ತ, ಅವರು ನಿಧಾನವಾಗಿ ಅಲ್ಲಲ್ಲಿ ನಿಂತು, ಸುತ್ತಿ ಬಳಸಿಕೊಂಡೇ ಹೋದರು. ಆ ಶಾಪಗ್ರಸ್ತ ನಗರವನ್ನು ನೋಡುತ್ತಿರಲು, ಶೀನು ಗೌರಿ ಯರ ಹೃದಯವು ಕರುಣಾರಸದಿಂದ ತುಂಬಿತು ಕಣ್ಣೀರು ಚೆಲ್ಲಿತು. ಹೀಗೆ ಪರವಶರಾಗಿ ನೋಡುತ್ತಾ, ಸಾಯಂಕಾಲದಲ್ಲಿ ಅವರ ಕಾರು, ಹಂಪೆಯ ವಿರೂಪಾಕ್ಷಾಲಯದ ಉದ್ದಂಡವಾದ ತೇರು ಬೀದಿಯಲ್ಲಿ ಬಂದು ನಿಂತಿತು.

ಈ ದಿನ ಶ್ರೀನಿವಾಸರಾಯರು ಹಂಪೆಗೆ ಬರುವರೆಂಬ ಸುದ್ದಿ ಎರಡು ದಿನಗಳ ಕೆಳಗೇ ಹಂಪೆಯಲ್ಲಿ ಹರಡಿಸಲ್ಪಟ್ಟಿತ್ತು ಅಲ್ಲಿ ಅವನು "ವಿದ್ಯಾ ನಗರ ಸ್ಥಾಪನೆ'' ಎಂಬ ವಿಷಯದ ಮೇಲೆ ಭಾಷಣ ಮಾಡುವನೆಂದೂ ಪ್ರಕಟನೆ ಮಾಡಲ್ಪಟ್ಟಿತ್ತು. ಆದುದರಿಂದ ತುಂಗಭದ್ರೆಯ ಆಚೀಚಿನ ಗ್ರಾಮದವರು, ಮರುದಿನ ಳ ಸಂಜೆ ಜರುಗುವ ಅವನ ಭಾಷಣವನ್ನು ಕೇಳಬೇಕೆಂಬ ಕುತೂಹಲದಿಂದ ಕಾದುಕೊಂಡಿದ್ದರು.

ಶೀನೂ ಪರಿವಾರದವರು ಆ ದಿನ ಹಂಪೇಗೌಡರ ಆತಿಥ್ಯದಲ್ಲಿದ್ದು, ದೇವಾಲಯದ ಸುತ್ತುಮುತ್ತಣ ವಠಾರಗಳನ್ನೆಲ್ಲ ಸಂದರ್ಶನ ಮಾಡಿದರು. ಶೀನು ಈ ಮೊದಲೊಮ್ಮೆ ಹಂಪೆಯನ್ನೆಲ್ಲ ಸುತ್ತಾಡಿ ನೋಡಿದವನಾದುದ ರಿಂದ, ಅಲ್ಲಲ್ಲಿಯ ಸ್ಥಳ ಚರಿತ್ರೆಯ ವಿಶೇಷಗಳನ್ನು ತನ್ನವರಿಗೆ ಬಣ್ಣಿಸಿ ಬಣ್ಣಿಸಿ ಹೇಳಿದನು ಪ್ರಾಚೀನ ಸನ್ನಿಧಿಯೆಂದು ಹೆಸರಾಂತ ಶ್ರೀ. ವಿರೂಪಾಕ್ಷದೇವರ ದರ್ಶನ ಮಾಡಿ, ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಕೊಂಡರು ಹೀಗೆ ಆ ರಾತ್ರಿಯನ್ನು ಅಲ್ಲಿಯೇ 'ಕಳೆದು, ಮರುದಿನ ಬೆಳಗಾದ ಮೇಲೆ, ತುಂಗಭದ್ರೆಯ ತೀರದ ಪಾಳು ದೇವಾಲಯಗಳನ್ನು ನೋಡಲಿಕ್ಕಾಗಿ ಅವರು ಹೊರಟರು.

ತುಂಗಭದ್ರಾನದಿ "ಚಕ್ರತೀರ್ಥ"ವೆನಿಸುವಲ್ಲಿ ಕಾಣುವ ರುದ್ರ ಮನೋಹರ ದೃಶ್ಯವನ್ನು ನೋಡಿ ಎಲ್ಲರೂ ಬೆರಗಾದರು. ಹಾಗೆಯೇ

ಕೋದಂಡ ರಾಮನ ಗುಡಿಯನ್ನು ಬಳಸಿದರು. ಅಲ್ಲಿಂದ ಗುಡ್ಡಗಳ ನಡುವಿನ ದಾರಿಯಲ್ಲಿ ನಡೆಯುತ್ತ, ಮಧ್ಯಾಹ್ನವಾಗುವಾಗ, ಅದ್ಭುತ ರಚನೆಯಾದ ವಿಜಯ ವಿಠ್ಠಲರಾಯನ ಗುಡಿಯನ್ನು ಮುಟ್ಟಿದರು.

ಆ ಗುಡಿಯ ಬದಿಯಲ್ಲಿ ಒಂದು ಲಾರಿಯೂ, ಒಂದು ಜೀಪ್ ಕಾರೂ ನಿಂತಿದ್ದುವು ಸ್ವಲ್ಪ ದೂರದಲ್ಲಿ ಹಳ್ಳಿಯ ಕೆಲ ಜನರು ನಿಂತು ಆ ವಾಹನಗಳನ್ನು ವಿಂತದಿಟ್ಟಿಯಿಂದ ದಿಟ್ಟಿಸುತ್ತಿದ್ದರು. ಲಾರಿಯ ಬಳಿಯಿಂದಾಗಿ ಶೀನುವೇ ಮೊದಲಾದವರು ಗುಡಿಯ ಪಟಾಂಗಣದೊಳಗೆ ಹೊಕ್ಕರು. ಅಲ್ಲಿ ರಮ್ಯವಾದ ವಸಂತ ಮಂಟಪದಿದಿರಿನಲ್ಲಿ, ಯಂತ್ರಮಯ ಫಿಲಿಂ ಕ್ಯಾಮರಾ, ಸೌಂಡ್ ಬಾಕ್ಸ್ ಮೊದಲಾದವುಗಳನ್ನಿಟ್ಟುಕೊಂಡು, ವರದನೇ ಮೊದಲಾದ ಏಳೆಂಟು ಜನರು ಏನೇನೋ ಗುರಿ ನೋಡುತ್ತಿದ್ದರು.

## ೨೧

ಶೀನುವನ್ನು ನೋಡುತ್ತಲೇ ವರದನು ನಗುನಗುತ್ತ ಮುಂದೆ ಬಂದು,--- ''ಹೋ! ಬಂದಿರಾ! ಬನ್ನಿ ಬನ್ನಿ! ನಿಮಗಾಗಿಯೇ ಕಾದಿದ್ದೇನೆ ಎಲ್ಲಾ ಸಿದ್ಧವಾಗಿದೆ. ಒಂದೇ ಗಂಟೆಯೊಳಗೆ ಕೆಲಸ ಮುಗಿಸಿಬಿಡಬಹುದು. ಇದೇ ಈ ಸುಂದರವಾದ ವಸಂತ ಮಂಟಪದಲ್ಲಿ, ನೃತ್ಯ ದೃಶ್ಯವಾಗಲಿ. ಇವರು ಮೈಸೂರಿನಲ್ಲಿ ನರ್ತಿಸಿದರಲ್ಲಾ, ಕಾಳಿಂಗ ಮರ್ದನ—ಅದನ್ನೆ ನರ್ತಿಸಲಿ. ನಮ್ಮ ಹಿಮ್ಮೇಳದ ಆರ್ಕೆಸ್ಟ್ರಾ ಸಿದ್ಧವಿದೆ. ಇಲ್ಲಿಗೆ ಹೊರಗಿನವರಾರೂ ಬಾರದಂತೆ ಏರ್ಪಾಡು ಮಾಡುತ್ತೇನೆ ಈಗ ಒಂದೇ ಗಂಟೆ ಸಹಾಯ ಮಾಡಿದರೆ ಸಾಕು; ನಾಯಕಿಯಾಗಿ ಬರುವ ವಿಷಯವನ್ನು ನಿಧಾನವಾಗಿ ಮದ್ರಾಸಿನಲ್ಲಿ ಮಾತಾಡೋಣ. ಈಗ ಒಂದು ಗಂಟೆಗೆ ಒಂದು ಸಾವಿರ ರೂಪಾಯಿ ತೆಗೆದುಕೊಳ್ಳಿ! ಹೂಂ, ಚೆಕ್ಕು ಯಾರ ಹೆಸರಿಗೆ ಬರೆಯಲಿ?—" ಎಂದು ಚಟಚಟಸಿ ಹೇಳುತ್ತಾ, ಜೇಬಿನಿಂದ ಚೆಕ್ಕುಬುಕ್ಕನ್ನೂ, ಬಂಗಾರದ ಕ್ಲಿಪ್ಪು ನಿಬ್ಬುಗಳ ಪೇನಾವನ್ನೂ ಕೈಗೆತ್ತಿಕೊಂಡನು.

ಶೀನು ಒಮ್ಮೆಲೆ ಬೆಕ್ಕಸಗೊಂಡು— "ಎಲ! ನಮ್ಮ ಅನುಮತಿ ಇಲ್ಲದೆಯೇ ಬಹಳ ಮುಂದುವರಿದು ಬಿಡುತ್ತೀರಲ್ಲ ವರದರಾಯರೆ? ಯಾರು ನಿಮ್ಮ ಫಿಲಿಂನಲ್ಲಿ ಸೇರುವೆನೆಂದದ್ದು?" ಎಂದನು.

"ವಸಂತೀದೇವಿ ನಿನ್ನೆಯೇ ಭರವಸೆ ಇತ್ತಿದ್ದಾರೆ. ಗೌರೀದೇವಿಯನ್ನೂ ಒಪ್ಪಿಸುವುದಾಗಿ ಹೇಳಿದ್ದಾರೆ ಯಾಕೆ? ಒಪ್ಪುವುದಿಲ್ಲವೆ? ಈ ವರೆಗೆ ಒಪ್ಪದಿದ್ದರೂ ಈಗಾದರೂ ಒಪ್ಪಬಹುದಲ್ಲ?" ಎಂದು ವರದನು ವಸಂತಿಯ ಮುಖವನ್ನೂ ಗೌರಿಯ ಮುಖವನ್ನೂ ಮಾರಿಮಾರಿ ನೋಡಿದನು.

"ಹಿಂದೆ ಮುಂದೆ ಒಂದೂ ಇಲ್ಲದೆ ಒಮ್ಮೆಲೆ ನಟಿಸುವುದೆಂದರೆ— ಏನರ್ಥ ವರದರಾಯರೆ! ನಮಗೆ ಈ ಯೋಚನೆಯೇ ಇಲ್ಲಯ್ಯ!" ಎಂದನು ಖಂಡಿತ ಸ್ವರದಿಂದ ಶೀನು

"ಕೋಪಿಸಬೇಡ ಶೀನು. ನಿನಗಿಲ್ಲದಿದ್ದರೂ, ಇವರ ಉತ್ಸಾಹಕ್ಕೆ ನೀನು ತಡೆಹಾಕಬಹುದೆ? ನಮ್ಮ ಪ್ರಕೃತಿ ಕಳೋದ್ಧಾರಕ ಫಿಲಿಂ ಸಂಸ್ಥೆ ಎಂದರೆ, ಅಂತಿಂತಹ ಹಾಳುಪೋಲಿಯೆಂದು ತಿಳಿಯಬೇಡ. ನಿನ್ನ ಹಳ್ಳಿಗಾಡಿನ ಹೆಂಡತಿ ಸುಂದರಿಯಂತಹಳನ್ನೆ ವಿಖ್ಯಾತಗೊಳಿಸಿದ ಕಂಪೆನಿಯಲ್ಲವೆ? ನಮ್ಮ ಕಂಪೆನಿಯಲ್ಲಿ ಕಲೆಗೆ ಒಳ್ಳೆಯ ಗೌರವವುಂಟು ಶೀನು. ನಟೀನಟರ ಮಾನಮರ್ಯಾದೆಯ ವಿಷಯದಲ್ಲಿ ತುಂಬಾ ಎಚ್ಚರಿಕೆಯ ನಿಯಮಾವಳಿಗಳುಂಟು ಇಂತಹ ಕಂಪೆನಿಯಲ್ಲಿ ನಟನೆ ಕೊಟ್ಟದಾದರೆ, ಕಲೆಯ ಮತ್ತು ಕಲಾವಿದೆಯ ಗೌರವವೂ ಬೆಳೆಯುತ್ತದೆ. ಸರಿ, ಗೌರೀ–ವಸಂತಿಯರ ಹೆಸರಿನಲ್ಲಿ ಐನೂರು ಐನೂರರ ಎರಡು ಚೆಕ್ಕು ಬರೆಯುತ್ತೇನೆ ..............."

"ಬೇಡ ಬೇಡ! ನಾನಿಲ್ಲವೇ ಇಲ್ಲ!—" ಎಂದು ಗೌರಿ ಚಿಗರಿಯಂತೆ ದೂರ ಸಿಡಿದು ಹೋದಳು

ಆ ನಿಮಿಷದಲ್ಲಿ ಕಣ್ಣಿಗೆ ಮಿಂಚಿದ ಅವಳ ಅಂಗಚಲನೆಯ ಕಲಾ ವಿನ್ಯಾಸವನ್ನು ಕಣ್ಣಿಟ್ಟು ಕಂಡು ವರದನೆಂದ-- "ಗೌರೀದೇವಿ! ಒಳ್ಳೆಯ ಸಂದರ್ಭವನ್ನು ನೀವು ಜಾರಬಿಡುತ್ತೀರಿ!"

"ಇಚ್ಛೆ ಇಲ್ಲದ ವಸ್ತು ಕಳೆದುಹೋದರೇನು?— ಕಾಣದೆ ಹೋದರೇನು?" ಎಂದಂದು ಗೌರಿ ಮುಖವನ್ನು ಆ ಕಡೆಗೆ ತಿರುಗಿಸಿಕೊಂಡಳು.

ಒಂದೆರಡು ಕ್ಷಣ ವರದನ ಕಣ್ಣಿನಲ್ಲಿ ನಿರಾಸೆಯ ಮಂಜು ಮುಸುಕಿತು. ವಸಂತಿಯ ಕಡೆಗೆ ತಿರುಗಿ ನೋಡಿದನು.

ದೇವಾಲಯದ ದೊಡ್ಡ ಪೌಳೀಗೋಡೆಯ ಬದಿಯಲ್ಲಿ ಶಿಲ್ಪಕಳಾಮಯವಾದೊಂದು ಕಲ್ಲಕಂಬಕ್ಕೆ ವೈಯಾನಿಸಿಕೊಂಡು ಸುಮ್ಮನೆ ನಿಂತಿದ್ದಳು ವಸಂತಿ ಅವಳ ಮನಸ್ಸು ಫಿಲಿಂ ಚಕ್ರದೊಳಗೆ ತಿರುಗುತ್ತಿತ್ತು ಕುಣಿದು ಮುಂದುವರಿದು ಬಿಡಲಿಕ್ಕೆ ಅವಳ ಲಜ್ಜೆ ಅಡ್ಡವಾಗಿತ್ತು ಗೌರಿಯೂ ಶೀನನೂ ಒಪ್ಪಿಬಿಟ್ಟಿದ್ದರೆ, ಈಗ ಅವಳು ಸ್ವರ್ಗಕ್ಕೆ ಹಾರಿದಷ್ಟು ಆನಂದ ಪಡುತ್ತಿದ್ದಳು. ಆದರೆ ಅವರಿಬ್ಬರೂ ಒಪ್ಪುವ ಲಕ್ಷಣ ಕೊಂಚವೂ ಕಾಣದೆ ಅವಳು ತವಕಿಸುತ್ತಿದ್ದಳು.

ವರದನ ಕಣ್ಣೋಟವು ಅವಳ ಕಡೆಗೆ ಹಾಯುತ್ತಲೇ ಅವಳ ಮಿಂಚಿನ ಕಣ್ಣೋಟವೂ ಅದರೊಂದಿಗೆ ಸೇರಿತು. ಒಡನೆಯೇ ಅವಳ ಚೆಂದುಟಿಗಳಲ್ಲಿ ಲೇಸಾದೊಂದು ಮುಗುಳ್ನಗು! ಕಣ್ಣುಗಳು ಅವನತ!

ಆಗ ಶೀನು ವರದನನ್ನು ಕುರಿತು— "ವರದರಾಯರೆ, ಸುಮ್ಮನೆ ನಮ್ಮನ್ನು ತೊಂದರೆ ಪಡಿಸಬೇಡಿ. ಯಾವ ಉದ್ದೇಶವನ್ನು ಸಾಧಿಸುವ ಎಂತಹ ಕಥೆ ಎಂಬುದೊಂದೂ ತಿಳಿಯದೆ, ಫಿಲಿಂನಲ್ಲಿ ನಾವು ನಟಿಸಲಾರೆವು................"

ಕೂಡಲೇ ವರದನೆಂದ— "ಅದಕ್ಕೇನೂ ಚಿಂತಿಸಬೇಕಾಗಿಲ್ಲ ಮದರಾಸಿಗೆ ಹೋಗಿ ಸೇರುತ್ತಲೇ ಕಥೆಯ ವಿವರವೆಲ್ಲ ತಿಳಿಯಪಡಿಸುವೆನು. ಆಗೊಂದು ವೇಳೆ ಈಗ ನಟಿಸಿದ್ದು ಅಯೋಗ್ಯವಾಯಿತೆಂದು ನಿಮಗೆ ತೋರಿದರೆ, ಆ ಭಾಗವನ್ನು ಕತ್ತರಿಸಿ ಹಾಕೋಣ"

"ಈಗ ನಾವು ಬಂದುದರಿಂದಲ್ಲವೇ ನಿಮ್ಮ ಇಷ್ಟು ಒತ್ತಾಯ? ಬಾರದಿರುತ್ತಿದ್ದರೆ ಏನು ಮಾಡುತ್ತಿದ್ದಿರಿ?" ಎಂದು ಶೀನು ಪುನಃ ಕೇಳಿದನು.

"ಏನು ಮಾಡುವುದು? ಕೂಲಿಗೆ ಗ್ರಾಮ ನಾಟ್ಯವೇನಾದರೂ ಸೇರಿಸಬೇಕೆಂದಿದ್ದೆ. ಆದರೆ ಕಲಾಜ್ಯೋತಿಗಳಾದ ಗೌರೀ ವಸಂತಿಯರೇ ಬಂದಿರುವಾಗ ಅದೆಲ್ಲ ಏಕೆ? ಒಂದು ವೇಳೆ ಪ್ರತಿಫಲ ಕಡಮೆಯೆಂದು ತೋರಿದರೆ ಏನಾದರೂ ಕೇಳಬಹುದು. ಸಾಮಾನ್ಯವಾಗಿ ಹೊಸ ನಟನಟಿಯರಿಗೆಲ್ಲ ನೂರು ಇನ್ನೂರಕ್ಕಿಂತ ಹೆಚ್ಚು ನಾವು ಕೊಡುವುದೇ ಇಲ್ಲ.

ಅದರಲ್ಲಿಯೂ ಸಾಮಾನ್ಯ ನಟನಟಿಯರಿಗೆ ದಿನಗೂಲಿ ಗೊತ್ತುಮಾಡು ತ್ತೇವೆ. ಆದರೆ ನಿನ್ನ ತಂಗಿ ಗೌರಿ ಪ್ರತ್ಯಕ್ಷ ವಾಣೀದೇವಿಯೋ ಮೂರ್ತಿ ಮತಳಾದಂತಿರುವುದರಿಂದಲೇ ಎಷ್ಟು ಕೇಳಿದರೂ ಕೊಡಲು ಸಿದ್ಧ ನಿದ್ದೇನೆ.''

''ಆ ವಿಚಾರವೇ ನಮಗಿಲ್ಲದಿರುವಾಗ ಈ ಹೆಚ್ಚು ಕಡಮೆಯ ಮಾತೇಕೆ? ಕ್ಷಮಿಸಿ ವರದರಾಯರೆ ಕತೆಯಾವುದು? ಯಾವ ಉದ್ದೇಶ?—ಎಂಬುದೊಂದೂ ತಿಳಿಯದೆ ನಟಿಸಲು ನಾನು ಬಿಡಲಾರೆ''— ಎಂದು ಶೀನು ಖಂಡಿತ ಸ್ವರದಿಂದ ಹೇಳಿದನು

ಆಗ ವಸಂತಿ ಶೀನುವನ್ನು ನೋಡಿ— ''ಇವರು ಇಷ್ಟು ಒತ್ತಾಯ ಮಾಡಿ ಕೇಳುವಾಗ ಹೀಗೆ ನಿರಾಕರಿಸುವುದೇಕಣ್ಣ? ಒಂದು ಛಾನ್ಸ್ ಫಿಲಿಂನಲ್ಲಿ ಹೇಗೆ ಬರುತ್ತದೋ ನೋಡಿ ಬಿಟ್ಟರಾಗದೆ?'' ಎಂದು ತನ್ನ ತಾಳಲಾರದ ಆತುರವನ್ನು ಬೈಲಿಗಿಟ್ಟೇ ಬಿಟ್ಟಳು

ಒಡನೆಯೇ ವರದನ ಲೆಕ್ಕಣಿಕೆ ಚೆಕ್ಕಿನ ಮೇಲೆ ಓಡಿತು.

ಆಗ ಶೀನು— ''ನಾನೆಂದೂ ಒಪ್ಪಲಾರೆ ನಿನ್ನ ತಂದೆ ನಿನ್ನನ್ನು ನನ್ನ ಪರಾಂಬರಿಕೆಯಲ್ಲಿ ಕಳಿಸಿಕೊಟ್ಟಿದ್ದಾರೆ. ಅವರ ಅನುಜ್ಞೆ ಇಲ್ಲದೆ ನೀನು ನಟನೆಗೆ ಇಳಿಯಬಾರದು'' ಎಂದನು

''ಹಾಗಾದರೆ ಮೈಸೂರಿನಲ್ಲಿ ನಾನು ನಟಿಸಿದೆನಲ್ಲ? ಅದಕ್ಕೆ ನನ್ನ ತಂದೆಯ ಅನುಮತಿ ಕೇಳಿದ್ದೇವೆಯೆ?'' ವಸಂತಿ ಕೇಳಿದಳು.

''ಹಾಗಲ್ಲ ವಸಂತೀ ಅದರ ವಾತಾವರಣ ಬೇರೆ, ಇದರ ವಾತಾ ವರಣ ಬೇರೆ ಫಿಲಿಂನಲ್ಲಿ ಕುಂದುಕೊರತೆಗಳಿದ್ದರೆ ಸ್ಥಿರವಾಗಿ ಉಳಿಯು ತ್ತವೆ ಅದಾವರೋ ಹಾಗಲ್ಲ''—ಎಂದನು ಶೀನು.

''ವಸಂತಿ— ''ಕುಂದು ಕೊರತೆಗಳಿದ್ದರೆ ಕತ್ತರಿಸಿ ತೆಗೆಯಬಹು ದೆಂದು ಇವರು ಹೇಳುತ್ತಾರಲ್ಲಣ್ಣಾ!''

''ಈ ವಿಷಯವಾಗಿ ನನಗೆ ಹೆಚ್ಚು ಹೇಳಲು ಇಷ್ಟವಿಲ್ಲ. ನೀನು ಈಗ ಫಿಲಿಂನಲ್ಲಿ ನಟಿಸುವುದು ಸುತರಾಂ ನನಗಿಷ್ಟವಿಲ್ಲ ಇದು ಎಂಥ ಕಥೆಯೋ, ಕಥೆಯ ಗುರಿ ಏನೋ ಅದನ್ನೂ ವರದರಾಯರು ಹೇಳುವು ದಿಲ್ಲವೆನ್ನುತ್ತಾರೆ.''—ಶೀನುವೆಂದನು

ಆಗ ವರದನೆಂದ:— “ ಇದೊಂದು ಚಾರಿತ್ರಿಕ ಚಿತ್ರ. ಗುರಿ ಏನೆಂದು ಹೇಳಲಿ? ಜನಮನೋರಂಜನೆಯೇ ಗುರಿ”

ಶೀನು “ಮನೋರಂಜನೆಯೆಂಬುದು ಗುರಿಯಾಗಲಾರದು. ರ ಗುರಿಯನ್ನು ಮುಟ್ಟುವ ಮಾರ್ಗವಾದೀತು” ಎಂದನು.

ವರದನು ಬೇಸರದಿಂದ— “ ಸುಮ್ಮನೆ ತರ್ಕವಿತರ್ಕದಲ್ಲಿಯೇ ಹೊತ್ತು ಹೋಗುತ್ತದೆ. ವಸಂತೀದೇವಿ ! ನೀವಾದರೂ ಸಿದ್ಧರಾಗಿ ” ಎಂದು ವರದನು ೫೦೦/-ರ ಚೆಕ್ಕನ್ನು ವಸಂತಿಯ ಕಡೆಗೆ ನೀಡಿದನು.

ವಸಂತಿ ಮುಂದೆ ಬಂದು ಮುಗುಳ್ನಗುತ್ತ ಅದನ್ನು ಪಡೆದು ಕೊಂಡು,— “ಶೀನಣ್ಣ ! ಕೋಪಿಸಬೇಡಿರಿ. ನಾನು ನನ್ನ ತಂದೆಗೆ ಬರೆದು ಅವರ ಅನುಮತಿಯನ್ನು ಕೇಳಿಕೊಳ್ಳುತ್ತೇನೆ ” ಈಗ ಅವರ ಅನುಜ್ಞೆ ಇಲ್ಲದೆಯೇ ನಟಿಸಬೇಕಾಗಿ ಬಂದುದಕ್ಕೆ ಅವರ ಕ್ಷಮೆಯನ್ನು ಕೇಳಿಕೊಳ್ಳುತ್ತೇನೆ.”

“ಇನ್ನು ನಾನೇನು ಹೇಳಲಿ? ನಿನ್ನಿಷ್ಟ ಗೌರಿ. ನಾನೂ ನಿನ್ನ ತಂದೆಗೆ ಈ ವಿವರವನ್ನೆಲ್ಲ ಬರೆಯಬೇಕಾದುದು ಕರ್ತವ್ಯವಾಯಿತು ” ಎಂದನು ಶೀನು ಬೇಸರದಿಂದ.

ವಸಂತಿ ಗೌರಿಯನ್ನು ನೋಡಿ— “ ಗೌರಿ ! ನೀನಿಲ್ಲವೇ ಹಾಗಾದರೆ ? ”

“ಇಲ್ಲಯಿಲ್ಲ! ನೀನೇ ನಟಿಸಮ್ಮ!” ಎಂದು ಗೌರಿಯಿಂದ ಚಟ್ಟನೆ ಉತ್ತರ ಹಾರಿಬಂತು.

ಶೀನು ತಿಳಿಯ ಹೇಳಿದ್ದೆಲ್ಲಾ ವ್ಯರ್ಥವಾಗಿ ಬೇಸರದಿಂದ, ಗೌರಿಯನ್ನು ಕರೆದುಕೊಂಡು ದೇವಸ್ಥಾನದ ಉಳಿದ ಭಾಗಗಳನ್ನು ನೋಡಲಿಕ್ಕಾಗಿ ಆಚೆಗೆ ಹೋದನು.

ಡ್ರೈವರ್ ಸದಾಶಿವನೂ, ಕೇಶವನೂ, ಶೀನುವಿನ ಜತೆಯಲ್ಲಿದ್ದ ಹೊಸಪೇಟೆಯ ಸ್ವಯಂ ಸೇವಕನೂ, ಅಲ್ಲಿಯೇ ನೋಡುತ್ತ ನಿಂತರು.

ವದರನು ಒಂದು ಸಿಗರೇಟಿಗೆ ಅಗ್ನಿ ಸಂಸ್ಕಾರ ಮಾಡಿಕೊಂಡು,— “ಬನ್ನಿ ವಸಂತೀದೇವಿ ! ಈ ಹಂಪೆಯಂತಹ ಪ್ರಾಚೀನ ಪುಣ್ಯಸ್ಥಳದ ಸ್ವಸ್ತಿವಾಚನದಿಂದ, ಸಿನಿಮಾಕಾಶದಲ್ಲಿ ನಿಮ್ಮ ಕೀರ್ತಿ ಧ್ರುವತಾರೆಯಾಗಿ ಬೆಳಗಲಿ—” ಎಂದೆಂದು ತನ್ನವರ ಕಡೆಗೆ ತಿರುಗಿ, “ಮಿಸ್ಟರ್, ರಂಗಂ !

ಕಾಲುಗಂಟೆಯೊಳಗೇ ಮೇಕ್ ಅಪ್ ಮುಗಿಯಬೇಕು!'' ಎಂದು ಆಜ್ಞಾಪಿಸಿ— ''ವಸಂತೀದೇವಿ! ಈ ವಸಂತ ಮಂಟಪಕ್ಕೆ ಒಪ್ಪತಕ್ಕ ರಾಧಾಕೃಷ್ಣ ನೃತ್ಯವನ್ನು ಅಭಿನಯಿಸೋಣ. ರಾಧಾ ನೃತ್ಯವು ಖಂಡಿತ ನಿಮಗೆ ಗೊತ್ತಿದ್ದೀತು.'' ಎಂದು ಕೇಳಿದನು.

ಮುಗುಳ್ನಗುತ್ತಾ ವಸಂತಿಯೆಂದಳು—'' ಗೊತ್ತು. ಕೃಷ್ಣವಿರಹಿಣಿಯಾದ ರಾಧೆಯಾಗಿ ಭರತನಾಟ್ಯವಾಡಬಲ್ಲೆ!''

ವರದನು ಬಾಯಿತುಂಬ ಹೊಗೆಯನ್ನುಗುಳುತ್ತ— ''ಸರಿ. ನಾನು ಕೃಷ್ಣನಾಗುತ್ತೇನೆ. ನಡೆಯಿರಿ'' ಎಂದೆದ್ದನು.

ವಸಂತಿ ಸ್ವಲ್ಪ ಸಂಕೋಚದಿಂದ— "ಮೇಕಪ್ಪಿಗೆ ಹೀಗೆ ಹೀಗೆಂದು ನನಗೆ ತಿಳಿಸಿದರೆ ಸಾಕು. ನಾನೇ ಮಾಡಿಕೊಂಡು ಸಿದ್ಧಳಾಗುತ್ತೇನೆ!''

"ಓಹೋ! ಸಂಕೋಚಪಡುತ್ತೀರಾ! ಪವಿತ್ರವಾದ ಕಲಾರಾಧನೆಯಲ್ಲಿ ಒಬ್ಬರನ್ನೊಬ್ಬರು ಮುಟ್ಟಿಸಿಕೊಳ್ಳುವುದರಿಂದ ದೋಷವೇನೂ ಇಲ್ಲ. ಇದರಲ್ಲಿ ಹೊಸಬರಾದ ನಿಮಗೆ ಈ ಸಂಕೋಚವೂ ಸ್ವಾಭಾವಿಕವಾದುದೇ. ಒಳ್ಳೇದು ಫೇಸ್‌ಕಟ್ ನಿಮಗೆ ತಕ್ಕಮಟ್ಟಿಗೆ ಇರುವುದರಿಂದ ಹೆಚ್ಚಿನ ಮೇಕ್‌ಅಪ್ ಅಗತ್ಯವಿಲ್ಲ. ಸರಿ. ಹೋಗಿ ಗೋಪಿಕಾಸ್ತ್ರೀಯಂತೆ ಡ್ರೆಸ್ ಮಾಡಿಕೊಂಡು ಬನ್ನಿ." ಎಂದಂದು ವರದನು ಆ ಮಹಾದೇವಾಲಯದೊಳಗಿನ ಒಂದು ಮರೆಯಾದ ಭಾಗವನ್ನು ತೋರಿಸಿದನು. ವಸಂತಿ ಅಲ್ಲಿಗೆ ಹೋದಳು.

ಇನ್ನೊಂದೆಡೆಯಲ್ಲಿ ವರದನೂ ತನ್ನ ಖಾಕೀ ಡ್ರೆಸ್ ತೆಗೆದು ಹಾಕಿ ಕೃಷ್ಣವೇಷವನ್ನು ಧರಿಸಿಕೊಳ್ಳತೊಡಗಿದನು.

ವಸಂತಿ ಹೊಕ್ಕಲ್ಲಿ, ಬಗೆಬಗೆಯ ವಸ್ತ್ರಗಳು, ಪೇಸ್ಟುಗಳು, ನಿಲುವುಗನ್ನಡಿ ಮೊದಲಾದ ವೇಷ ಸಾಮಗ್ರಿಗಳೆಲ್ಲಾ ಇದ್ದುವು. ಮೇಕ್‌ಅಪ್ ರಂಗಂ, ಅವಳ ಹಿಂದೆಯೇ ಹೋಗಿ ಇಂತಿಂತಹ ವಸ್ತ್ರಗಳನ್ನು ಹೀಗೆ ಹೀಗೆ ಉಟ್ಟುಕೊಳ್ಳಬೇಕೆಂದೂ, ಅವಳ ಮುಖದಲ್ಲಿರುವ ಒಂದೆರಡು ಸಣ್ಣ ಏರು ತಗ್ಗುಗಳಿಗೆ ಇಂತಿಂತಹ ಪೇಸ್ಟುಗಳನ್ನು ಹೀಗೆ ಹೀಗೆ ಹಚ್ಚಿಕೊಳ್ಳಬೇಕೆಂದೂ ಹುಬ್ಬು-ಮುಂಗುರುಳು ಮುಂತಾದಲ್ಲಿ ಹೀಗೆ ಹೀಗೆ ತೀಡಿಕೊಳ್ಳಬೇಕೆಂದೂ ತಿಳಿಸಿ ಹೇಳಿ ಹೊರಗೆ ಬಂದನು. ಸುಮಾರು

ಅರ್ಧ ಗಂಟೆಯಲ್ಲಿ ವಸಂತಿ ಗೋಪಿಕಾಸ್ತ್ರೀ ರಾಧೆಯಾಗಿ, 'ಘಲ್ಲುಘಲ್ಲು"-ನೂಪುರ ಧ್ವನಿಯೊಂದಿಗೆ ವಸಂತ ಮಂಟಪದ ನಡುವೇ ಬಂದು ನಿಂತಳು

ಆರ್ಕೆಸ್ಟ್ರಾದವರು ತಂತಮ್ಮ ವಾದ್ಯಗಳೊಂದಿಗೆ ಅಣಿಯಾಗಿ ದನಿಗೆಡವಲಾರಂಭಿಸಿದರು.

"ಧೀರ ಸಮೀರೆ—ಯಮುನಾ ತೀರೆ " ಎಂಬ ಗೀತವು ವಿವಿಧ ಧ್ವನಿ ಸಮ್ಮೇಳದೊಂದಿಗೆ, ಆ ವಾತಾವರಣವನ್ನೆಲ್ಲಾ ನಾದಮಯವಾಗಿ ಮಾಡುತ್ತ ಕರ್ಣಾನಂದಪ್ರಾಯವಾಗಿ ಹೊರಡತೊಡಗಿತು

ಕೇಮರಾಮೆನ್, ಸೌಂಡ್‌ಮೆನ್ನರು ತಮ್ಮ ಯಂತ್ರಗಳನ್ನು ಸರಿಯಾದ ಫೋಕಸ್‌ನಲ್ಲಿಟ್ಟುಕೊಂಡು, ಚಾಲೂ ಮಾಡಿದರು

ವಸಂತಿ ಮೇಳನಾದಕ್ಕೆ ತಕ್ಕಂತೆ ಮೆಲ್ಲಮೆಲ್ಲನೆ ಹದವಾದ ಪದಹತಿಗಳನ್ನು ತೆಗೆದಿಡತೊಡಗಿದಳು ಅದಕ್ಕೆ ತಕ್ಕ ಹಾಗೆ ದೇಹವು ಬಾಗಿಬಾಗಿ ಸಾಗತೊಡಗಿತು. ಕೈಬೆರಳುಗಳು ವಿರಹ ಮುದ್ರೆಗಳಿಂದ ಮುಗುಳಿ, ಅರಳಿ, ಬಳುಕಿ ತುಳುಕಿ ಎಸೆಯಲಾರಂಭಿಸಿದವು.

ಛಾಯಾಗ್ರಾಹೀ ಶಬ್ದಗ್ರಾಹೀ ಯಂತ್ರಗಳು ಗರಗರನೆ ತಿರುಗುತ್ತಲೇ ಇದ್ದುವು

ರಾಧೆ ಕೃಷ್ಣ ವಿರಹಿಣಿಯಾಗಿ, ಭಕ್ತೆಯಾಗಿ ಕಣ್ಣುಗಳಿಂದ ಭಾವಗಳನ್ನು ಹೊರಡಿಸುತ್ತ ಲಯಬದ್ಧ ಪದವಿನ್ಯಾಸಗಳಿಂದ ಕೃಷ್ಣನನ್ನು ಕಾಣುವ ಕುತೂಹಲದಿಂದ ತುಂಬಿ, ಮೂರ್ಛಾವಸ್ಥೆಗೆ ಬರುತ್ತಿದ್ದಾಗ, ವಾತಾವರಣವು ಒಮ್ಮಿಂದೊಮ್ಮೆ ಶಾಂತಕ್ಕಿಳಿಯಿತು. ಆ ಶಾಂತದೊಳಗಿಂದ, ಉಲ್ಲಾಸದಾಯಕವಾದ ಕೃಷ್ಣನ ಕೊಳಲ ದನಿ ಕೇಳತೊಡಗಿತು! ಕೊಳಲ ದನಿ ಏರೇರಿ ಕೃಷ್ಣನು ಸಮೀಪಗತನಾದನು

ರಾಧೆಯ ಮುಖದಲ್ಲಿ ಆನಂದವೇರಿತು ವಾತಾವಾರವು ಮತ್ತೆ ಸಂಭ್ರಮಾನಂದ ನಾದಮಯವಾಯಿತು. ರಾಧಾಕೃಷ್ಣರು ಶೃಂಗಾರ ನರ್ತನವನ್ನೆಸಗಿದರು. ಆನಂದಾತಿಶಯದಿಂದ ರಾಧೆ ಮತ್ತೆ ಮೂರ್ಛಾವಸ್ಥೆಗೇರುತ್ತಿದ್ದಾಗ, ಕೃಷ್ಣನು ಮೆಲ್ಲಮೆಲ್ಲನೆ ಹಿಂದೆ ಸರಿಸರಿದು ಮಾಯವಾಗಿ ಹೋದನು.

ನಾದಗಳಡಗಿದವು. ಮೇಳವಾದ್ಯಗಳು ವಿರಮಿಸಿದುವು. ಶಬ್ದಗ್ರಾಹೀ ಛಾಯಾಗ್ರಾಹಿಗಳೂ ಸ್ತಬ್ಧವಾದುವು. ನರ್ತನ ಮುಗಿಯಿತು.

"ವೇರಿಗುಡ್!" ಎಂದು ಕೃಷ್ಣವೇಷಧಾರಿಯಾದ ನಟನಾಪಟು ವರದನು ಕೂಗಿದನು

ವಸಂತಿ ಎದ್ದು—"ನೀವಿಷ್ಟು ಚೆನ್ನಾಗಿ ನರ್ತಿಸುತ್ತೀರೆಂದು ನಾನು ನೆನೆಯಲೇ ಇಲ್ಲ." ಎಂದಳು.

ಇವರ ನೃತ್ಯವನ್ನು ಶೀನೂ ಗೌರಿಯರೂ ನೋಡುತ್ತಿದ್ದರು. ವರದನ ನಾಟ್ಯಕೌಶಲ್ಯವನ್ನು ಮೆಚ್ಚಿದ ಗೌರಿ— "ಅಣ್ಣಾ! ಈ ವರದ ರಾಯರು ನಾಟ್ಯಕಲಾ ಪಾರೀಣರೇ ಸರಿ! ಏನು ನೃತ್ಯ ವೈಖರಿಯಣ್ಣಾ!" ಎಂದಳು.

ಆಗ ಆರ್ಕೆಸ್ಟ್ರಾದವರಲ್ಲಿ ಒಬ್ಬನು ಇನ್ನೊಬ್ಬನೊಡನೆ ಮೆಲ್ಲನೆ— ಹೊಸಬಳಲ್ಲವೆ? ಸಿನಿಮಾ ರೀತಿಗೆ ಇನ್ನೂ ಪಳಗಬೇಕು" ಎಂದನು. ಅದಕ್ಕೆ ಇನ್ನೊಬ್ಬನು, "ಹೌದು ಮೋಹಕತೆ ಸಾಲದು. ನಮ್ಮ ವರದರಾಯರಿಗೆ ಸರಿಸಾಟಿಯಾಗಬೇಕಾದರೆ ಇನ್ನೂ ತುಂಬಾ ಅಭ್ಯಾಸ ಬೇಕು" ಎಂದನು. "ಹೌದು. ಇಲ್ಲದಿದ್ದರೆ ವರದರಾಯರು ಇಷ್ಟು ಹದವಾದ ರೀತಿಯಲ್ಲಿ ನರ್ತಿಸುತ್ತಿದ್ದರೆ?" ಎಂದನು ಮೊದಲಿನವ.

ಅನಂತರ ವಸಂತಿ ಹೋಗಿ ತನ್ನ ಮೊದಲಿನ ಸೀರೆಯನ್ನುಟ್ಟು ಕೊಂಡು, ಮುಖದ ಪೇಸ್ಟು ಮುಂತಾದುವುಗಳನ್ನು ಒರೆಸಿಕೊಂಡು ಬಂದಳು. ಅಷ್ಟರಲ್ಲಿ ವರದನೂ ತನ್ನ ವೇಷಗಳನ್ನು ಕಳೆದುಕೊಂಡು, ನಿಜ ವೇಷದಿಂದ, ಸಿದ್ಧನಾಗಿ— "ತುಂಬ ಥ್ಯಾಂಕ್ಸ್ ವಸಂತೀದೇವಿ! ಮದರಾಸಿನಲ್ಲಿ ನಿಮ್ಮನ್ನು ಸಂಧಿಸುತ್ತೇನೆ. ಒಂದು ಚಿತ್ರಕ್ಕೆ ನಿಮ್ಮ ಒಪ್ಪಂದಮಾಡಿಸಬೇಕೆಂದಿದ್ದೇನೆ. ನಿಮ್ಮ ತಂದೆಗೆ ಬರೆದು ಅನುಮತಿ ತರಿಸಿಟ್ಟುಕೊಳ್ಳುವಿರಷ್ಟೆ?" ಎಂದನು ಮುಗುಳ್ನಗುತ್ತ.

ವಸಂತಿಯೂ ಮುಗುಳ್ನಗುತ್ತ— "ಆಗಲಿ. ನನಗೂ ಸಿನಿಮಾ ದಲ್ಲಿ ಅಭಿನಯಿಸಬೇಕೆಂದು—" ಎನ್ನುತ್ತಿರಲು ಅವಳ ಕಣ್ಣು ಶೀನುವಿನ ಮೇಲೆ ಬಿತ್ತು; ಅವನು ಅವಳನ್ನೆ ನೋಡುತ್ತಿರುವುದನ್ನು ಕಂಡು ಹಿಡಿದು, ಅವಳು ತನ್ನ ಸ್ವರವನ್ನು ತಗ್ಗಿಸಿ,— "ಆದರೆ ತಂದೆಯ ಕಾಗದ ಏನು ಬರುವುದೋ ನೋಡೋಣ. ಯಾವುದಕ್ಕೂ ಮದರಾಸಿನಲ್ಲಿ ನಾನು ನಿಮ್ಮನ್ನಿದಿರು ನೋಡುತ್ತಿರುವೆನು." ಎಂದಳು.

"ನಿಮ್ಮ ಅಡ್ರೆಸ್ಸು?"

ವಸಂತಿ ಮೆಲ್ಲನೆಯಿಂದಲೇ—"ನಂಬರ್ ಎಂಟು, ನರಸಾಚಾರೀ ರೋಡ್, ಟ್ರಿಪ್ಲಿಕೇನ್," ಎಂದಳು. ವರದನು ತನ್ನ ಬಂಗಾರದ ಕ್ಲಿಪ್ಪು ನಿಬ್ಬುಗಳ ಹೊಳೆಯುವ 'ಪಾರ್ಕರ್' ಪೇನಾದಿಂದ ಬರೆದುಕೊಂಡು, ನಾಲ್ಕು ಹೆಜ್ಜೆ ನಡೆದು ಗೌರಿಯ ಬಳಿಗೆ ಬಂದು,— "ಗೌರೀದೇವಿ! ಈಗಾದರೂ ನೀವು ಒಪ್ಪಿದರೆ ಇನ್ನೊಂದು ಛಾನ್ಸ್ ನಿಮಗೆ ಕಾದಿದೆ" ಎಂದನು

"ನಿಮಗೆ ತುಂಬಾ ಥ್ಯಾಂಕ್ಸ್. ವಸಂತಿಯನ್ನು ಕಳುಹಿಸಿ ಕೊಡಿ" ಎಂದಳು ಗೌರಿ

ವಸಂತಿ ಕಡೆಗಣ್ಣಿಂದೊಮ್ಮೆ ವರದನನ್ನು ನೋಡಿ, ಗೌರಿಯೊಡನೆ ಬಂದು ನಿಂತಳು.

ಇಷ್ಟವಿಲ್ಲದಿದ್ದರೂ ಶೀನು ಅಲ್ಲಿಯೇ ಇದ್ದು ಈ ಒತ್ತಾಯದಾಟ ನೋಡಿಯೇ ನೋಡಬೇಕಾಯಿತು. ವಸಂತಿಯಂತೆ ಅವನ ತಂಗಿ ಗೌರಿ ಹಟಮಾಡುತ್ತಿದ್ದರೆ ಅವನು ಬಲಾತ್ಕಾರದಿಂದಾದರೂ ಅವಳನ್ನು ನಿವಾರಿಸಿ ಬಿಡುತ್ತಿದ್ದನು. ಆದರೆ ವಸಂತಿಯ ಮೇಲೆ ಅಷ್ಟು ಅಧಿಕಾರ ಮಾಡುವುದು ಹೇಗೆ? ಘನ ಶ್ರೀಮಂತರಾದ ಅವಳ ತಂದೆ ಶ್ಯಾಮಸುಂದರರು ಅವನಿಗೆ ಸ್ನೇಹಿತರಿದ್ದಂತೆ ಪೋಷಕರೂ ಆಶ್ರಯದಾತರೂ ಆಗಿದ್ದರು. ಅವರಿಗೆ ಮಗಳು ವಸಂತಿಯ ಮೇಲೆ ತುಂಬ ಮಮತೆಯಿರುವುದೂ ಅವನಿಗೆ ಗೊತ್ತಿತ್ತು. ಸ್ತ್ರೀಸ್ವಾತಂತ್ರ್ಯವನ್ನು ಚೆನ್ನಾಗಿ ಸಾಧಿಸಬೇಕೆಂಬ ಮನೋಗತಿ ಅವರದು. ಅದಕ್ಕೆ ತಕ್ಕಂತೆಯೇ ವಸಂತಿಗೆ ಎಲ್ಲಾ ವಿಧ ಸ್ವಾತಂತ್ರ್ಯವನ್ನು ಕೊಟ್ಟೇ ಬಳೆಸಿದ್ದರು. ಶೀನು ಸ್ತ್ರೀ ಸ್ವಾತಂತ್ರ್ಯಕ್ಕೆ ವಿರೋಧಿಯಲ್ಲದಿದ್ದರೂ, ಸ್ವಾಭಾವಿಕವಾಗಿ 'ಅಬಲೆಯ'ರಾದ ಹೆಂಗುಸರ ಸ್ವಾತಂತ್ರ್ಯದಲ್ಲಿ ಕೆಲವೊಂದು ನೀತಿ-ನಿಯಮಾವಳಿಗಳ ಎಲ್ಲೆಕಟ್ಟು ಇರಬೇಕೆಂಬುದು ಶೀನುವಿನವಾದ.

ಇಂದು ಸಂಭವಿಸಿದ ಈ ಅನಿರೀಕ್ಷಿತ ಪ್ರಸಂಗಗಳನ್ನು ವಿವರಿಸಿ, ಶ್ಯಾಮಸುಂದರರಿಗೆ ಒಂದು ಕಾಗದ ಬರೆಯುವುದು ಉಚಿತವೆಂದೆಣಿಸಿ, ಇತ್ತ 'ರಾಧಾಕೃಷ್ಣ' ನೃತ್ಯ ಸಾಗುತ್ತಿದಾಗಲೇ, ಅತ್ತ ಕುಳಿತು ಅವನು ಕಾಗದವನ್ನು ಬರೆದು ಮುಗಿಸಿದ್ದನು.

# ೨೨

ರಾಧಾ ನೃತ್ಯವನ್ನು ಮುಗಿಸಿ ಬಂದಾಗ ವಸಂತಿಯ ಕಳೆಯೇ ಹೊಸದಾಗಿತ್ತು. ಹೊಸದೊಂದು ವಿಜಯವನ್ನು ಸಂಪಾದಿಸಿದ ಸಂತೋಷದ ಬೆಳಕು ಅವಳ ಮುಖದಲ್ಲಿ ಮಾಡಿತ್ತು. ಒಂದೇ ನಿಮಿಷದಲ್ಲಿ ೫೦೦ ರೂಪಾಯಿ ಸಿಕ್ಕಿದರೆ, ಅವಳಂತೆ ಯಾರಿಗೆ ತಾನೇ ಹಾಗಾಗಲಿಕ್ಕಿಲ್ಲ? ಗೌರಿ ಇಲ್ಲದೆ ತಾನೊಬ್ಬಳೇ ನರ್ತಿಸಿದ್ದು ಬಹಳ ಮೇಲಾದ ವಿಜಯವಾಗಿತ್ತು ಅವಳಿಗೆ. ಅವಳ ನೃತ್ಯದ ಮೇಲೆ ಗೌರಿಯ ನೃತ್ಯವು ಸಾಗಿಬಿಟ್ಟರೆ ಅವಳ ಕಳೆ ಕಂದಿಯೇ ಹೋಗುವುದೆಂದು ಅವಳಿಗೇ ಗೊತ್ತಿತ್ತು. ಅವಳ ಅಸೂಯೆಯ ಹೃದಯವು ಈಗೊಂದು ಪ್ರತೀಕಾರ ಮಾಡದ ಸಂತೃಪ್ತತಾ ಸುಖದಿಂದ ನೆಮ್ಮದಿಯಾದಂತಾಯಿತು. ಇಂದಿನ ಪ್ರಸಂಗವು ಅವಳ ಭವಿಷ್ಯ ಚರಿತ್ರೆಗೂ ಒಂದು ಪ್ರಕಾಶ ಬೀರಿತ್ತಲ್ಲವೆ? ಇನ್ನು ಗೌರಿಯ ಜತೆ ತಪ್ಪಿ ತಾನೇ ತಾನಾಗಿ ಮೆರೆಯುವ ಯೋಗವು ಬಂದೀತಲ್ಲವೆ?

ಆಹಾ! ಈಗ ವಸಂತಿ ಎಷ್ಟು ಮೇಲೇರಿ ಬಿಟ್ಟಿದ್ದಾಳೆ! ಇವಳ ಕೈಯಲ್ಲಿರುವ ೫೦೦/-ರ ಚೆಕ್ಕು ಗೌರಿಯ ಕೈಯಲ್ಲಿದೆಯೆ? ಅಲ್ಲದೆ ಅವಳಿಗೆ ಏನೂ ಕಡಮೆಯಾಗಬಾರದೆಂದು ಶ್ಯಾಮಸುಂದರರು ಅವಳ ಕೈಯಲ್ಲಿಯೂ ಸಾಕಷ್ಟು ಹಣವನ್ನು ಕೊಟ್ಟಿದ್ದರು. ಈಗ ಅವಳ ಕೈಯಲ್ಲಿರುವಷ್ಟು ಹಣವು ಯಾರ ಕೈಯಲ್ಲಿದೆ? ಶೀನುವಿನ ಕೈಯಲ್ಲೇನೋ ಅವನ ಹಾಗು ಅವನ ತಂಗಿಯ ಖರ್ಚಿಗಾಗಿ ಒಂದಿನ್ನೂರು ರೂಪಾಯಿ ಇದ್ದಿತು. ಆದರೆ ಆ ಕಾರು, ಡ್ರೈವರು ಎಲ್ಲವೂ ವಸಂತಿಯ ಯಜಮಾನಿಕೆಯದಲ್ಲವೆ?

ಇದೂ ಅಲ್ಲದೆ ಯಾರು ನೋಡಿದರೂ ನೋಡಿದ ಪೆಟ್ಟಿಗೆ, ಗೌರಿಗಿಂತ ವಸಂತಿಯನ್ನೆ ಸುಂದರಿಯೆಂದು ಹೇಳಿ ಬಿಡುತ್ತಿದ್ದರು. ಸೌಂದರ್ಯವನ್ನು ತಟ್ಟನೆ ಅಳೆದು ಬಿಡುವ ಆ ಹೊರಗಣ್ಣು ತೊಗಲಿನ ಹೊರಗಿನ ಕೆಂಬಣ್ಣಕ್ಕೇ ಪ್ರಾಧಾನ್ಯವನ್ನು ಕೊಡುತ್ತದಲ್ಲವೆ? ಅಂತಹ ಕೇದಿಗೆಯ ಬಣ್ಣದವಳಾಗಿದ್ದಳು ವಸಂತಿ. ದೇಹವೂ ಸಾಕಷ್ಟು ಪುಷ್ಟವಾಗಿ ಶ್ರೀಮಂತಿಕೆಯ ಹೊಳಪಿನಿಂದಲೂ, ಯೌವನ ಮದಜಲದ ಲೇಪನದಿಂದಲೂ, ನಾಗರಿಕ ಫ್ಯಾಶನ್ನಿನ ಉಡುಗೆತೊಡುಗೆಗಳಿಂದಲೂ, ವಾರೆ

ಬೈತಲೆ, ಚುಕ್ಕೀ ತಿಲಕ, ಚಿಂಗಲ್ಲಗಳನ್ನು ಮುಟ್ಟಿಮುಟ್ಟಿ ಲಕಲಕಿಸುವ ಲೋಲಾಕುಗಳು, ಮಾದರಿಯ ತೋಳ್ ಹೊಲಿಗೆಯ ರವಕೆ, ಮೊದಲಾದುವುಗಳಿಂದ ನೋಟ ಮಾತ್ರಕ್ಕೆ ಅವಳೇ ಗೌರಿಗಿಂತ ಸ್ಫುರದ್ರೂಪಿಯಾಗಿ ಎದ್ದು ಕಾಣುತ್ತಿದ್ದಳು. ಇಂತಹಳು ಗರ್ವದಿಂದ ಬಿಗಿದುಕೊಂಡಿದ್ದರೆ ಏನಾಶ್ಚರ್ಯ ?

ಹೀಗೆಂದುದರಿಂದ ಗೌರಿಯನ್ನು ಕುರೂಪಿಯೆಂದು ತಿಳಿಯುವಿರೇನೊ ! ಕಪ್ಪಿನವಳು ಆದ ಮಾತ್ರಕ್ಕೆ ಕುರೂಪಿಯೆಂದು ತೀರ್ಮಾನಿಸುವುದಾದರೆ, ಅವಳನ್ನು ನೋಡಿ ಪ್ರಯೋಜನವೇ ಇಲ್ಲ ಸರಿಯಾಗಿ ನೋಡಿದರೆ ಅವಳ ರೂಪಾಲಂಕಾರಗಳನ್ನು ವಸಂತಿಗಿಂತ ಮಿಗಿಲಾಗಿ ಕಾಣಬಹುದು ಬಡನಡು ಬಳಕುವ ಲತಾಂಗಿ ಗೌರಿ. ನಡೆಯುವಾಗಿನ ಅವಳ ಪಾದಗಳನ್ನು ನಾವು ನೋಡಿದ್ದೇವಷ್ಟೇ ? ದೀರ್ಘಾಯತದಳ ಕಮಲದಂತೆ, ಲಲಿತನ್ಯಾಸಗಳಿಂದೊಪ್ಪುವ ಆ ಪಾದಗಳು, ದೇಹಭಾರದ ತೂಕಕ್ಕೆ ಸರಿಯಾಗಿ, ಮೃದುವಾದ ತಾಳದಂತಹ ಸ್ಪರ್ಶದಿಂದ ಭೂದೇವಿಗೆ ಸುಖಪುಲಕಿತಗೊಳಿಸುವಂತಹ ನಡಿಗೆ. ಆಗ ಅವಳ ದೇಹವೇ ಒಂದು ಸಂಗೀತದಂತೆಯೂ, ಪಾದಗಳು ತಾಳದಂತೆಯೂ ಭಾಸವಾಗುತ್ತಿದ್ದುವು. ಅಜಂತೆಯ ಚಿತ್ರಕಲೆಯನ್ನು ನೋಡಿದವರಿಗೆ, ಆ ಚಿತ್ರಗಳಲ್ಲೊಂದು ಮೂರ್ತಿಯೇ ಜೀವವೆತ್ತು ಬಂದಂತೆ ಕಾಣುತ್ತಿದಳು. ಅವಳ ಕಣ್ಣುಗಳು ನೀಲಾಯತವಾಗಿದ್ದುವು ಅದರೊಳಗೆ ದೈವಿಕವಾದ ಶಾಂತಭಾವರಸಗಳು ನಡುವೆ ಚಪಲ ಭ್ರಮರದಂತಹ ಕರೀ ಪಾಪೆಗಳು ತೇಲುತ್ತಿದ್ದುವು. ತಿದ್ದಿ ಬರೆದಂತಹ ಎಸಳ್ಹುಬ್ಬುಗಳು; ಅವ್ಯಕ್ತ ಪಾತ್ರದ ಸುಂದರ ಮುಚ್ಚಳದಂತಹ ಬಾಯಿ; ಮುಗುಳುದುಟಿಗಳು; ದೀರ್ಘವೃತ್ತಾಕಾರವಾಗಿರುವ ಮುಖದ ಸುತ್ತಣ ಸೀಮಾರೇಖೆಗಳು ಸರಳವಾಗಿ ಸುಲಭವಾಗಿ ಚಾಚಿ ಬಂದು ಗಂಡಸ್ಥಳದ ಮುದ್ದು ಮೊನೆಯಲ್ಲಿ ಸುಂದರ ರಸಸಂಯೋಗದಂತೆ ಹೊಂದಿಕೊಂಡಿದ್ದುವು ಇರ್ಕೆಲಗಳಲ್ಲಿ ಮುಖವನ್ನು ಮುತ್ತಿಡುವ ಮುಂಗುರುಳುಗಳುಂಟು; ಗಲ್ಲದ ರೇಖೆಗಳನ್ನು ತಡವಿ ತಡವಿ ಸರಿಮಾಡುತ್ತಿರುವ ಲೋಲಾಕುಗಳುಂಟು. ಉಳಿದೆಲ್ಲಾ ವಿಧದಲ್ಲಿಯೂ ಅವಳು ಸಾದಾ ಭೂಷಣೆಯೇ. ನಾಗರಿಕತೆಯ ಥಳಕು ಪಳಕುಗಳ ಮೆರುಗಾಟವಿಲ್ಲ; ಆದರೂ ನಾಗರಿಕತೆಯ ಕಳೆಗೇನೂ ಕುಂದಿಲ್ಲ; ಸಾದಾ ಅಂಚಿನ

ಒಂದು ಬಿಳೀ ಸೀರೆ, ಬಿಳೀ ರವಕೆಗಳಿಂದ ದೇವಿಯಂತೆ ಕಾಣುತ್ತಿದ್ದಳು. ಹಿಂದೆ ನೋಡಿದರೆ ಆ ತಲೆಗೂದಲು ಕರ್ರಗಾಗಿ ದಟ್ಟವಾಗಿ ಹೊಳಪಾಗಿ ನೆಲವನ್ನು ಸೋಂಕುವಂತಿತ್ತು. ಉದ್ದವಾದ ಆ ಜಡೆಯೊಂದೇ ಸಾಕು ಆ ಹಿಂದಿನ ಅಲಂಕಾರಕ್ಕೆ. ಅವಳ ಸೌಂದರ್ಯವನ್ನು ಈ ಬಗೆಯಾಗಿ ನೋಡಬೇಕಾದರೆ, ಅವಳ ತೊಗಲಿಗೆ ಅಂಟಿರುವ ಆ ಕರಿದೆರೆಯ ಮುಸುಕನ್ನು ತೆರೆದು, ಕೊಂಚ ನಿಂತು ಒಳಗಣ್ಣು ತೆರೆದು ನೋಡಬೇಕು. ಆಗ ವಸಂತಿಗಿಂತಲೂ ಗೌರಿ ನಾಲ್ಕುಪಾಲು ಹೆಚ್ಚು ಸೌಂದರ್ಯ ಶಾಲಿನಿಯೆಂದು ತೋರೀತು. ಥಕ್ಕನೆ ತೆರೆದ ಕಣ್ಣಿಗೆ ವಸಂತಿ ಕೆಂಪಗೆ ಹೊಳೆದು ತೋರಿದರೂ, ಅವಳ ಆ ಜಡೆ ಚೌರಿ ಜೋಡಿಸಿದ ಕೃತ್ರಿಮ ಜಡೆ. ಕಣ್ಣುಗಳು ಆಯತವಲ್ಲ— ಅಗಲ. ಆದರಲ್ಲಿ ಕುಟಿಲತೆಯೂ ಮೋಹಕತೆಯೂ ಮಿಣುಕುತ್ತಿದ್ದುವು. ಅವಳ ನೋಟವು ಬೇಟದ ಮೋಹವನ್ನು ಹುಟ್ಟಿಸುವಂತಹುದು. ಇನ್ನೂ ನೋಡಿರಿ! ವಸಂತಿಯ ಮೂಗಿನ ನಡು ಕೊಂಚ ತಳಸೇರಿದಂತಿಲ್ಲವೆ? ಮೊನೆ ಕೊಂಚ ಒಂದು ಬದಿಗೆ ವಾಲಿದಂತಿಲ್ಲವೆ? ಆದರೆ ಯಾವ ಬದಿಗೆ ವಾಲಿದೆ ಎಂದು ಹೇಳುವುದು ಕಷ್ಟ. ಆ ಕಡೆಯಿಂದ ನೋಡಿದರೆ ಈ ಬದಿಗೆ ವಾಲಿದಂತೆಯೂ, ಈ ಕಡೆಯಿಂದ ನೋಡಿದರೆ ಆ ಬದಿಗೆ ವಾಲಿದಂತೆಯೂ ಭ್ರಮೆ ಹುಟ್ಟಿಸುವಂತಹ ಮೂಗು. ಅವಳ ಮುಖವು ಬಟ್ಟವಾದರೂ ಗಲ್ಲಗಳ ರೇಖೆ ಕೊಂಚ ಆಯತವಾಗಿವೆ. ಬಾಯಿಗೆ ತುಸು ಸಮೀಪದಲ್ಲಿರುವ ಆ ಗಂಡಸ್ಥಳದ ಮೊನೆ ತುಸು ದೂರವಿಳಿದಿರುತ್ತಿದ್ದರೆ ಚೆನ್ನಾಗಿರುತ್ತಿತ್ತು. ಹಾಗೆಯೇ ಅವಳ ಕೈಕಾಲು ನಡು ಅಡಿಗಳು, "ಪರ್ವಾಯಿಲ್ಲ" ಎನ್ನಬಹುದು. ಅವಳ ಈ ಬಗೆಯ ಕೊರತೆಗಳನ್ನೆಲ್ಲ ಮುಚ್ಚುವಷ್ಟು ಶಕ್ತವಾಗಿತ್ತು ಆ ಹೊಳೆಯುವ ಅವಳ ಕೇದಿಗೆಯ ಮೈಬಣ್ಣ

ಈ ಬಗೆಯ ವ್ಯತ್ಯಾಸಗಳು ಸಾಮಾನ್ಯರಿಗೆ ಗೊತ್ತಾಗದಿದ್ದರೂ, ಒಳ್ಳೆಯ ನಟನಾಪಟುವೂ, ಸಿನಿಮಾ ಡೈರೆಕ್ಟರನೂ ಆದ ವರದನಿಗೆ ಹೇಗೆ ಗೊತ್ತಾಗದೆ ಹೋದೀತು? ಅವನು ಹೇಗಾದರೂ ಮಾಡಿ ಆ ಕಲಾಂಗಿನಿಯಾದ ಗೌರಿಯನ್ನು ಪಡೆಯಬೇಕೆಂದು ನಿರ್ಧರಿಸಿದರೆ ಏನೂ ಆಶ್ಚರ್ಯವಿಲ್ಲ. ಆದರೆ ಶೀನೂ ಗೌರಿಯರ ಅಚಲವಾದ ಸ್ವಭಾವವು ಅವನನ್ನು

ಅಳುಕಿಸುತ್ತಿತ್ತು. ಆವನು ಏನೇನೋ ಯೋಚನೆ ಮಾಡುತ್ತ, ತನ್ನ ಸಹಚರರೊಡನೆ ಏನೋ ಪಿಸುಗುಟ್ಟಿಕೊಂಡನು

ಅಂದು ಸಂಜೆ ಪಂಪಾಕ್ಷೇತ್ರದಲ್ಲಿ ಶೀನುವಿನ ಭಾಷಣದ ಮುನ್ನೇರ್ಪಾಡಿದ್ದುದರಿಂದ, ಶೀನು ತನ್ನವರೊಂದಿಗೆ ಸೀದಾ ಹಂಪೆಗೆ ತಿರುಗಿದನು. ಆಗ ಸಂಜೆಯೂ ಆಯಿತು.

ವಿರೂಪಾಕ್ಷ ದೇವಾಲಯದ ಮುಂದಿನ ವಿಶಾಲವಾದ ನೀಳ ಬೀದಿಯಲ್ಲಿ ಸುತ್ತುಮುತ್ತಣ ಗ್ರಾಮಗಳಿಂದ ಬಂದ ಹಲವಾರು ಜನರು ಬಂದು ನೆರೆದಿದ್ದರು; ನೆರೆಯುತ್ತಲೂ ಇದ್ದರು. ಹೊಸಪೇಟೆಯಿಂದ ಕೆಲವು ಅಧಿಕಾರಿಗಳೂ ಬಂದಿದ್ದರು. ಅವೆಲ್ಲ ಸಹಜವಷ್ಟೆ? ಕೊಟ್ಟೂರು ದೊಡ್ಡಣ್ಣಗೌಡರೆಂಬ ಪ್ರಸಿದ್ಧ ನಾಯಕರನ್ನು ಅಂದಿನ ಮಹಾಸಭೆಗೆ ಅಧ್ಯಕ್ಷರಾಗಿ ಆರಿಸಲಾಗಿತ್ತು.

ಅಧ್ಯಕ್ಷರು ಮಾಡಿದ ಮೊದಲ ಭಾಷಣದಲ್ಲಿ, ಹಂಪೆಯಂತಹ ಹಾಳು ಸ್ಥಳದಲ್ಲಿ ಇಂತಹ ಸಭೆ ಕೂಡುವುದೇ ಅತ್ಯಪೂರ್ವವೆಂದೂ, ಅದನ್ನಿಂದು ಒದಗಿಸಿಕೊಟ್ಟ ಭಾಗ್ಯಕ್ಕೆ ಕಾರಣರು, ಕನ್ನಡ ಗೆಳೆಯ ಶ್ರೀ. ಶ್ರೀನಿವಾಸರಾಯರೆಂದೂ, ಅವರ ಕಲ್ಪನಾ ಪ್ರತಿಭೆಗಳನ್ನು ಪುಸ್ತಕಗಳ ಮೂಲಕವಾಗಿ ಓದಿ ತಿಳಿದ ನಮಗೆ, ಅವರನ್ನು ಕಣ್ಣಾರೆ ಕಂಡು, ಅವರ ಭಾಷಣಗಳನ್ನು ಕಿವಿಯಾರೆ ಕೇಳುವ ಮಹಾಭಾಗ್ಯವು ಒದಗಿತೆಂದೂ ಹೇಳಿದರು.

ಅನಂತರ ಶೀನು "ವಿದ್ಯಾನಗರ ಸ್ಥಾಪನೆ"ಯ ವಿಷಯದಲ್ಲಿ ಭಾಷಣ ಮಾಡಿದನು.

ವಿದ್ಯಾನಗರವೆಂಬ ಈ ಮಹಾಸ್ವತಂತ್ರ ರಾಜ್ಯವು ನಿರ್ಮಾಣವಾಗುವುದಕ್ಕಿಂತ ಮುಂಚೆ, ದಾಕ್ಷಿಣಾತ್ಯವು ಪರಕೀಯರ ಒತ್ತಾಟದಿಂದ ಹೇಗೆ ತತ್ತಳಗೊಂಡು ಎಚ್ಚತ್ತಿತೆಂದು ಮನಮುಟ್ಟುವಂತೆ ಹೇಳಿದನು. ಎಚ್ಚೆತ್ತ ಜನರು ಕಾಲಾನುಗುಣವಾಗಿ ಅವತರಿಸಿದ ಆಗಿನ ಮಹಾತ್ಮರಾದ ಶ್ರೀ. ವಿದ್ಯಾರಣ್ಯರ ಸತತ ಬೋಧನೆಯನ್ನು ಕೇಳಿ, ಜಾತಿ–ಮತ–ಭೇದಗಳನ್ನು ಬಿಟ್ಟು, ಬ್ರಾಹ್ಮಣ-ಹೊಲೆಯನೆಂಬ ತಾರತಮ್ಯಗಳನ್ನು ತೊರೆದು, ಹೇಗೆ ಮಹಾಬಲ ಸಂಪನ್ನರಾದರೆಂದು ವಿವರಿಸಿದನು ಸಾಧು ಬ್ರಾಹ್ಮಣರಾದ ವಿದ್ಯಾರಣ್ಯರ ನಾಯಕತ್ವವನ್ನು ಅವರೆಲ್ಲ ಏಕೋಭಿಪ್ರಾಯದಿಂದ ಒಪ್ಪಿ

ಕೊಂಡುದನ್ನು ನೆನಪೂಡಿಸಿದನು. ಹಾಗೆ ಒಗ್ಗಟ್ಟಾದ ಜನಶಕ್ತಿಯಿಂದ ನಾಲ್ಮಡಿ ಬಲಶಾಲಿಯಾದ ಮಹಾ ರಾಕ್ಷಸ ಶಕ್ತಿಯೊಳಗಿನಿಂದ ದೇಶ ಮಾತೆಯನ್ನು ಬಿಡಿಸಿ, ವಿದ್ಯಾನಗರವೆಂಬ ಈ ಸ್ವತಂತ್ರ ರಾಜ್ಯವನ್ನು ಕಟ್ಟಿದರೆಂದು ತಿಳಿಸಿ ಹೇಳಿದನು.

"............ಬಾಂಧವರೇ ! ಸ್ವಲ್ಪ ಹೆಚ್ಚು ಕಡಮೆ ಆಕಾಲದಂತಹ ಪರಿಸ್ಥಿತಿಯೇ ಈಗಲೂ ಪ್ರಾಪ್ತವಾಗಿದೆ. ಆ ಕಾಲಾನುಗುಣ ಅವತಾರಿ ಗಳಾದ ವಿದ್ಯಾರಣ್ಯರಂತೆಯೇ, ಈ ಕಾಲಾನುಗುಣ ಅವತಾರಿಗಳು ಮಹಾತ್ಮಾ ಗಾಂಧಿ! ಅವರ ಕೃತೋದ್ಭೂತ ಹಾಗು ಮುಖೋದ್ಗೀತ ಬೋಧನೆಯಿಂದ ಈಗ ದೇಶವೆಲ್ಲಾ ಎಚ್ಚೆತ್ತು ನಿಂತಿದೆ. ಈಗ ನಮ್ಮ ಸುತ್ತುಮುತ್ತೂ ನಡೆಯುವ ಮಹಾಯುದ್ಧದಿಂದ, ನಾವು ಎಲ್ಲಾ ಚಳು ವಳಿ ಚಟುವಟಿಗಳನ್ನೂ ಬಿಟ್ಟು ಬೆಪ್ಪಾಗಿ ನಿಂತು ಬಿಟ್ಟಿದ್ದೇವೆ. ಈ ಬೆಪ್ಪು ತಕ್ಕಡಿತನದಲ್ಲಿಯೂ, ನಾವು ನಮ್ಮೊಳಗೆದ್ದಿರುವ ಎಚ್ಚರಿಕೆಯನ್ನೂ ನಮ್ಮ ಗುರಿಯನ್ನೂ ಮರೆತು ಬಿಡಬಾರದು. ಯಾವಕಾಲದಲ್ಲಿಯೂ ನಾವೆಲ್ಲರೂ ಮಹಾತ್ಮಾ ಗಾಂಧಿಯ ಕಟ್ಟಳೆಯಂತೆ ನಡೆಯಲು ಸಿದ್ಧರಾಗಿ ರಬೇಕು. ಇದುವರೆಗೂ ಅವರ ನಾಯಕತ್ವದಲ್ಲಿ ಯಾರೂ ಏನೂ ಸಂದೇಹವನ್ನು ತಾಳಿಲ್ಲ; ತಾಳಲಿಕ್ಕೂ ಇಲ್ಲ. ಅಹಿಂಸಾಯುಧವನ್ನೇ ಮುಖ್ಯವಾಗಿಟ್ಟುಕೊಂಡಿರುವ ಮಹಾತ್ಮರು, ಒಂದು ದೊಡ್ಡ ಹೋರಾ ಟವೇ ನಡೆಯುವಂತೆ ಆಜ್ಞೆಮಾಡಿದರೂ, ಅದೆಲ್ಲಾ ಅಹಿಂಸೆಯ ಅಡಿಗಟ್ಟಿ ನಲ್ಲಿಯೇ ನಡೆದು ಪ್ರಪಂಚವೇ ಬೆರಗಾಗುವಂತೆ ಮಾಡೀತು............"

ಶೀನುವಿನ ಭಾಷಣವು ಮುಗಿಯುವ ಘಟ್ಟಕ್ಕೆ ಬರುತ್ತಿದ್ದಿತು. ಆಗ ಎಲ್ಲಿಂದಲೋ ಏಳೆಂಟು ಕಲ್ಲುಗಳು ಹಾರಿಬಂದು ಆ ಜನ ಸಭೆಯಲ್ಲಿ ಬಿದ್ದುವು ಸಭೆಯಲ್ಲಿ ಹಾಹಾಕಾರವೆದ್ದಿತು. ಶೀನುವೇ ಮೊದಲಾದ ಮುಖಂಡರು "ಶಾಂತಿ! ಶಾಂತಿ! ಏನೂ ಇಲ್ಲ! ಗಲಾಟೆ ಮಾಡಬೇಡಿ!" ಎಂದು ಕೂಗಿ ಕೂಗಿ ಹೇಳಿದರು. ಹೊಸಪೇಟೆಯಿಂದ ಬಂದಿದ್ದ ನಾಲ್ಕಾರು ಮಂದಿ ಪೋಲೀಸರೂ ಅತ್ತಿತ್ತ ಓಡಾಡಿದರು.

ಆಗ ಮುಚ್ಚಂಜೆ ಕಳೆದಿತ್ತು. ಕತ್ತಲೆ ತಲೆದೂರಿ ದೂರಿ ಬರು ತ್ತಿತ್ತು. ಎರಡು ಗ್ಯಾಸ್ ಲೈಟುಗಳು ಉರಿಯತೊಡಗಿದ್ದುವು.

ಮತ್ತೂ ಎರಡು ಮೂರು ಕಲ್ಲುಗಳು ಬೀಳಲಾರಂಭಿಸಿದುವು!

ಯಾರೋ ಒಬ್ಬನು ಅತ್ತ ಓಡುವವನನ್ನು ನೋಡಿ, "ಅವನೇ ಕಲ್ಲು ಬಿಸುಟ!" ಎಂದು ಕೂಗಿದ. ಅವನು ಏಕೆ ಓಡಿದನೋ, ಅವನು ಯಾರನ್ನು ತೋರಿಸಿದನೋ! ಪೋಲೀಸನೊಬ್ಬನು ಓಡಿಹೋಗಿ ಅವನನ್ನು ಓಡಿಯಲೆತ್ನಿಸಿದನು. ಆಗೊಬ್ಬನು ಆ ಪೋಲೀಸನಿಗಿದಿರಾಗಿ "ಅವನೇನು ಮಾಡಿದನು? ಅವನನ್ನೇಕೆ ಹಿಡಿಯುತ್ತಿ?" ಎಂದು ಜಬರಿಸಿದನು. ಪೋಲೀಸನು ರೇಗಿ ಆ ಜಬರಿಸಿದವನಿಗೆ ಲಾಠಿಯಿಂದ ಒಂದೇಟು ಬಿಗಿದನು. "ಹೋ!" ಎಂದು ಕೂಗಾಡಿ ಎಂಟು ಹತ್ತು ಮಂದಿ ಆ ಪೋಲೀಸನನ್ನು ಮುತ್ತಿದರು.

ಅಷ್ಟರಲ್ಲಿ ಅಲ್ಲಿಗೆ ಬೇರೆ ನಾಲ್ಕಾರು ಮಂದಿ ಪೋಲೀಸರೂ, ಇನ್ಸ್ಪೆಕ್ಟರರೂ ಧಾವಿಸಿ ಬಂದು 'ಲಾಠೀ ಚಾರ್ಜು' ಜ್ಯಾರಿಗೆ ತಂದರು.

ಕೂಡಲೇ ನೆರೆದ ಜನರೆಲ್ಲಾ ಗಾಬರಿಯಾಗಿ, ಅತ್ತಿತ್ತ ಗುಡ್ಡದಾರಿಯಲ್ಲಿ ನೆಗೆದು ಎತ್ತೆತ್ತ್ಲೋ ಓಡಿಹೋದರು. ಸ್ವಲ್ಪ ಹೊತ್ತಿನಮೇಲೆ ಗಲಭೆಯೆಲ್ಲಾ ಶಾಂತವಾಯಿತು.

## ೨೩

ಶೀನುವಿನ ಭಾಷಣದಿಂದ ಈವರೆಗೂ ಎಲ್ಲಿಯೂ ಹಾಗಾಗಿರಲಿಲ್ಲ. ಇಲ್ಲಿ ಹೀಗಾಗುದಕ್ಕೆ ಅವನು ತುಂಬಾ ಮರುಗಿದನು. ಈ ಗಲಾಟೆ ಅಷ್ಟು ದೊಡ್ಡದಾಗಲಿಕ್ಕೆ ಪೋಲೀಸರ ಅಸಂಸ್ಕೃತಿಯೇ ಕಾರಣವೆಂದು ಅವನು ಊಹಿಸಿದ್ದರೂ ಅದನ್ನು ಹೇಳುವುದು ಹೇಗೆ? ಹೇಳಿ ಪ್ರಯೋಜನವಾದರೂ ಏನು? ಸಾರ್ವಜನಿಕರು ನಾಲ್ಕು ಮಂದಿ ಕೂಡಿದಲ್ಲಿ ಪೋಲೀಸರ ಕಾವಲು ಬೇಕೇ ಬೇಕಲ್ಲವೆ?

ಆದರೆ ಮೊತ್ತಮೊದಲು ಕಲ್ಲು ಬಿಸುಡಿದ ಆ ಪುಂಡನಾರು? ಮತ್ತಾರೂ ಅಲ್ಲ; ಡೈರೆಕ್ಟರ್ ವರದನ ದುರ್ಬೋಧನೆಯಿಂದ ಅವನ ಕೂಡಾಳುಗಳು ಮಾಡಿದ ಕೆಲಸವದು!

ಅಗೋ—ಅಲ್ಲಿ ಪೋಲೀಸು ಇನ್ಸ್ಪೆಕ್ಟರೊಡನೆ, ದೀವಿಯಿಂದ ನಿಂತು ಮಾತಾಡುವವನು ವರದನ ಸಂಗಡಿಗನೊಬ್ಬನಲ್ಲವೆ? ಹೌದು.

ಅವನು ಇನ್ಸ್‌ಪೆಕ್ಟರೊಡನೆ— "ಮತ್ತೆ ಹೀಗೆಲ್ಲಾ ಜನರಿಗೆ ಆವೇಶ ಬರು ವಂತೆ ಮಾತಾಡಿದರೆ ಗಲಾಟೆಯಾಗದೆ ಇದ್ದೀತೆ ? ಇದು ಹಾಳು ಹಂಪೇ ಗ್ರಾಮವಾದುದರಿಂದ ಇಷ್ಟರಲ್ಲಿಯೇ ಹೋಯಿತು. ಇಲ್ಲದಿದ್ದರೆ ಏನಾ ಗುತ್ತಿತ್ತೋ!" 'ವಿದ್ಯಾನಗರ ಸ್ಥಾಪನೆ' ಎಂಬ ವಿಷಯದಲ್ಲಿ ಭಾಷಣ ಮಾಡುವೆನೆಂದು ಪ್ರಚಾರಪಡಿಸಿ, ಗಾಂಧಿಯ ಹೆಸರನ್ನು ಹೇಳಿಕೊಂಡು, ಜನರೊಳಗೆ ಕ್ರಾಂತಿ ಎಬ್ಬಿಸಲಿಕ್ಕೆ ಹೊರಟಿದ್ದಾನೆ ಸಾರ್........" ಎಂದು ಚೆನ್ನಾಗಿ ಮುಗಿಚಿಕೊಟ್ಟನು

ಆ ಪೋಲೀಸ ಇನ್ಸ್‌ಪೆಕ್ಟರರು ಶಾರ್ಟ್ ಹ್ಯಾಂಡ್ ರೈಟರನ ಬಳಿಗೆ ಬಂದು, ಭಾಷಣವನ್ನು ವಿಸ್ತಾರಪಡಿಸಿ ಕೇಳಿನೋಡಿದರು. ಅದರಲ್ಲಿ ಅವರ ಅರ್ಥಕ್ಕೆ ಸರಿಯಾಗಿವ್ಯಾಖ್ಯಾನಮಾಡುವಂತಹ ವಿಷಯಗಳೇನೋ ಇದ್ದುವು ಇದನ್ನು ನೋಡುವಾಗ ಶೀನುವಿಗೆ ಸಂದೇಹವಾಯಿತು ತಾನೊಬ್ಬನೇ ಆಗಿರುತ್ತಿದ್ದರೆ ಅವನೇನೂ ಭಯಪಡುತ್ತಿದ್ದಿಲ್ಲ. ಆದರೆ ತಂಗಿಯನ್ನೂ ವಸಂತಿಯನ್ನೂ ಮುದರಾಸಿನವರೆಗೆ ಕರೆದೊಯ್ಯಬೇಕಲ್ಲವೆ? ಈ ಭಾರಿಯೋಚನೆಯಿಂದ ಮೊದಲು ಅವನಿಗೆ ಸ್ವಲ್ಪ ಚಂಚಲವೆನಿಸಿ ದರೂ, ಡ್ರೈವರ್ ಸದಾಶಿವನ ಮೇಲೆ ಅರ್ಧ ಭಾರ ಬಿಟ್ಟೇ ಅವನು ಹೊರಟಿದ್ದನಷ್ಟೆ? ಹಾಗೇನಾದರೂ ಆದರೆ ಸದಾಶಿವನೇ ಅವರನ್ನು ಮುದ ರಾಸಿನವರೆಗೆ ಕೊಂಡೊಯ್ದು ಬಿಡಬೇಕೆಂದೂ ಶ್ಯಾಮಸುಂದರರ ಆಜ್ಞೆ ಯಾಗಿತ್ತಲ್ಲವೆ? ಆದರೂ ಇಷ್ಟು ದೂರದವರೆಗೆ ತಾನಿದ್ದು, ಇನ್ನೆಲ್ಲಿ ಅಗಲ ಬೇಕಾದೀತೋ ಎಂದು ಅವನು ಕೊಂಚ ಅಳುಕಿಕೊಂಡನು. ಆದರೆ ಅವನ ದೃಢಸಂಕಲ್ಪದಿದಿರಿನಲ್ಲಿ ಆ ಅಳುಕು ಬಹು ಹೊತ್ತು ನಿಲ್ಲಲಿಲ್ಲ.

ಮರುದಿನ ಬೆಳಗ್ಗೆ ಶೀನು ಗೌರೀ ವಸಂತಿಯರನ್ನು ಹಂಪೆಯ ಲ್ಲಿಯೇ ಬಿಟ್ಟು, ಸುತ್ತುಮುತ್ತಣ ಗ್ರಾಮಗಳ ಕಡೆಗೆ ಹೊರಟನು. ಆ ಪ್ರಾಂತವನ್ನೆಲ್ಲಾ ಬಲ್ಲ ಒಬ್ಬರು ಗೌಡರೂ ಒಬ್ಬ ಸ್ವಯಂಸೇವಕನೂ ಅವನೊಂದಿಗೆ ಹೊರಟಿದ್ದರು.

ಗೌರಿ–ವಸಂತಿ, ಕೇಶವ–ಸದಾಶಿವಾದಿಗಳು ಹಂಪೆಯ ಉಳಿದ ಶಿಥಿಲಭಾಗಗಳನ್ನು ನೋಡಲಿಕ್ಕಾಗಿ ಹೊರಟಿದ್ದರು. ಅವರು ಪಂಪಾ ಸರೋವರ, ಶಬರೀ ಗುಹೆ, ವೃಂದಾವನ ಮೊದಲಾದ ನೋಡತಕ್ಕ ಸ್ಥಳ

ಗಳನ್ನು ನೋಡಿಕೊಂಡು, ಸಾಯಂಕಾಲ ವಿರೂಪಾಕ್ಷಾಲಯಕ್ಕೆ ಹಿಂದಿರುಗುವವರಾಗಿದ್ದರು ಶೀನುವೂ ಆಗ ಹಿಂದಿರುಗವುದಾಗಿ ಹೇಳಿದ್ದ.

ಮಾರ್ಗದರ್ಶಕ ಗೌಡರು, ಶೀನುವನ್ನು ಕರೆದುಕೊಂಡು ಆ ಪ್ರಾಂತದ ಗ್ರಾಮಗಳ ವಿಶ್ವಾಸಾರ್ಹರಾದ ಕೆಲವು ಶ್ರೀಮಂತ ಒಕ್ಕಲಿಗರ ಮನೆಗಳಿಗೆಲ್ಲ ಕರೆದೊಯ್ದರು. ಸಾರ್ವಜನಿಕ ಸಭೆಯಲ್ಲಿ ಹೇಳಲಾಗದಂತಹ ವಿಷಯಗಳನ್ನು ಆ ಮನೆಯವರಿಗೆಲ್ಲಾ ವಿವರಿಸಿ ಹೇಳಿ ಕೊನೆಯ ಹೋರಾಟಕ್ಕೆ ಅವರ ಹೃತ್ಪೂರ್ವಕವಾದ ಸಹಾನುಭೂತಿಯ ಸಹಿಯನ್ನು ಪಡೆದನು. ಆ ಸಹಿಯನ್ನು ಕೊಟ್ಟ ಒಕ್ಕಲಿಗರು ಆ ಗ್ರಾಮಗಳಲ್ಲಿ ಒಳ್ಳೆಯ ಪ್ರತಿಷ್ಠೆಯುಳ್ಳ ಶ್ರೀಮಂತರಾಗಿದ್ದರು. ಆ ಗ್ರಾಮವಾಸಿಗಳನ್ನು ಒಗ್ಗೂಡಿಸುವಷ್ಟು ಸಮರ್ಥರೂ ಆಗಿದ್ದರು

ಮಧ್ಯಾಹ್ನದಲ್ಲಿ ಶೀನುವಿಗೆ ಒಬ್ಬ ಹೆಗ್ಗೌಡರ ಮನೆಯಲ್ಲಿ ಆದರ ಸತ್ಕಾರಪೂರ್ವಕವಾಗಿ ಆತಿಥ್ಯವು ನಡೆಯಿತು. ಹೀಗೆ ಸಾಕಷ್ಟು ಪ್ರಚಾರವನ್ನು ಮುಗಿಸಿಕೊಂಡು ಶೀನು ಹಂಪೆಗೆ ಹಿಂದಿರುಗಿದನು. ಓಣಿಗಳಲ್ಲಿಯೂ ಗುಡ್ಡಗಳ ನಡುವಣ ಬಳಸಾದ ದಾರಿಗಳಲ್ಲಿಯೂ, ಕಬ್ಬಿನ ಗದ್ದೆಗಳ ನಡುವಿನ ಹುಣಿಗಳಲ್ಲಿಯೂ ನಡೆಯುತ್ತಾ ತಳವಾರ ಘಾಟಿನಲ್ಲಿ ತುಂಗಭದ್ರೆಯನ್ನು ದಾಟಿದ ಮೇಲೆ, ಶೀನು ತನ್ನ ಬ್ಯಾಗನ್ನು ಸ್ವಯಂಸೇವಕನ ಕೈಗೆ ಕೊಟ್ಟು, ಅದರಲ್ಲಿರುವ ಕಾಗದಪತ್ರ ಹಣ ಮೊದಲಾದ ವಸ್ತುಗಳನ್ನು ಹೊಸಪೇಟೆಯ ಕೇಂದ್ರ ಕಛೇರಿಗೆ ತಲಿಪಿಸುವಂತೆ ಹೇಳಿ ಮುಂದಾಗಿ ಕಳುಹಿಸಿಬಿಟ್ಟನು.

ಅವನು ಹೊರಟು ಹೋದಮೇಲೆ ಶೀನು ಹಿಂದಿನಿಂದ ಗೌಡರೊಡಿಂಗೆ ಮಾತಾಡುತ್ತಾ ನಿಧಾನವಾಗಿ ನಡೆಯುತ್ತಿದ್ದನು. ಹೀಗೆ ಅವರು ಸ್ವಲ್ಪ ಮುಂದೆ ಹೋಗುವಷ್ಟರಲ್ಲಿ, ಇಬ್ಬರು ಪೋಲೀಸರೂ, ಒಬ್ಬರು ಇನ್ಸ್ಪೆಕ್ಟರೂ ಸ್ವಾಕಲ್ಲಿನಲ್ಲಿ ರೊಂಯ್ಯನೆ ಅವರಿದಿರಿಗೆ ಬಂದು, ಅವರನ್ನು ಅಡ್ಡಗಟ್ಟಿ ಇಳಿದರು.

ಇನ್ಸ್ಪೆಕ್ಟರು ಶೀನುವಿಗೆ ಒಂದು 'ವಾರಂಟ'ನ್ನು ತೋರಿಸಿ—
"ನಿಮ್ಮನ್ನು ಕೈದು ಮಾಡಲಾಗಿದೆ'' ಎಂದರು.

ಶೀನು ಬೆರಗುಪಟ್ಟನು.

'ದೇಶೀಯ ಸಂರಕ್ಷಣೆಯ ಕಾನೂನಿಗನುಸಾರವಾಗಿ ಇವನನ್ನು ಅರೆಸ್ಟು ಮಾಡಲಾಗಿತ್ತೆ'ಂದು, ಆ ವಾರಂಟಿನಿಂದ ಅವನಿಗೆ ತಿಳಿದು ಬಂತು.

ಒಡನೆಯೇ ಶೀನು ಸಾವರಿಸಿಕೊಂಡು. ಮುಗುಳ್ನಗುತ್ತ---"ಬಹಳ ಸಂತೋಷ. ನಿಮಗೆ ಸುಸ್ವಾಗತ ! ವಂದೇ ಮಾತರಂ ! " ಎಂದು ಕೈಗಳನ್ನು ಮುಂದಕ್ಕೆ ಚಾಚಿದನು.

ಇನ್ಸ್‌ಪೆಕ್ಟರು— "ನೀವು ತೊಂದರೆ ಮಾಡದಿರುವುದಕ್ಕಾಗಿ ಬಹಳ ಸಂತೋಷ ಇಲ್ಲದಿದ್ದರೆ ಬೇಡೀ ಬಂಧನ ಮಾಡಬೇಕಿತ್ತು" ಎಂದು ಮುಗುಳ್ನಕ್ಕರು.

ಎಲ್ಲಿ ತನ್ನನ್ನೂ ಅರೆಸ್ಟು ಮಾಡಿಬಿಡುವರೋ ಎಂದು ಗಾಬರಿಯಾಗಿದ್ದ ಗೌಡರನ್ನು ನೋಡಿ ಇನ್ಸ್‌ಪೆಕ್ಟರು, ಅವರ ಹೆಸರು ಮನೆ ಊರು ಕೇರಿ ಮುಂತಾದುವುಗಳನ್ನೆಲ್ಲ ಕೇಳಿ ಬರೆದುಕೊಂಡು— " ಸದ್ಯ ನೀವು ನಿಮ್ಮ ದಾರೀ ಹಿಡಿದು ಹೋಗಿ ಸಮ್ಮನ್ ಬಂದಮೇಲೆ ಕೋರ್ಟಿಗೆ ಬರುವಿರಂತೆ" ಎಂದು ನುಡಿದು ಶೀನುವನ್ನು ಸಾಗಿಸಿಕೊಂಡು ಹೊರಟರು.

ವಿಜಯ ವಿಠ್ಠಲರಾಯನ ಗುಡಿಯ ಬದಿಯಿಂದಾಗಿ ಹೋಗುವಾಗ, ಅಲ್ಲಿ ಅದೇ ಫಿಲಿಂ ಕಂಪನಿಯವರ ಲಾರಿಯೂ ಜೀಪ್ ಕಾರೂ ನಿಂತಿತ್ತು. ಅವುಗಳ ಬದಿಯಲ್ಲಿ ವರದನು ತನ್ನ ಕೂಡಾಳುಗಳೊಂದಿಗೆ ನಿಂತಿದ್ದನು. ಶೀನುವನ್ನು ಪೋಲೀಸರು ಅರೆಸ್ಟುಮಾಡಿ ಕರೆದುಕೊಂಡು ಹೋಗುವುದನ್ನು ನೋಡಿ, ಅವನು ತನ್ನ ಪಕ್ಷಕಾರರನ್ನು ಮಿಟುಕುಗಣ್ಣಿನಿಂದ ನೋಡಿ ತುಟಿಕಿಸಿದು, ಮೆಲ್ಲನೆ—"ನನ್ನ ತಂತ್ರ ಎಷ್ಟು ಬೇಗ ಫಲಿಸಿತು!" ಎಂದನು.

ಸಮೀಪಕ್ಕೆ ಬರುತ್ತಲೇ ವರದನು ನಾಲ್ಕು ಹೆಜ್ಜೆ ಮುಂದೆ ಬಂದು— "ಗುಡ್ಈವ್ನಿಂಗ್ ಇನ್ಸ್‌ಪೆಕ್ಟರ್ ಸಾರ್!'' ಎಂದು ಕೈಯೆತ್ತಿದನು.

"ಗುಡ್ಈವ್ನಿಂಗ್!" ಎಂದು ಇನ್ಸ್‌ಪೆಕ್ಟರರೂ ಪಡಿಗೊಟ್ಟರು.

"ಕರ್ತವ್ಯ ಕರ್ಮವೆಂಬುದು ಬಹಳ ಕಠಿನವಲ್ಲವೆ ?—" ಎಂದನು ವರದ.

"ಹೌದು. ಅದರಲ್ಲಿ ತಪ್ಪಲಿಕ್ಕಾಗುತ್ತದೆಯೆ ? "— ಎಂದರು ಇನ್ಸ್‌ಪೆಕ್ಟರು.

ಮತ್ತೆ ವರದನೆಂದ:— "ಈ ಶ್ರೀನಿವಾಸರಾಯರು ನನಗೆ ತುಂಬಾ ಪರಿಚಿತರು ಇವರನ್ನು ಜಾಮೀನಿನಲ್ಲಿ ಬಿಡುವ ಏರ್ಪಾಡಿದ್ದರೆ ನಾನು ನಿಲ್ಲುತ್ತೇನೆ. ಹೇಗೆ? ಆದೀತೆ?"

"ಇದು ಜಾಮೀನಿನಲ್ಲಿ ಬಿಡುವಂತಹ ಕೇಸಲ್ಲ ಮಿಸ್ಟರ್ ಸುಮ್ಮನೆ ನೀವೇಕೆ ತೊಂದರೆ ತೆಗೆದುಕೊಳ್ಳುತ್ತೀರಿ?'' ಎಂದು ಇನ್ಸ್‌ಪೆಕ್ಟರಂದರು.

ವರದನು ಶೀನುವನ್ನು ನೋಡಿ— "ಅಯಾಮ್ ಸ್ಸಾರೀ ! ಮಿಸ್ಟರ್ ಶ್ರೀನಿವಾಸರಾವ್ ! ದೇಶಸೇವೆಯ ಕಾರ್ಯದಲ್ಲಿ ದೇಶಮಾತೆ ಕೊಡುವ ಬಹುಮಾನವೆಂದು ನೀವು ಇದನ್ನು ತಿಳಿಯುತ್ತೀರಲ್ಲವೆ?"

ಶೀನು ಒಂದು ಮುಗುಳ್ನಗುವನ್ನು ತೋರಿ,— " ಇರಲಿ, ವರದರಾಯರೆ, ತಾವು ನನಗಾಗಿ ಏನೂ ಶ್ರಮವಹಿಸಿಕೊಳ್ಳಬಾರದೆಂದು ಕೇಳಿಕೊಳ್ಳುತ್ತೇನೆ "

''ನೀವು ನನ್ನ ಮಿತ್ರರೆಂದು ತಿಳಿದೇ ಹಾಗೆಂದೆ ನಿಮ್ಮ ದಾರ್ಢ್ಯಕ್ಕಾಗಿ ಬಹಳ ಸಂತೋಷ. ಜೈ ಭಾರತಮಾತಾ ಕೀ—" ಎಂದು ಘೋಷಿಸಿದನು ವರದ

ವರದನ ಕೂಡಾಳುಗಳು ''ಜೈ!'' ಎಂದು ಪ್ರತಿಧ್ವನಿಸೈದರು.

ಪೋಲೀಸರು ಶೀನುವನ್ನು ಸಾಗಿಸಿಕೊಂಡು ಮುಂದೆ ನಡೆದರು

ಪಂಪಾಪತಿಯ ಬೀದಿಯನ್ನು ಸೇರಿದಮೇಲೆ, ಹೊಸಪೇಟೆಯ ಬೀದಿಯನ್ನು ಹಿಡಿಯುವುದನ್ನು ಕಂಡು ಶೀನು, ಪೋಲೀಸ್ ಇನ್ಸ್‌ಪೆಕ್ಟರನ್ನು ಕುರಿತು,— ''ಸಾರ್, ಕೊಂಚ ಆ ಛತ್ರದ ಬಳಿಗೆ ಹೋಗೋಣ. ಅಲ್ಲಿ ನನ್ನ ತಂಗಿ ಮೊದಲಾದವರಿದ್ದಾರೆ ದಯಮಾಡಿ ಅವರೊಡನೆ ಒಂದೆರಡು ಮಾತಾಡಲು ಕೊಂಚ ಬಿಡುವು ಕೊಡಿ.'' ಎಂದು ಕೇಳಿಕೊಂಡನು

''ಅಯಾಮ್ ಸಾರೀ ಆಗುವುದಿಲ್ಲ ಮಿಸ್ಟರ್! ರೂಲ್ಸು ಬಹಳ ಕಠಿನವಿದೆ ! ಹಾಗೇನಾದರೂ ಹೇಳಿಕೊಳ್ಳುವುದಿದ್ದರೆ ಪತ್ರ ಬರೆಯುವಿರಂತೆ." ಎಂದರು ಇನ್ಸ್‌ಪೆಕ್ಟರು.

"ಹಾಗಲ್ಲ; ನನ್ನ ತಂಗಿಯೊಡನೆ ಮಾತ್ರ ಎರಡೇ ಎರಡು ಮಾತು....................."

"ಆಗುವುದಿಲ್ಲವಯ್ಯಾ ಆಗುವುದಿಲ್ಲ. ನೀವು ಅಲ್ಲಿ ಮಾತಾಡುವುದು, ಅವರು ಅಳುವುದು, ನಾಲ್ಕಾರು ಮಂದಿ ಸೇರುವುದು, ಗಲಾಟೆ! ಅದಕ್ಕೇ ರೂಲ್ಸು ಖಂಡಿತವಾಗಿಟ್ಟಿದ್ದಾರೆ ಸುಮ್ಮನೆ ನಡೆಯಿರಿ ನೋಡುವಾ. ಇಂತಹ ಕೆಲಸಕ್ಕೆಲ್ಲ ಇಳಿದ ಮೇಲೆ, ತಾಯಿ, ತಂಗಿ, ಅಣ್ಣ, ತಮ್ಮ ಅಂತ ಮೋಹ ಇಟ್ಟುಕೊಂಡರೆ ಆಗುತ್ತೆಯೇ ಸ್ವಾಮಿ! ನಿಮ್ಮ ಗಾಂಧಿ, ಮಾಲವೀಯರು ಬಂತೆಂದರೆ, ತಿರುಗಿ ಕೂಡ ನೋಡದೆ, ಚಟ್ಟನೆ ಎದ್ದು ಹೊರಡುತ್ತಾರಲ್ಲ?" ಎಂದರು ಇನ್ಸ್‌ಪೆಕ್ಟರು

ನಿಜ! ಅವರು ಹೇಳಿದ್ದು ಪೂರಾ ನಿಜ ತಾನೇಕೆ ಹಾಗೆ ಕೇಳಿ ಹೆಡ್ಡನಾದೆನೋ ಎನಿಸಿತು ಶೀನುವಿಗೆ

"ಸರಿ. ಮೋಹವಿದ್ದರೂ ನಿಮ್ಮ ರೂಲ್ಸುಗಳು ಅದನ್ನೆಲ್ಲ ತಪ್ಪಿಸುತ್ತವಲ್ಲ! ಒಂದು ತುಂಡು ಕಾಗದವನ್ನಾದರೂ ಕೊಡಿರಿ!" ಎಂದನು ಶೀನು

ಇನ್ಸ್‌ಪೆಕ್ಟರು ಒಂದು ಕಾಗದವನ್ನೂ ಪೆನ್ಸಿಲನ್ನೂ ಅವನಿಗೆ ಕೊಟ್ಟರು ಶೀನು ಅದರಲ್ಲಿ ಈ ಕೆಳಗಿನಂತೆ ಬರೆದನು: —

"ತಂಗಿ ಗೌರೀ ವಸಂತಿಯರೆ! ಕೇಶವ-ಸದಾಶಿವರೆ! ನಾನು ಏನಾಗಿರುವೆನೆಂಬುದನ್ನು ನೀವು ಈಗಾಗಲೇ ತಿಳಿದಿರಬಹುದು ಇದು ನಾವೆಲ್ಲಾ ಇದಿರು ನೋಡಿದ ಸಂಗತಿಯೇ ಆದುದರಿಂದ, ನೀವೇನೂ ಚಿಂತಿಸುವ ಕಾರಣವಿಲ್ಲ. ನೀವು ಜಾಗರೂಕತೆಯಿಂದ ನಾಳೆ ಮದರಾಸಿಗೆ ಹೊರಡಿರಿ ಹೆಚ್ಚು ಬರೆಯಲು ನನಗೆ ಅನುಕೂಲವಿಲ್ಲ. ತಂಗಿ ಗೌರಿ! ನಿನಗೊಂದು ಮುಖ್ಯವಾದ ಮಾತು:— ನೀನು ಸೇರುವ ಮಹಿಳಾಭ್ಯುದಯ ಮಂಡಲಿಯಲ್ಲಿ ನಿನ್ನ ಅತ್ತಿಗೆಯಾದ ಸೌ. ಸುಂದರಿ ಇದ್ದಾಳೆ. ಅವಳನ್ನು ಅಗತ್ಯವಾಗಿ ನೋಡು ಅವಳಿಂದ ನಿಮಗೆ ತುಂಬಾ ಉಪಕಾರವಾದೀತು. ಮುಂದೆ ಸಾಧ್ಯವಾದರೆ, ನಾನು ಶ್ರೀ ಗಜವದನರಾಯರ ವಿಳಾಸಕ್ಕೆ ನಿನಗೆ ಪತ್ರ ಬರೆದೇನು. ವಸಂತಿ! ಗೌರಿಯನ್ನು ನಿನ್ನ ಸ್ವಾಧೀನಕ್ಕೆ ಬಿಟ್ಟಿದ್ದೇನೆ. ನಿನ್ನ ಒಡಹುಟ್ಟಿದವಳಂತೆಯೇ ಅವಳನ್ನೂ

ನೋಡುವಿಯೆಂದು ನಂಬಿದ್ದೇನೆ. ನಿನಗೆ ದೇವರು ಕಲ್ಯಾಣ ಮಾಡಲಿ.—

ಶೀನು.''

ಈ ಪತ್ರವನ್ನು ಒಬ್ಬ ಪೋಲೀಸನು ವಿರೂಪಾಕ್ಷ ದೇವಾಲಯದ ಬಳಿಯ ಛತ್ರದ ಕಡೆಗೆ ಕೊಂಡೊಯ್ದನು ಪೋಲೀಸ್ ಇನ್ಸ್‌ಪೆಕ್ಟರು, ಶೀನುವನ್ನು ಕರೆದುಕೊಂಡು ಕಮಲಾಪುರದ ಬೀದಿಗೆ ಹತ್ತಿದರು. ಅಲ್ಲಿ ಕಾದು ನಿಂತಿದ್ದ ಒಂದು ಪೋಲೀಸ್ ವ್ಯಾನಿನಲ್ಲಿ ಶೀನುವನ್ನು ಏರಿಸಲಾಯಿತು. ಅವರೊಳಗೆ ಅವನ ಜತೆಗಾರನಾಗಿದ್ದ ಆ ಸ್ವಯಂಸೇವಕನೂ ಸಿಕ್ಕಿ ಬಿದ್ದಿದ್ದನು. ಅವನು ಕಳುಹಿಸಿದ ಆ ಬ್ಯಾಗು ಪೋಲೀಸರ ವಶವಾಗಿತ್ತು !

ಅದನ್ನು ಕಾಣುತ್ತಲೇ ಶೀನುವಿನ ಎದೆ ಧಗ್ಗೆಂದಿತು. ಅದರೊಳಗಿರುವ ಕಾಗದಗಳೆಲ್ಲಾ ರಾಜದ್ರೋಹದ ಕುರುಹುಗಳು!" ಎಲ್ಲಿಯೋ ನಡೆಯುವ ಯುದ್ಧಕ್ಕೆ ನಾವೇಕೆ ಸಹಾಯ ಮಾಡಬೇಕು ? " "ಆಶೆ ತೋರಿಸಿ ಮೋಸಮಾಡುವ ಬ್ರಿಟಿಷರು!'' "ಬ್ರಿಟಿಷ್ ಚಕ್ರಾಧಿಪತ್ಯವು ತೊಲಗಲಿ!—ತೊಲಗಿಸೋಣ ! '' "ಶತ್ರು ನಾಲ್ಕು ಪಕ್ಕಗಳಲ್ಲಿಯೂ ಯುದ್ಧದಲ್ಲಿ ಸಿಕ್ಕಿ ಹಣ್ಣಾಗುತ್ತಿರುವಾಗಲೇ, ನಾವೂ ಅವರನ್ನು ಜಜ್ಜಿ ಹಾಕಿಬಿಡಬೇಕು!" "ಈ ಕಾಲವನ್ನು ಕಳೆದುಕೊಂಡರೆ ಇಂತಹ ಬಂಗಾರದಂತಹ ಕಾಲವು ಇನ್ನೆಂದೂ ಬಾರದು! ಆದ್ದರಿಂದ ಎಲ್ಲರೂ ಸಿದ್ಧರಾಗಿರಿ! ಮಹಾತ್ಮರ ಆಜ್ಞೆ ಎಂದು ಹೊರಡುವುದೋ ಆ ಕೂಡಲೇ ಎಲ್ಲರೂ ಹೋರಾಟದ ರಂಗಕ್ಕಿಳಿಯಬೇಕು! ಸರಕಾರೀ ಉದ್ಯೋಗಸ್ಥರೆಲ್ಲರೂ ರಾಜೀನಾಮೆ ಕೊಟ್ಟು ಬಿಡಬೇಕು. ಯಾರೂ ತೀರ್ವೆಯನ್ನು ಕೊಡಬಾರದು ಪೋಲೀಸರೆಲ್ಲ ತಮ್ಮ ತಮ್ಮ ಕೆಲಸವನ್ನು ಬಿಡಬೇಕು. ಪೋಲೀಸ್ ಸ್ಟೇಶನ್ನುಗಳನ್ನು ಕೈವಶಪಡಿಸಿಕೊಳ್ಳಬೇಕು ತಂತೀ ಕಂಬಿಗಳನ್ನು ಕತ್ತರಿಸಬೇಕು. ಮಿಲಿಟರೀ ಮಂದಿಗಳು ಓಡೋಡಿ ಬರದಂತೆ ರೈಲು ರಸ್ತೆಗಳನ್ನು ಎಬ್ಬಿಸಿ ಹಾಕಬೇಕು....................." ಹೀಗೆ ಹಲವು ತರದ ಕ್ರಾಂತಿಬೋಧನೆಗಳೆಲ್ಲ ಆ ಕಾಗದ ಪತ್ರಗಳಲ್ಲಿದ್ದುವು.

ಹೀಗಿರಲು ಶೀನುವಿನ ಮೇಲೆ ಕಠಿನ ಕಾಯಿದೆಯ ಬಂಧನವು ಬಿದ್ದುದರಲ್ಲಿ ಏನಾಶ್ಚರ್ಯ? ಒಂದೆರಡು ದಿನ ಅವನನ್ನು ಹೊಸಪೇಟೆ

ಯಲ್ಲಿಯೋ 'ರಿಮಾಂಡಿ'ನಲ್ಲಿಟ್ಟಿದ್ದರು. ಆದರೆ ಅವನನ್ನು ನೋಡಲು ಯಾರಿಗೂ ಅನುಮತಿಯಿರಲಿಲ್ಲ.

ಮರುದಿನ ಗೌರಿ ಮೊದಲಾದವರು ಅವನನ್ನು ವಿಚಾರಿಸಿಕೊಂಡು ಬಂದಿದ್ದರು ಅವರಿಗೂ ಅವನ ದರ್ಶನಕ್ಕೆ ಅನುಮತಿ ಸಿಕ್ಕಲಿಲ್ಲ. ''ಆ ಹೆಸರಿನ ಖೈದಿ ಇಲ್ಲಿ ಯಾರೂ ಇಲ್ಲ"ವೆಂದೇ ಪೋಲೀಸರು ಸಾಧಿಸಿ ಬಿಟ್ಟರು.

## ೨೪

ಗೌರಿಗೆ ಅಪಾರ ದುಃಖವಾಯಿತು ಆದರೆ ಮಾಡುವುದೇನು? ಶೀನು ಮೊದಲೇ ಹೇಳುತ್ತಿದ್ದ;— ತಾನು ಮದರಾಸಿನವರೆಗೆ ಬಂದೇನೆಂಬ ನಂಬುಗೆಯಿಲ್ಲ, ಹಾಗೇನಾದರೂ ಆದರೆ ಹೀಗೆ ಹೀಗೆ ನಡೆಯ ಬೇಕು, ಎಂದು ಅವನು ಗೌರಿಗೆ ಒತ್ತೊತ್ತಿ ಹೇಳಿದ್ದನು. ವಸಂತಿ ಮೊದಲಾದವರಿಗೂ ಹೇಳಿದ್ದನು ಸದಾಶಿವನಿಗೂ ಇವರನ್ನು ಜಾಗರೂಕತೆಯಿಂದ ಮದರಾಸಿಗೆ ಮುಟ್ಟಿಸುವ ಭಾರವು ನಿನ್ನದೇ ಎಂದು ಹೇಳಿದ್ದನು. ಹೀಗೆ ಇದಿರು ನೋಡಿ ಕಾದಿದ್ದ ಸಂಭವಿಸಿದುದರಿಂದ, ಸುಮ್ಮನೆ ವ್ಯಸನಪಟ್ಟು ಪ್ರಯೋಜನವೇನೂ ಇಲ್ಲ. ಆದರೆ ಆ ಸಂಭವವು ಹೊಸಪೇಟೆ, ಮೈಸೂರು, ಮಡಿಕೇರಿ ಮೊದಲಾದ ಜನಸಂಖ್ಯೆ ಹೆಚ್ಚಾಗಿರುವ ಸಣ್ಣ ದೊಡ್ಡ ನಗರಗಳಲ್ಲಿ ನಡೆಯದೆ, ಹಂಪೆಯಂತಹ ಹಾಳೂರಿನಲ್ಲಿ ನಡೆದುದೊಂದು ಆಶ್ಚರ್ಯವೇ ಆಗಿತ್ತು! ಯಾರಿಗೂ ಅದರ ಮರ್ಮವು ತಿಳಿಯಲಿಲ್ಲ. ಸ್ವಾಭಾವಿಕವೆಂದೇ ತಿಳಿದಿದ್ದರು.

ಚಿಂತಾಕ್ರಾಂತಳಾದ ಗೌರಿಗೆ ವಸಂತಿ ತುಂಬಾ ಸಮಾಧಾನ ಹೇಳಿದಳು. ಆದರೆ ಗೌರಿ ತನ್ನನ್ನು ತಾನೇ ಸಮಾಧಾನ ಪಡಿಸಿಕೊಳ್ಳುವಷ್ಟು ಬುದ್ಧಿವಂತಳೇ ಆಗಿದ್ದಳು. ಶೀನು ಪೋಲೀಸನ ಕೈಯಲ್ಲಿ ಬರೆದು ಕಳುಹಿಸಿದ ಆ ಪತ್ರವೇ ಅವಳ ಮನಸ್ಸನ್ನು ಅದಷ್ಟು ತಣಿಸಿತ್ತು. ಹೊಸಪೇಟೆಗೆ ಹೋಗಿ ಅಣ್ಣನನ್ನು ನೋಡಬಹುದೆಂಬ ಆಶೆಯೂ ನಿರಾಶೆಯೂ ಮೇಲೆ— ''ಆಯಿತು! ಅಣ್ಣನಿಗೆ ಶ್ರೇಯಸ್ಸಾಗಲಿ! ಎಷ್ಟೋ ದೇಶಸೇವ

ಕರು ಜೈಲಿಗೆ ಹೋಗಿ ಹೋಗಿ ಮರಳಲಿಲ್ಲವೆ? ಇಮ್ಮಡಿ ತೇಜಸ್ಕರಾಗಿ ಬೆಳಗಲಿಲ್ಲವೆ? ಹಾಗೆಯೇ ಅಣ್ಣನೂ ಬೆಳಗಿ ಬರಲಿ!'' ಎಂದು ಪ್ರಾರ್ಥಿಸಿಕೊಂಡಳು.

ನಂತರ ಅವರ ಮೋಟಾರು ಕಾರು ಮದರಾಸಿಗೆ ಹೋಗುವ ಹೆಬ್ಬೀದಿಯಲ್ಲಿ ಉರುಳಿಕೊಂಡು ಹೋಗತೊಡಗಿತು. ಮುಂದಿನ ಸೀಟಿನಲ್ಲಿ ಡ್ರೈವರ್ ಸದಾಶಿವನೂ, ಹುಡುಗ ಕೇಶವನೂ ಕುಳಿತಿದ್ದರು ಹಿಂದಿನ ಸೀಟಿನಲ್ಲಿ ಗೌರಿ ವಸಂತಿಯರಿದ್ದರು. ಇವರಿಬ್ಬರ ಮನಸ್ಸು ಯೋಚನಾಮಗ್ನವಾಗಿತ್ತು. ಇಬ್ಬರ ಯೋಚನೆಯೂ ಬೇರೆ ಬೇರೆ ವಿಧವಾದುವು ವಸಂತಿಯ ಯೋಚನೆ ಸಿನಿಮಾಕಾಶದ ಕಡೆಗೇ ಎಕ್ಕಿ ಎಕ್ಕಿ ಹೋಗುತ್ತಿದ್ದಿತು. ಅಲ್ಲಿ ತಾನೊಬ್ಬಳು ಉಜ್ವಲ ತಾರೆಯಾಗುವ ಕನಸ್ಸನ್ನು ಕಲ್ಪಿಸಿಕೊಳ್ಳುತ್ತಿದ್ದಳು ಡೈರೆಕ್ಟರ್ ವರದನೇ ಚಂದ್ರನಾಗಿರುವಂತೆ ನೆನೆಯುತ್ತಿದ್ದಳು. ಆಹಾ! ಎಷ್ಟು ಚೆನ್ನಾಗಿದ್ದಾನೆ ಆ ವರದ! ಕನಸಿನಲ್ಲಿ ಪ್ರತ್ಯಕ್ಷನಾಗುವ ಮನ್ಮಥಾಕಾರನಂತಿದ್ದನಲ್ಲವೆ? ವಸಂತಿಯಂತೆಯೇ ಅವನೂ ಕೆಂಪಗಿದ್ದಾನೆ! ಇಪ್ಪತ್ತೈದು ವರ್ಷ ವಯಸ್ಸಾಗಿದ್ದೀತು! ಕುಬೇರಯುವಕ! ಪರಂತು ಅವನಿಗೆ ಮದುವೆಯಾಗಿದ್ದೀತೆ? ಇದ್ದರೂ ಇದ್ದೀತು! ಅವನ ಮಡದಿ—ಅವಳೆಂತಹ ಉಜ್ವಲರಮಣಿಯೋ! ಏನೋ ಯಾರಿಗೆ ಗೊತ್ತು!...............ವರದನ ಯೋಚನೆ ಏನೋ—ಏಕೋ ವಸಂತಿಗೊಂದು ವಿಧವಾದ ವೇದನೆಯನ್ನುಂಟು ಮಾಡುತ್ತಿತ್ತು. ಮುಖ್ಯವಾಗಿ ಅವಳಿಗೆ ಸಿನಿಮಾಕಾಶದಲ್ಲಿ ಸುಂದರ ಧ್ರುವತಾರೆಯಾಗಿ ಮೆರೆಯಬೇಕಾಗಿತ್ತು. ಅವಳ ಮನೋಹರವಾದ ಭಾವಚಿತ್ರವು ದೇಶವಿದೇಶಗಳ ಪತ್ರಿಕೆಗಳಲ್ಲಿ, ನಯವಾದ ಆರ್ಟ ಪೇಪರಿನಲ್ಲಿ ಪ್ರಿಂಟಾಗಿ, ಜನರೆಲ್ಲ ಕುತೂಹಲದಿಂದ ನೋಡುವಂತೆ ಪ್ರಕಟವಾಗಬೇಕಿತ್ತು!............ಆದರೆ ಸಿನಿಮಾರಂಗದಲ್ಲಿರುವವರೆಲ್ಲ ಕೆಟ್ಟು ಹೋಗುವರೆಂಬ ಅಪಖ್ಯಾತಿಯೊಂದುಂಟಲ್ಲವೆ? ಅದನ್ನು ಸುಳ್ಳು ಮಾಡುವಷ್ಟು ಸಮರ್ಥಳು ತಾನಿರುವೆನೆಂಬ ನಂಬುಗೆ ಅವಳಿಗೆ. ಹಲವರು ಕೆಟ್ಟರೂ, ಕೆಲವರು ಒಳ್ಳೆಯವರಿಲ್ಲವೆ? ಇದೆಲ್ಲಾ ವರದನು ಕೊಟ್ಟ ಭರವಸೆಯಿಂದ ಅವಳು ಕಟ್ಟುತ್ತಿರುವ ಆಕಾಶ ಗೋಪುರ. ತಂದೆ ಶ್ಯಾಮಸುಂದರರಿಗೂ, ಅವಳು ಕಾಗದ ಬರೆ

ದಿದ್ದಾಳೆ. ಅವಳು ಬರೆದ ರೀತಿಗೆ ಅವರು ಒಪ್ಪಲೇಬೇಕು. ಒಪ್ಪುವರು. ಅವರ ಉತ್ತರವು ಮುದ್ರಾಸಿನ ಮಾವನ ಮನೆಗೆ ಬಂದೀತು. ಆದರೆ ...

ವರದನ್ ಈ ಕಪ್ಪು ಹೆಣ್ಣು ಗೌರಿಯನ್ನೆ ಅಷ್ಟು ಒತ್ತಾಯ ಮಾಡಿದನಲ್ಲ! ಅದೇಕೆ? ಇವಳ ನಾಟ್ಯ ಗೀತಗಳನ್ನು ನೋಡದೆಯೇ ಅವನಷ್ಟು ಒತ್ತಾಯ ಮಾಡಿರುವಾಗ, ನೋಡಿದ ಮೇಲೆ ಬಿಟ್ಟಾನೆ? ಹೌದು! ವರದನೇನು? ಎಲ್ಲರೂ ಈ ಗೌರಿಯ ಅಂಗಭಂಗಿಗಳಿಗೆ ಮನಮೆಚ್ಚುವರೇ! ಪುಣ್ಯಕ್ಕೆ ಇವಳು ಒಪ್ಪದೇ ಇದ್ದುದು ಒಳ್ಳೆಯದೇ ಆಯಿತು ಮದರಾಸಿಗೆ ಹೋಗುತ್ತಲೇ ಇವಳನ್ನು ಬೇಗನೇ ಮಹಿಳಾಭ್ಯುದಯ ಮಂಡಲಿಗೆ ಜಾರಿಸಿದರೆ ತೀರಿತು. ಇವಳು ಕಲಿತು ಉದ್ಧಾರವಾಗಿ ಬರುವುದರೊಳಗೆ ವಸಂತಿಯ ಕೀರ್ತಿ ಹರಡಿಸಿ ಬಿಡಬಹುದು................

ಗೌರಿಯ ಯೋಚನೆಯೋ—ಅವಳ ಅಣ್ಣ ಶೀನುವನ್ನು ನೆನೆದುಕೊಂಡೇ ಸಾಗಿತ್ತು. ದೇಶಸೇವಕನಾದುದರಿಂದಲೇ ಶೀನಣ್ಣನಿಗೆ ಆ ಗತಿ ಬಂತಲ್ಲವೆ? ಅಣ್ಣನ ಆ ಸೇವಾಕಾರ್ಯವನ್ನೇ ಗೌರಿಯೂ ಏಕೆ ಕೈಕೊಂಡು ಮುಂದುವರಿಸಬಾರದು? ಈ ನಾಟ್ಯ–ಸಂಗೀತಗಳೆಲ್ಲಾ ಯಾರಿಗೆ ಬೇಕಾಗಿದೆ? ಅವಳ ಭಾವೀ ಪತಿ!....................ಅವನೂ ಇದೇ ದೇಶಸೇವೆಯ ಕೈಂಕರ್ಯದಿಂದ ಎಲ್ಲಿ ಸೆರೆಮನೆಗೆ ಬಿದ್ದಿದ್ದಾನೋ ಏನೋ! ................ಸೆರೆಮನೆಗೆ ಸೇರಿದರೇನಾಯಿತು? ಎಂದಾದರೂ ಬಿಡುಗಡೆಯುಂಟೇ ಉಂಟಲ್ಲವೆ? ಹೇಗಿದ್ದರೂ ಇನ್ನೊಂದು ವರ್ಷದೊಳಗೆ ಸ್ವಾತಂತ್ರ್ಯೋದಯವು ಖಂಡಿತವೆಂಬ ಅಭಿಪ್ರಾಯವು ಬಲವಾಗಿ ಊರೆಲ್ಲ ಹರಡಿದೆ. ಮಹಾತ್ಮರು ತಾಳ್ಮೆಗೆಡುವ ಲಕ್ಷಣ ಕಾಣುತ್ತಿದೆ ಮಹಾತ್ಮರೇ ತಾಳ್ಮೆಗೆಟ್ಟರೆ ಏನಾದರೊಂದು ಆಗಿಯೇ ತೀರಬೇಡವೆ? ಈ ಪರಿಸ್ಥಿತಿಯಲ್ಲಿ ಗೌರಿಯೂ ದೇಶಸೇವೆಯ ರಂಗದಲ್ಲಿ ಏಕೆ ಧುಮುಕಿಬಿಡಬಾರದು? ಹೆಂಗುಸಾದರೇನು? ಹೆಂಗುಸರಿಂದಲೇ ಮಹತ್ಕಾರ್ಯಗಳು ಸುಲಭವಾಗಿ ಸಾಧಿಸುವುದೆಂದು ಮಹಾತ್ಮರೇ ಹೇಳಿರುವರಲ್ಲವೆ? ಎಷ್ಟು ಮಂದಿ ಮಹಿಳಾಮಣಿಯರು ದೇಶಸೇವೆಯಿಂದ ಸೆರೆಮನೆಗೆ ಹೋಗಿಲ್ಲ? ಗೌರಿ ಉತ್ಸಾಹದಿಂದ— "ಆಹಾ! ನನಗೂ ಶಕ್ತಿಯಿದೆ! ನಾನೂ ಭಾಷಣ ಮಾಡಬಲ್ಲೆ! ಸಭೆ ಸೇರಿಸಬಲ್ಲೆ! ಕಾಯಿದೆ ಭಂಗಿಸಬಲ್ಲೆ! ಇಳಿದು ಬಿಡಲೆ? ಈಗಲೇ ಹಾರಿ ಬಿಡಲೆ?..............."

ಕಾರು ಭರದಿಂದ ಧೂಳೆಬ್ಬಿಸಿಕೊಂಡು ಧಾವಿಸುತ್ತಿತ್ತು. ಹಾರಿ ಬಿಡುವುದೆಲ್ಲಿಗೆ ? ಅವಳ ಯೋಚನೆ ಮತ್ತೆ ಇನ್ನೊಂದು ಮಗ್ಗುಲು ಹಾಕಿತು............... ಆದರೆ ಅಣ್ಣನ ಆಜ್ಞೆ ಹಾಗಿಲ್ಲ. ನನ್ನ ಭಾವೀ ಪತಿಯ ಕೋರಿಕೆಯೂ ಹಾಗಿಲ್ಲ. ನಾನು ಸಂಗೀತದಲ್ಲಿ—ನೃತ್ಯಶಾಸ್ತ್ರ ದಲ್ಲಿ ಉತ್ತೀರ್ಣಳಾಗಬೇಕೆಂದೇ ಅವರ ಪ್ರಬಲೇಚ್ಛೆ. ಅವರ ಆಜ್ಞೆ ಯಂತೆ ನಡೆಯುವುದೇ ಲೇಸು. ಒಂದು ಗುರಿಯನ್ನು ಹಿಡಿದು ಹೊರಟ ಮೇಲೆ, ಆ ಗುರಿಯನ್ನು ಬದಲಾಯಿಸಲೇ ಬಾರದು ಅಲ್ಲದೆ ಈ ಅಣ್ಣನೂ—ಗೋಪಾಲರಾಯರೂ ಎಲ್ಲಿದ್ದಾರೋ ಗೊತ್ತಿಲ್ಲ ಅವರು ನಂಬಿರುವಂತೆ ನಾನು ಮಹಿಳಾಭ್ಯುದಯ ಮಂಡಲಿಯಲ್ಲಿಯೇ ಇದ್ದರೆ ಅವರ ಕಾಗದವಾದರೂ ಅಲ್ಲಿಗೆ ಬಂದೀತು ದೇವರ ದಯೆಯಿಂದ ಅಣ್ಣ ನಿಗೆ ಬೇಗನೇ ಬಿಡುಗಡೆಯಾದರೆ, ನನ್ನನ್ನು ಹುಡುಕಿಕೊಂಡು ಅಲ್ಲಿಗೇ ಬಂದಾರು................"

ಕಾರು ಬಳ್ಳಾರಿಯನ್ನು ತಲುಪಿತು. ಕಂಟೋನ್ಮೆಂಟನ್ನು ದಾಟಿ, ಕೌಲು ಬಜಾರನ್ನು ಕಳೆದು, ಬ್ರೂಸ್ ಪೇಟೆಯನ್ನು ಬಿಟ್ಟು, ಗಾಂಧೀ ನಗರದಲ್ಲಿ ಸಾಗಿತು. ಹಿಂದೆ ಗೌರಿಯ ಅಣ್ಣ ಶೀನು ಅಲ್ಲಿಯೇ ಅಡಗಿದ್ದನು ಗಾಂಧೀನಗರದ ವಕೀಲ ವೆಂಕೋಬರಾಯರ ಮನೆಯಲ್ಲಿಯೇ ಅಡುಗೆ ಕೆಲಸ ಮಾಡುತ್ತಿದ್ದನು. ಅವನ ಪುಸ್ತಕದ ಸರ್ವನಾಮವನ್ನೆ ಅಪಹರಿಸಲೆತ್ನಿಸಿದ ಪಿ. ಎಂ. ಮಂಗಲಕರರು ಅಲ್ಲಿಯೇ ಸತ್ಯನಾರಾಯಣ ಪೇಟೆಯಲ್ಲಿದ್ದರು ಈಗ ಅವರು ತೀರಿ ಹೋಗಿದ್ದರು. ಅವರ ಹೆಂಡತಿ ಕಮಲಾಬಾಯಿ ಈಗ ಅಲ್ಲಿ ಸಂನ್ಯಾಸಿನಿಯಂತೆ ಇದ್ದಾಳಂತೆ. ಮಂಗಲ ಕರರು ಅಥವಾ ಮುಕುಂದರಾಯರು ಅವಳಿಗೆ ಹೇರಳವಾದ ಧನವನ್ನು ಕೊಟ್ಟಿದ್ದರು. ಅವಳು ಅಲ್ಲೊಂದು "ಕಲಾಸಂಘ"ವನ್ನು ಸ್ಥಾಪಿಸಿ ಅದರ ಅಧ್ಯಕ್ಷಿಣಿಯಾಗಿಯೂ ಇದ್ದಾಳಂತೆ. ಆಹಾ ! ಶೀನಣ್ಣ ಮೊತ್ತ ಮೊದಲು ಆ ಕಮಲೆಯನ್ನೆ ಕಾದಲಿಸಿದ್ದನು. ಕಡೆಗೆ ಅವಳ ಗತಿ ಹೀಗಾಯಿತು. ಶೀನಣ್ಣನ ಹೆಂಡತಿಯಾಗಿ ಬಂದ ಆ ಸುಂದರಿ, ಇದೇ ಕಮಲೆಯ ಪತಿ, ಮುಕುಂದರಾಯರ, ಮೊದಲನೇ ಕುರೂಪಿ ಹೆಂಡತಿಯ ಮಗಳು ! ಆ ಸುಂದರಿ ಫಿಲಿಂನಲ್ಲಿ ವಿಕಟ ನಟಿಯಾಗಿ ವಿಖ್ಯಾತಳಾಗಿ ಈಗ, ಅದೆಲ್ಲ ಬಿಟ್ಟು ಮಹಿಳಾಭ್ಯುದಯ ಮಂಡಲಿಯಲ್ಲಿದ್ದಾಳೇಕೆ ?

ಶೀನಣ್ಣನಿಗೆ ಅದು ಮೊದಲೇ ಹೇಗೆ ಗೊತ್ತಾಯಿತು ? ಅವಳು ಶೀನಣ್ಣನಿಗೆ ಕಾಗದಗೀಗದ ಬರೆಯುತ್ತಿರುವಳೋ ಏನೋ!'' ಸುಂದರಿಯನ್ನು ಅಗತ್ಯವಾಗಿ ನೋಡಿ ಮಾತಾಡು'' ಎಂದು ಶೀನಣ್ಣನು ಗೌರಿಗೆ ಒತ್ತಿ ಬರೆದಿರುವದನ್ನು ಮನದಂದರೆ, ಅವನಿಗೆ ಅವಳ ಮೇಲೆ ಒಳ್ಳೆಯ ಅಭಿಪ್ರಾಯವಿರುವ ಹಾಗಿದೆ ! ಇದ್ದೀತು ಪಾಪ ! ಅವಳೇನು ಅಂತಹ ತಪ್ಪು ಮಾಡಿದ್ದಾಳೆ ! ಅವಳ ಕುರೂಪಕ್ಕೆ ಅವಳು ಹೊಣೆಯೆ? ಫಿಲಿಂ ಮಂಡಲಿಯಲ್ಲಿ ಅವಳಿಗೇನೋ ಕೆಡುಕಾಗಿರಬೇಕು .... .... ......... ಆ ಡೈರೆಕ್ಟರ್ ವರದನ್! ಅಬ್ಬಾ! ಅವನೆಂತಹ ಅಧಿಕಪ್ರಸಂಗಿ! ಶೀನು ಹಂಪೆಯಲ್ಲಿಯೇ ಗೌರಿಗೆ ಅವನನ್ನು ಕುರಿತು ಹೇಳಿದ್ದ;— " ಈ ವರದನು ಸುಂದರಿಯ ಅಣ್ಣ! ನನಗೆ ಗೊತ್ತಿದೆ'' ಎಂದು ಒಳ್ಳೇ ಠಾಕುಠೀಕಿನವ ಆ ವರದ ! ಎಷ್ಟು ಚೆನ್ನಾಗಿ ನೃತ್ಯವೆಸಗುತ್ತಾನೆ! ಅವನ ಅಧಿಕಪ್ರಸಂಗತನದ ನಡತೆಯನ್ನು ಮೆಚ್ಚಲಾಗದಿದ್ದರೂ, ಅವನ ನೃತ್ಯ ಕೌಶಲವನ್ನು ಮೆಚ್ಚಲೇಬೇಕು! ಗೌರಿ ನರ್ತನಕ್ಕಿಳಿಯಲೇಬೇಕೆಂದು ಅವನದೆಷ್ಟು ಒತ್ತಾಯ ! ................ಛೀ! ಛೀ! ಈ ವಸಂತಿ ಎಂಥವಳು ! ಇವಳಂತಹಳೆಂದು ಗೌರಿಗೆ ಗೊತ್ತೇ ಇರಲಿಲ್ಲ! ಬಹಳ ಆತುರದವಳು! ಕಲಿಯಲಿಕ್ಕೆ ಇನ್ನೂ ತುಂಬಾ ಇರುವಾಗ, ಅಷ್ಟರೊಳಗೆ ಫಿಲಿಂನೊಳಗೆ ಕಾಲು ಹಾಕುವುದೇ? ಅಲ್ಪಸ್ವಲ್ಪ ಕಲಿತವರನ್ನು ಫಿಲಿಂ ಚಕ್ರವು ತನ್ನಿಷ್ಟದಂತೆ ಬಾಗಿಸಿಬಿಟ್ಟೀತು ! ಚೆನ್ನಾಗಿ ಕಲಿತು ಪಳಗಿದನಂತರ ಒಂದು ವೇಳೆ ಸಿನಿಮಾ ರಂಗಕ್ಕೆ ಹೋದರೆ, ಆಗ ಸಿನಿಮಾ ರಂಗವನ್ನು ನಮ್ಮಿಷ್ಟಾನುಸಾರವಾಗಿ ಬಾಗಿಸಲಾದೀತು. ಅದರಲ್ಲಿ ಯೋಗ್ಯ ಕಲಾಸಂಸ್ಕಾರವನ್ನು ಸಾಧಿಸಲಾದೀತು................

ಯೋಚನೆಗೆ ಅಂತ್ಯವಿಲ್ಲ ನಿದ್ದೆಯಲ್ಲಿಯೂ. ಅರೆನಿದ್ದೆಯಲ್ಲಿಯೂ, ಎಚ್ಚರದಲ್ಲಿಯೂ ಅದು ನಡೆಯುತ್ತಲೇ ಇರುತ್ತದೆ. ಕಾರೂ ಸಾಗುತ್ತಿತ್ತು. ಬಳ್ಳಾರೀಪ್ರಾಂತದ ಸಮತಟ್ಟಾದ ಕರಿಮಣ್ಣಿನ ನೆಲದ ನಡುವೆ ಬೀದಿಯಲ್ಲಿ ಹಗರಿಯ ಕಡೆಗೆ ಸಾಗುತ್ತಿತ್ತು ಕಾರು. ಸುತ್ತಲೂ ಬಹು ದೂರದ ವರೆಗೆ ಹತ್ತಿಯ ಹೊಲಗಳು ಕಾಣುತ್ತಿದ್ದುವು.

ಹಗರಿಯನ್ನು ದಾಟಿ ಮುಂದೆ ಹೋಯಿತು. ದೊಡ್ಡ ಸಂಧಿಸ್ಥಾನವಾದ ಗುಂತಕಲ್ಲನ್ನು ಮುಟ್ಟಿದಾಗ ಹೊತ್ತು ಕಂತಿತು. ಆ ರಾತ್ರಿ

ಯನ್ನು ಅಲ್ಲಿಯೇ ಕಳೆದು ಮತ್ತೆ ಮರುದಿನ ಬೆಳಗಾಗುತ್ತಲೇ ಪ್ರಯಾಣ ಹೊರಟರು ಮಧ್ಯಾಹ್ನವಾಗುವಾಗ ಒಂದು ಗ್ರಾಮವನ್ನು ಸೇರಿದರು. ಅಲ್ಲೊಂದು ಹೋಟಲಿನ ಬದಿಯಲ್ಲಿ ಸದಾಶಿವನು ಕಾರನ್ನು ನಿಲ್ಲಿಸಿದನು ಹೋಟಲಿನಲ್ಲಿ ಎಲ್ಲರೂ ತಿನಿ—ಪಾನಗಳನ್ನು ತೀರಿಸಿಕೊಂಡರು ಸದಾಶಿವನು ಕಾರಿಗೆ ಬೇಕಾದ ನೀರು ಕರಿ ಎಂಕಿಗಳನ್ನು ತುಂಬಿಸಿಕೊಂಡನು. ಟಯರುಗಳೆಲ್ಲಾ ಸರಿಯಾಗಿವೆಯೇ ಎಂದು ನೋಡಿಕೊಂಡನು. ಮತ್ತೆ ಎಲ್ಲರೂ ಕಾರನ್ನು ಆರೋಹಿಸಿಕೊಂಡರು. ಹೊರಟಿತು ಕಾರು.

೨೫

ಆ ಬೀದಿ, ಪೂನಾ, ಬೊಂಬಾಯಿ—ಮದ್ರಾಸುಗಳನ್ನು ಮುಟ್ಟುತ್ತಿರುವ ದೊಡ್ಡ 'ಹೈರೋಡು' ನಮ್ಮ ಪ್ರಯಾಣಿಕರು ಮದರಾಸಿನಭಿಮುಖವಾಗಿ ಸ್ವಲ್ಪ ದೂರ ಸಾಗುವಷ್ಟರಲ್ಲಿ, ಹಿಂದಿನಿಂದ ಭಯಂಕರ ಭೂತಶಬ್ದವನ್ನು ಮಾಡುತ್ತ, ಬೃಹದಾಕಾರದ ಮಿಲಿಟರೀ ಲಾರಿಯೊಂದು ಓಡಿ ಬರುತ್ತಿದ್ದಿತು. ತಿರುಗಿ ನೋಡಿದ ವಸಂತಿ— "ಸದಾಶಿವಾ! ಜಾಗ್ರತೆ! ಮಿಲಿಟ್ರೀ ವ್ಯಾನು ಬರುತ್ತೆ!" ಎಂದಳು.

ಸದಾಶಿವನು ಬದಿಗೆ ಸರಿದು ನಿಧಾನ ಗತಿಯಿಂದ ಕಾರನ್ನು ಬಿಡುತ್ತ, ಆ ಮಿಲಿಟ್ರೀ ಭೂತಕ್ಕೆ ಸೈಡುಗೊಟ್ಟನು. ಅದು ಕಿವಿ ಕಿವುಡಾಗುವಂತೆ ಪ್ರಳಯ ಗರ್ಜನೆ ಮಾಡುತ್ತ, ಅವರ ಬದಿಯಿಂದಲೇ ನುಗ್ಗಿ ಮುಂದಕ್ಕೆ ಓಡಿ ಹೋಯಿತು. ಅದು ಎಬ್ಬಿಸಿ ಹಾಕಿದ ಕೆಂಧೂಳಿಯಿಂದ ಆಕಾಶವೆಲ್ಲಾ ಮುಚ್ಚಿಹೋಯಿತು! ಅಬ್ಬಾ! ಅದರೊಳಗಿದ್ದವರು ಎಷ್ಟು ಭಯಂಕರ ವೇಷಿಗಳು! 'ಮಾರಿಹೋಯಿತೆ'ಂದು ನೋಡಿದರೆ, ಹಿಂದಿನಿಂದ ಇನ್ನೊಂದು ಅದರಂತಹುದೇ ಬರುತ್ತಿತ್ತು!

ಯುದ್ಧಕಾಲವಲ್ಲವೆ? ಆಗ ಈ ಬಗೆಯ ಮಿಲಿಟ್ರೀ ವ್ಯಾನುಗಳು, ಯಾವಾಗ ಯಾವ ಬಿದಿಯಲ್ಲಿ ನೋಡಿದರೂ ಎಲ್ಲಿಂದೆಲ್ಲಿಗೋ ಭೂತಗಳ ಹಾಗೆ ಓಡಾಡಿಕೊಂಡೇ ಇದ್ದುವು. ಅವುಗಳಲ್ಲಿ ಭಯಂಕರಾಕಾರಿಗಳಾದ, ಉಕ್ಕಿನ ಟೋಪಿ, ಮೊಗವಾಡ, ಬಂದೂಕು, ಮೊದಲಾದವುಗಳಿಂದ

ತುಂಬಿದ ಸೇನಾಜನರೂ, ಯುದ್ಧೋಪಯೋಗಿಯಾದ ಏನೇನೋ ಬ್ರಹ್ಮಾಂಡದಂತಹ ಲೋಹ ಸಾಮಗ್ರಿಗಳೂ ಹೇರಿಕೊಂಡು, ರಭಸ ವಾಗಿ ಕಡುಸದ್ದಿನಿಂದ ಧಡಧಡಿಸಿಕೊಂಡು ಓಡಾಡುತ್ತಿದ್ದುವು. ಕೆಲವು ಬಾರಿ ದಿಕ್ಕನ್ನೆ ಬಗೆದುಕೊಂಡು ಬರುವ ಯಾವುವೋ ನೂತನ ವಿಲಕ್ಷಣ ಮೃಗಗಳ ಸಾಲಿನಂತೆ, ಸಮಾನಾಂತರದಲ್ಲಿ ಸಮಾನವಾದ ವೇಗದಿಂದ ಒಂದರಹಿಂದೊಂದಾಗಿ ಸಾಲುಸಾಲಾಗಿ ಓಡಿಬರುತ್ತಿದ್ದುವು. ಈಗಾದರೂ ಅಂತಹ ಒಂದು ಸಾಲೇ ಹೊರಟಿತ್ತೇನೋ !

ಆಗೋ ಮತ್ತೊಂದು ! ಅದು ಮೊದಲಿನದಕ್ಕಿಂತಲೂ ಹಿರಿದು ! ಶಬ್ದವೂ ಹಿರಿದು ! ಅದರಲ್ಲಿದ್ದ ಮನುಷ್ಯರೆಲ್ಲ ಸೊಪ್ಪುಸದೆಯ ಕೊಂಬೆ ರೆಂಬೆಗಳನ್ನು ಹಿಡಿದುಕೊಂಡ ಹಾಗಿದೆ ! ಅಥವಾ ಅದರ ಮೇಲುಭಾಗ ವನ್ನೆಲ್ಲಾ, ಸೊಪ್ಪುತುಂಬಿದ ಮರದಗೆಲ್ಲುರೆಂಬೆಗಳಿಂದ ಮುಚ್ಚಿದ್ದ ರೇನೋ ! ಆಗಸದೊಳಗಿಂದ ವಿಮಾನದಲ್ಲಿ ನೋಡಿದರೆ, ಇವೆಲ್ಲಾ ಮರ ಗಳ ಹಾಗೆಯೇ ಕಾಣಿಸಲಿಕ್ಕಾಗಿರಬೇಕು !

ಸದಾಶಿವನು ಮತ್ತೆ ದಾರಿ ಬಿಟ್ಟು ಬದಿಯಲ್ಲೇ ಕಾರನ್ನು ಸಾಗಿಸು ತ್ತಿದ್ದನು. ಮೇಲೆ ಸೊಪ್ಪುಸದೆಗಳನ್ನು ಹೇರಿಕೊಂಡು, ಹಿಂದಿನಿಂದೊಂದು ಕಬ್ಬಿಣ ಸಾಮಾನುಗಳ ಬಂಡಿಯನ್ನೆ ಎಳೆದುಕೊಂಡು ಧಡಧಡಾಯಿಸಿ ಕೊಂಡು ಮುಂದಕ್ಕೆ ಓಡಿತು ಮತ್ತೊಂದು ಲಾರಿ ! ಅದರ ಕರ್ಕಶ ಶಬ್ದಕ್ಕೆ ನಮ್ಮವರೆಲ್ಲಾ ಕಿವಿಮುಚ್ಚಿಕೊಂಡರು.

ಮತ್ತೆ ಹಿಂದೆ ನೋಡಿದರೆ ಇನ್ನೊಂದು ಬರುತ್ತಿದೆ ! ಆ ಬೀದಿಯ ಸುತ್ತುಮುತ್ತಣ ಆಕಾಶವೆಲ್ಲಾ ಕೆಂಧೂಳುಮಯ ! ಸದಾಶಿವನಿಗೆ ಕಣ್ಣೇ ಕಾಣಿಸದೆ, ಜಾಗರೂಕತೆಯಿಂದ ನಿಧಾನವಾಗಿ ಕಾರನ್ನು ಬಿಡುತ್ತಿದ್ದನು.

ಆಗ ಗೌರಿ,— "ಓಹೋ ! ಸಾಲುಸಾಲಾಗಿ ತುಂಬಾ ಬರುವ ಹಾಗಿವೆ ಸದಾಶಿವಾ ! ನಾವು ಇಂದು ಪ್ರಯಾಣವನ್ನು ನಿಲ್ಲಿಸಿ ಬಿಡು ವುದು ಒಳ್ಳೆಯದು" ಎಂದಳು.

ಆದರೆ ನೆನೆದ ಮಾತ್ರಕ್ಕೆ ಅಲ್ಲಿಯೇ ನಿಂತು ಬಿಡುವಂತಿಲ್ಲ ! ಅದು ಸುತ್ತುಮುತ್ತೂ ಕಣ್ಣೆಟುಕಿದಷ್ಟು ದೂರದ ವರೆಗೂ, ಒಂದು ಹೊಲವೋ ಒಂದು ಮನೆಯೋ ಒಂದು ಜನವೋ ಇಲ್ಲದ ಖಾಲಿಯಾದ ಸಮತಟ್ಟಾದ ಕುರುಚಲು ಪೊದರುಗಳು ಬೆಳೆದು ತುಂಬಿರುವ ಹಳುವು ನೆಲವಾಗಿತ್ತು.

ದೂರದೂರದಲ್ಲಿ ಗುಂಡುಗುಂಡಾದ ಕಲ್ಲುಗಳಿಂದ ತುಂಬಿದ, ಗಂಡ ಶೈಲಗಳು ನಿಂತುಕೊಂಡಿದ್ದುವು ಆದುದರಿಂದ ಸದಾಶಿವನು— "ಇಲ್ಲಿಯೇ ನಿಲ್ಲಲು ಸರಿಯಾದ ಸ್ಥಳವಲ್ಲವಮ್ಮಾ ಏನೂ ಹೆದರಿಕೆಯಿಲ್ಲ ಹೇಗೆಯೋ ಬದಿಯಲ್ಲಿಯೇ ಹೋಗಿ ಮುಂದಿನ ಗ್ರಾಮದಲ್ಲಿ ತಂಗುವ'' ಎಂದನು

ಇನ್ನೂ ಒಂದು ಮಿಲಿಟ್ರೀ ಲಾರಿ ಸಿಡಿಲಿನಂತಹ ಶಬ್ದಮಾಡುತ್ತ ಅವರನ್ನು ಹಿಂದಟ್ಟಿ ಮುಂದಕ್ಕೆ ಓಡಿಹೋಯಿತು !

''ಅಬ್ಬ!" ಎಂದು ಎಲ್ಲರೂ ಮತ್ತೆ ಕಿವಿ ಮುಚ್ಚಿಕೊಂಡರು.

ಹುಡುಗ ಕೇಶವನು— " ಸದಾಶಿವಾ ! ಆ ಮಿಲಿಟ್ರೀ ಲಾರಿಯ ಹಿಂದೆಯೇ, ಅದೇ ಸಾಲಿನಲ್ಲಿ ಅದೇ ವೇಗದಲ್ಲಿ ನಮ್ಮ ಕಾರನ್ನೂ ಬಿಡಲಿಕ್ಕಾಗದೆ?'' ಎಂದು ತನ್ನ ಹುಡುಗ ಬುದ್ಧಿಯಂತೆಯೇ ಕೇಳಿದನು.

ಸದಾಶಿವನು ನಕ್ಕು,— ''ಚೆಂದಾದೀತು ! ಅವು ಬಿರುಗಾಳಿಯ ಓಟದಲ್ಲಿ ಓಡುವಾಗ ನಮ್ಮ ಕಾರು ನಜ್ಜಾಗಿ ಹೋದೀತು ಗೊತ್ತೆ ? ಮಿಲಿಟ್ರೀಯೊಂದಿಗೆ ಪಂಥ ಕಟ್ಟುವುದು. ಬಾಳೇಹಣ್ಣು ತಿಂದ ಹಾಗಲ್ಲ!" ಎಂದನು

ಮತ್ತೂ ಒಂದು ಮಿಲಿಟ್ರೀ ಲಾರಿ ಅವರನ್ನು ಹಿಂದೆಸೆದು ಮುಂದೋಡಿತು !

ಅದರ ಹಿಂದೆಯೇ ಒಂದು ಮೋಟಾರು ಬೈಕ್ಕು ಬಕಬಕಿಸಿಕೊಂಡು ಧಾವಿಸಿಹೋಯಿತು ! ಅದರ ಮೇಲೆ ಒಬ್ಬ ಕಬ್ಬಿಣದ ಟೊಪ್ಪಿಗೆಯ ಮೊಗವಾಡದ ಮನುಷ್ಯನು ಮಿಂಚಿದ !

ಆ ಮೋಟಾರು ಬೈಕ್ಕಿನ ಹಿಂದಿನಿಂದಲೇ ಒಂದು ಜೀಪ್ ಕಾರು ಪ್ರಚಂಡ ವೇಗದಿಂದ ಬಂದು ದಾಟಿ ಮುಂದೆ ಹೋಯಿತು. ಹೀಗೆಯೇ ಒಂದರಹಿಂದೊಂದಾಗಿ ಮಿಲಿಟರೀ ಲಾರಿಗಳೂ ನಮ್ಮ ಕಾರಿನ ಪಕ್ಕದಲ್ಲಿ ಭರ್ರಭರ್ರನೆ ಹಾದುಹಾದುಕೊಂಡು ಮುಂದಕ್ಕೆ ಓಡುತ್ತಿದ್ದುವು. ಈ ಸಮಯದಲ್ಲಿ ಇದಿರಿನಿಂದ ಕಾರೋ ಗಾಡಿಯೋ ಬಂದುದಾದರೆ ಜರುಗಿ ಹೋಗಲು ಆ ಬೀದಿಯು ಅಗಲವೇ ಸಾಲದು ಬೀದಿಯ ಇಕ್ಕೆಲಗಳಲ್ಲಿಯೂ ಮುಳ್ಳುಕಳ್ಳಿಗಳೂ ಗಿಡಗಳೂ, ಕಣಿಗಳೂ ತೋಡುಗಳೂ ಇದ್ದುವು. ಈ ಹಾಳು ಹಳುವಿನ ಬೀದಿ ಇನ್ನೆಷ್ಟು ನೀಳವಿದೆಯೋ,

ಮುಂದಿನ ಗ್ರಾಮವು ಯಾವಾಗ ಬಂದೀತೋ ಎಂದು ಗೌರೀ ವಸಂತಿ ಯರು ಜೀವವನ್ನು ಕೈಯಲ್ಲಿ ಹಿಡಿದುಕೊಂಡು ನೋಡುತ್ತಿದ್ದರು.

ಅಯ್ಯೋ ! ಇದಿರಿನಲ್ಲಿ ಬರುತ್ತಿರುವುದೇನು ?.......................
ಮಿಲಿಟ್ರೀ ಲಾರಿ! ಅದು ಹಿಂದಕ್ಕೆ ಹೋಗಲು ಸದಾಶಿವನು ಸ್ಥಳಬಿಟ್ಟು ಕೊಡಬೇಕಲ್ಲವೆ? ಸದಾಶಿವನು ಹಿಂದೆಯೂ ಮುಂದೆಯೂ ನೋಡುತ್ತ ಕಟ್ಟೆಚ್ಚರದಿಂದ ಸಾಗುತ್ತಿದ್ದನು "ಸದಾಶಿವ! ಮುಂದಿನಿಂದೊಂದು ಬರುತ್ತಿದೆ! ಜಾಗ್ರತೆ! ಜಾಗ್ರತೆ!" ಎಂದು ಹೆದರುತ್ತಾ ಹೇಳಿದಳು ವಸಂತಿ.

ಮುಂದಿನ ಲಾರಿ ಘನವೇಗದಿಂದ ತೀರ ಸಮೀಪಕ್ಕೆ ಬಂದು ಬಿಟ್ಟಿತು. ಹಿಂದಿನಿಂದ ಬರುವಂತಹುದು, ಕೊಂಚ ದೂರದಲ್ಲಿ ಬರು ತ್ತಿತ್ತು ಹಿಂದಿನದು ಸಮೀಪಿಸುವುದರೊಳಗೆ, ಮುಂದಿನದನ್ನು ಕಳು ಹಿಸಿ ಬಿಡಬಹುದೆಂದುಕೊಂಡು ಸದಾಶಿವನು ರಸ್ತೆಯ ಎಡಗಡೆಗೆ ತಿರುಗಿ, ಮುಂದಿನದಕ್ಕೆ ದಾರಿ ಬಿಟ್ಟನು.

ಇದಿರಿನಿಂದ ಬಂದ ಆ ಮಿಲಿಟ್ರೀ ಲಾರಿ, ನಮ್ಮ ಕಾರಿನ ಮಡ್ ಗಾಡನ್ನು ಉಜ್ಜಿಕೊಂಡು ಹೋಯಿತು. ಆಗ ಸಿಡಿಲಿನಂತಹುದೊಂದು ಶಬ್ದ, ಈ ಕಾರಿನೊಳಗಿದ್ದವರೂ ಲಾರಿಯೊಳಗಿದ್ದವರೂ "ಹೋ!" ಎಂದು ಏಕಕಾಲಕ್ಕೆ ಕೂಗಿಕೊಂಡ ಧ್ವನಿ! ಸದಾಶಿವನು ಸಡನ್ನ್ ಬ್ರೇಕ್ ಹಾಕಿ ಕಾರು ನಿಲ್ಲಿಸಿದನು. ಮಿಲಿಟ್ರೀ ಲಾರಿಯೂ ನಿಂತಿತು. ಹಿಂದಿ ನಿಂದ ಬಂದ ಮಿಲಿಟರೀ ವ್ಯಾನು, ಸದಾಶಿವನ ಕಾರನ್ನು ಢೀಕೊಟ್ಟು ಹಾರಿಸಿಕೊಂಡು ಹೋಗಲು ಇಷ್ಟವಿಲ್ಲದೆಯೋ ಏನೋ ನಿಂತಿತು. ಹಾಗೆಯೇ ಅದರ ಹಿಂದಿನಿಂದ ಬರುವವುಗಳೂ ನಿಂತುವು

ಅಷ್ಟರೊಳಗೆ ಹೆದರಿ ಕಂಗಾಲಾಗಿ ಹೋಗಿದ್ದ ವಸಂತಿ, ಗಡಿಬಿಡಿ ಯಿಂದ ಬಾಗಿಲು ತೆರೆದು ಗೌರಿಯನ್ನೆಳೆದುಕೊಂಡು ಕೆಳಕ್ಕೆ ಹಾರಿ ಬಿಟ್ಟಿ ದ್ದಳು ಅವಳ ಅಷ್ಟು ಭಯಕ್ಕೆ ಕಾರಣವೇನೆಂದರೆ, ಹಿಂದಿನಿಂದ ಬರು ತ್ತಿದ್ದ ಆ ಲಾರಿಯನ್ನೂ ಅದು ಬರುವ ರಭಸವನ್ನೂ ಕಂಡು ಎಲ್ಲಿ ನಮ್ಮ ಕಾರಿಗೆ ಢೀಕೊಟ್ಟು ನಮ್ಮನ್ನು ನಜ್ಜುಗುಜ್ಜು ಮಾಡುವುದೋ ಎಂದಂಜಿ, ಅವಳು "ಕೇಶವಾ! ಸದಾಶಿವಾ!" ಎಂದು ಕೂಗುತ್ತ, ಗೌರಿಯನ್ನೆಳೆದು

ಕೊಂಡು ಕೆಳಗೆ ಹಾರಿ ಬೀದಿಯ ಅಂಚಿಗೆ ಹೋಗಿ ನಿಂತುಬಿಟ್ಟಳು. ಗೌರಿಯೂ ವ್ಯೆತಿಳಿಯದೆ ಅವಳನ್ನನುಸರಿಸಿದ್ದಳು.

ಒಂದರಹಿಂದೊಂದಾಗಿ ಅನೇಕ ಲಾರಿಗಳು ಬೀದಿಯಲ್ಲಿ ನಿಂತಿದ್ದುವು.

ಮುಂದಿನಿಂದ ಬಂದು ನಮ್ಮ ಕಾರನ್ನು ಅರ್ಚಿಕೊಂಡು ದಾಟಿ ನಿಂತಿದ್ದ ಲಾರಿಯೊಳಗಿನಿಂದ, ನಾಲ್ಕು ಮಂದಿ ಭೂತಾಕಾರದ ಸೇನೆಯಾಳುಗಳು ಬಂದೂಕುಗಳನ್ನೆತ್ತಿಕೊಂಡೇ ಕೆಳಕ್ಕೆ ಹಾರಿ ಈ ಕಾರನ್ನು ಮುತ್ತಿಕೊಂಡರು

ಕಾರನ್ನಿಳಿದ ಗೌರೀ ವಸಂತಿಯರಿಗೆ ಮತ್ತೆ ಬಂದು ಕಾರನ್ನೇರಲಾಗದಂತಾಯಿತು.

ಹಿಂದಿನ ಲಾರಿಗಳಿಂದಲೂ ಪಟಲಾವಿನಾಳುಗಳು ಸಾಯುಧಪಾಣಿಗಳಾಗಿ ಇಳಿದು— "ಕ್ಯಾ ಭೈ! ಕ್ಯಾ ಭೈ! ಕ್ಯಾ?" ಎನ್ನುತ್ತ ಇಲ್ಲಿಗೇ ಬರುವುದನ್ನು ನೋಡಿ, ಗೌರಿಯೂ, ವಸಂತಿಯೂ ಹೆದರಿ ಬೀದಿಯನ್ನು ಬಿಟ್ಟು ಅತ್ತ ಹಳುವಿಗೆ ಸೇರಿದರು. ಆಗ ಗೌರಿ,— "ವಸಂತೀ! ಹೀಗೆ ನಾವು ದೂರ ಓಡುವುದು ತಪ್ಪು ಧೈರ್ಯವಾಗಿರೋಣ! ನಮ್ಮ ಕಾರಿನ ಬಳಿಯಲ್ಲಿಯೇ ನಾವಿರಬೇಕಲ್ಲವೆ, ದೂರ ಓಡಬಾರದು" ಎಂದು ಚಡಪಡಿಸಿದಳು

ಆದರೆ ಬಲು ಭೀತೆಯಾದ ವಸಂತಿ,— "ಅಯ್ಯೋ! ಅಯ್ಯೋ! ಬಾರೇ! ಬಾರೇ! ಈ ದೆವ್ವಗಳು ಹೆಂಗುಸರನ್ನು ಕಂಡರೆ ಬಿಡುವುದಿಲ್ಲಂತಲ್ಲೇ! ನಾವಿವರ ಕಣ್ಣಿಗೆ ಬೀಳಬಾರದು ಬಾರೆ." ಎಂದು ಎಳೆಯುತ್ತಾ ಹೋದಳು.

ಢೀ ಕೊಟ್ಟ ಲಾರಿಯ ಡ್ರೈವರನು ಸದಾಶಿವನನ್ನು "ಡ್ಯಾಂ! ಢೀಂ! ಫೂಲ್!—" ಎಂದು ಕಂಡಾಬಟ್ಟೆ ಬಯ್ಯಲಾರಂಭಿಸಿದ್ದನು.

"ಏಯ್! ನಿನಗೆ ಕಣ್ಣಿಲ್ಲ? ಹೀಗೋ ಡ್ರೈವಿಂಗ್ ಮಾಡೋದು? ರೋಡು ಪೂರಾ ನಿನಗೇ ಸ್ವಂತವೆಂದು ತಿಳಿದಿದ್ದೀಯಾ? ಇದು ಮಿಲಿಟ್ರೀ ರೋಡು! ಎಲ್ಲಿಗೋ ನೀನು ಹೋಗೋದು? ಜತೆಯಲ್ಲಿ ಹೆಂಗುಸರೇಕೊ? ಯಾವ ರೂಟಿನವನೋ ನೀನು? ಎಲ್ಲಿಯೋ ನಿನ್ನ ಲೈಸನ್ಸ್?——" ಏನೇನೋ ಕೇಳಿದನು ಒಬ್ಬ. ಇನ್ನೊಬ್ಬನು—ಏಯ್! ನಿನ್ನ ಜತೇಲಿ

ಹೆಂಗುಸರಿದ್ದಾರಲ್ಲಾಂತ ಬಿಟ್ಟಿದ್ದೇವೆ. ಇಲ್ಲದಿದ್ದರೆ— ಇಗೋ-ಈ ಬಂದೂಕಿನಿಂದ ನಿನ್ನ ಬೂದಿ ಹಾರಿಸಿ ಬಿಡುತ್ತಿದ್ದೆವು!" ಎಂದು ಬಂದೂಕಿನಿಂದ ಅಭಿನಯಿಸಿಯೇ ತೋರಿಸಿದನು.

ಅಷ್ಟರೊಳಗೆ ಇನ್ನೊಬ್ಬನು,— "ಏಯ್ ! ಏನೋ ಮಿಕಿಮಿಕಿ ನೋಡೋದು? ಹೋಗೋ ನಿನ್ನ ದಾರಿ ಹಿಡಿದು ! ನಡೂ ರೋಡಿನಲ್ಲಿ ನಿಂತಿದ್ದಾನೆ!— ಅವೋ ಭ್ಯಾ!'' ಎಂದು ಜಬರಿಸಿದನು.

ಅವನ ಅಧಿಕಾರವಾಣಿಯನ್ನು ಕೇಳಿ, ಎಲ್ಲ ಪಟಲಾಮಿನವರೂ ಅವರ ಲಾರಿ—ಕಾರುಗಳಲ್ಲಿ ಬಡಬಡನೆ ಏರಿಕೊಂಡರು ಸದಾಶಿವನನ್ನು ಕುರಿತು "ಚಲೋ ಜಾವ್!" ಎಂದು ಮತ್ತೂ ಮತ್ತೂ ಅವಸರಪಡಿಸಿದರು.

ಸದಾಶಿವನು ಅತ್ತಿತ್ತ ನೋಡುತ್ತಿದ್ದನು. ಕೇಶವನು ಅಳಲಿಕ್ಕೇ ಸುರುಮಾಡಿದನು! ಹೆಂಗುಸರನ್ನು ಬಿಟ್ಟು ಎಲ್ಲಿಗೆ 'ಜಾವ್?' ಪಾಪ ! ಸದಾಶಿವನು ಅತ್ತಿತ್ತ ನೋಡುತ್ತಿದ್ದನು!

ಲಾರಿಯವರು ಅವಸರ ಪಡಿಸಿ ಬೈಯುತ್ತಲೇ ಇದ್ದರು.

ಹಿಂದಿನ ಲಾರಿಗಳಿಗೆ ದಾರಿ ಕೊಡಬೇಕಲ್ಲವೆ?

ಇವನ ಕಾರಿಗೆ ಧೀ ಕೊಟ್ಟ ಆ ಲಾರಿಯೊಳಗಿನಿಂದೊಬ್ಬನು—"ಏ! ಬೇಗನೆ ಹೋಗಪ್ಪಾ!" ಎಂದು ಗರ್ಜಿಸಿ, ತನ್ನ ಗಾಡಿಯನ್ನು ಮುಂದಕ್ಕೆ ಬಿಟ್ಟನು.

ಕೂಡಲೇ ಸದಾಶಿವನು ಕಾರನ್ನು ಬದಿಗೆ ತಂದು ನಿಲ್ಲಿಸಿ, ಕಾರಿನಿಂದಿಳಿದು, ವಸಂತಿ ಗೌರಿಯರೆಲ್ಲಿಯೆಂದು ಕತ್ತು ತಿರುಗಿಸಿ ನೋಡಲಾರಂಭಿಸಿದನು.

ಕೇಶವನು "ವಸಂತಕ್ಕಾ! ವಸಂತಕ್ಕಾ!—" ಎಂದು ಅಳುತ್ತಿದ್ದನು.

ಗೌರೀ ವಸಂತಿಯರನ್ನು ಕಾಣದೆ ಸದಾಶಿವನಿಗೆ ತುಂಬ ಭಯವಾಯಿತು. ಅವನೇನೂ ಅಂಜಿಕೆಯ ಪುಡಿಯಾಳಲ್ಲ ಒಳ್ಳೇ ಧೈರ್ಯಶಾಲಿಯಾದ ಕಾಟ್ವಾಳೇ. ಆದರೂ ಜೀವದ ಹಂಗುದೊರೆದು ಕಾದಲಿಕ್ಕೆ ಹೊರಟಿರುವ ಮಿಲಿಟರೀಯವರೆಂದರೆ ಯಾರಿಗೆ ತಾನೇ ಭಯವಾಗಲಿಕ್ಕಿಲ್ಲ? ಹೆಂಗುಸರ ವಿಷಯವಾಗಿ ಮಿಲಿಟ್ರೀಯವರ ಕ್ರೂರ ವರ್ತನೆಯ

ಹೃದ್ರಾವಕವಾದ ಅನೇಕ ಸಮಾಚಾರಗಳನ್ನು ಅವನು ಕೇಳಿದ್ದಾನೆ. ಆ ಮಿಲಿಟ್ರೀ ಲಾರಿ ತನ್ನ ಕಾರಿಗೆ ಢೀ ಕೊಟ್ಟು, ಏನೂ ಜೀವಾಪಾಯ ತಾರದೆ ಅಷ್ಟರಲ್ಲೇ ಉಳಿಸಿದ್ದು ಪುಣ್ಯವೆಂದು ತೋರಿದರೆ, ಈಗ ಅದಕ್ಕಿಂತ ಹೆಚ್ಚಿನ ಗಂಡಾಂತರ ಬಂದಿತೆ? ಗೌರೀ—ವಸಂತಿಯರನ್ನು ಬಿಟ್ಟು, ಅವರಲ್ಲಿಯೂ ವಸಂತಿಯನ್ನು ಬಿಟ್ಟು ಅವನ ಒಡೆಯರಾದ ಶ್ಯಾಮಸುಂದರರಿಗೆ ಅವನು ಹೇಗೆ ಮುಖವನ್ನು ತೋರಿಸುವುದು? ಹೀಗಾಗುವುದರ ಬದಲಾಗಿ, ಅದು ಡ್ಯಾಶ್‌ಕೊಟ್ಟು, ತನ್ನನ್ನು ಒಮ್ಮೆಗೇ ಕೊಂದು ಬಿಟ್ಟಿದ್ದರೆ ಒಳ್ಳೆಯದಿತ್ತಲ್ಲಾ—ಎಂದು ತೋರಿತು ಅವನಿಗೆ

ಕಣ್ಣೋಟವನ್ನೋಡಿಸುತ್ತಾ ಅವನು ಬೀದಿಯ ಈಚೆಯ ಬದಿಗೆ ಬಂದು ನಿಂತಾಗ ಅಗೋ---! ಹಳುವಿನಲ್ಲಿ ಗೌರೀ ವಸಂತಿಯರು ಅವನ ಕಣ್ಣಿಗೆ ಬಿದ್ದರು! ಒಮ್ಮೆಲೇ ಅವನ ಭಯವು ಹತ್ತಿಯಂತೆ ಹಾರಿತು! ಹಾಳು ಹೆದರಿಕೆಯ ಮನಸ್ಸು, ಸಣ್ಣದೊಂದು ಸಂಶಯವನ್ನು ಗುಡ್ಡದಷ್ಟು ಭಯಂಕರವಾಗಿ ಕಲ್ಪಿಸಿ ಬಿಡುತ್ತದೆ!

ಗೌರೀ ವಸಂತಿಯರು ಕೈಕೈ ಹಿಡಿದುಕೊಂಡು, ಎಂಟು ಗೇಣಿನ ಮೈಯನ್ನು ನಾಲ್ಕು ಗೇಣಾಗಿಸಿಕೊಂಡು ನಿಂತಿದ್ದರು. ಬೀದಿಯಲ್ಲಿ ನಿಂತಿರುವ ಲಾರಿಗಳು ಇನ್ನೂ ಹಾಗೆಯೇ ನಿಂತಿದ್ದುವು ಹಲವು ಪಟಲಾವಿುಗಳು ಇನ್ನೂ ಆ ಲಾರಿಯ ಬಳಿಯಲ್ಲಿ ಅತ್ತಿತ್ತ ಅಡ್ಡಾಡುತ್ತಿದ್ದರು ಇವನ್ನು ನೋಡುತ್ತ ಆ ರಮಣಿಯರು ಹೆದರಿಕೊಂಡು ನಿಂತಿದ್ದರು.

"ಗೌರಮ್ಮ! ವಸಂತಮ್ಮ!" ಎಂದು ಕೂಗಿದನು ಸದಾಶಿವ

ವಸಂತಿ ಕೊರಳು ಹೊರಳಿಸಿ ನೋಡಿದಳು

"ಬನ್ನಿ ಬನ್ನಿ! ಹೋಗುವ! " ಎಂದು ಕೈಸನ್ನೆಮಾಡುತ್ತ ಕೂಗಿ ಕರೆದನು ಸದಾಶಿವ.

ಆಗೊಬ್ಬ ಮಿಲಿಟ್ರೀಯವನು ಸದಾಶಿವನ ಬಳಿಗೆ ಬಂದು---"ಯಾಕೊ ಅರಚುತ್ತಿ ಕತ್ತೇ ಹಾಗೆ! ಹೋಗೋ ನಿನ್ನ ಕಾರು ತಕ್ಕೊಂಡು ಬೇಗ!" ಎಂದು ಒದರಿದನು,

ಸದಾಶಿವನಿಗೆ ಸಿಟ್ಟು ಬಂದರೂ ಅದು ಸಮಯವಲ್ಲವೆಂದು, ನುಂಗಿಕೊಂಡು— "ಹೋಗುತ್ತೇನಯ್ಯಾ! ಆ ಹೆಂಗುಸರು ಬರಲಿ" ಎಂದನು.

ಸದಾಶಿವನ ಕರೆಯನ್ನು ಕೇಳಿ ವಸಂತಿ ಓಡೋಡಿ ಬರುತ್ತಿದ್ದಳು. ಗೌರಿಯೂ ಅವಳ ಹಿಂದೆಯೇ ಇದ್ದಳು. "ಬೇಗ ಬನ್ನಿ ಅಮ್ಮಗಳಿರಾ! ನಾವೇನೂ ನಿಮ್ಮನ್ನು ತಿನ್ನುವದಿಲ್ಲ!'' ಎಂದನು ಆ ಮಿಲಿಟರಿಯಾಳು.

ಅವರಿಬ್ಬರೂ ಸಮೀಪ ಬರುತ್ತಿರುವಾಗ, ಆ ಮಿಲಿಟ್ರೀಗಾರನು— "ಹುಂ, ಬಂದರು!— ಜಲ್ದೀ ಕಾರೇರಿ ಸ್ಟಾರ್ಟ್ ಮಾಡು!" ಎನ್ನುತ್ತಾ ಸದಾಶಿವನನ್ನು ಕಾರಿನ ಕಡೆಗೆ ತಿರುಗಿಸಿ ತಳ್ಳಿದನು.

ಸಿಟ್ಟು ಉಕ್ಕಿತು ಸದಾಶಿವನಿಗೆ!— "ಅರೆ! ತಳ್ಳುವುದೇಕಯ್ಯಾ ನನ್ನ! ನಿನ್ನ ದಾರಿಹಿಡಿದು ನೀನು ಹೋಗುವುದು ಬಿಟ್ಟು ನಮ್ಮ ಗೊಡವೆ ನಿನಗೇಕೆ?'' ಎಂದು ಸಿಡಿ ನುಡಿಯುತ್ತಾ ಕಾರಿನೊಳಗೇರಿಕೊಂಡನು.

ಆ ಮಿಲಿಟ್ರೀಯವನಿಗೂ ಕಣ್ಣು ಕೆಂಪಾಯಿತು! "ಶಟ್ ಅಫ್! ನಮ್ಮ ಮೇಲೆಯೇ ನಿನ್ನ ಕೋಪ? ಧ್ಯಾಂ!—'' ಎಂದನು. ಅಷ್ಟರಲ್ಲಿ ವಸಂತಿ ಓಡಿಬಂದು ಕಾರಿನೊಳಗೇರಿಕೊಂಡಳು. ಕೇಶವನು ಕಾರಿನಲ್ಲಿಯೇ ಇದ್ದನಷ್ಟೆ?

ಮಿಲಿಟ್ರೀಯವನು ಧಪ್ಪನೆ ಆ ಕಾರಿನ ಬಾಗಿಲನ್ನು ಹಾಕಿ— "ನಡೆಯೋ ನಿನ್ನ ದಾರಿ ಹಿಡಿದು ಬೇಕೂಫ್!'' ಎಂದು ಗರ್ಜಿಸಿದನು.

ಅದನ್ನು ಲಕ್ಷ್ಯಮಾಡದೆ ಸದಾಶಿವನು "ಗೌರಮ್ಮನೆಲ್ಲಿ? ಗೌರಮ್ಮ!—" ಎಂದು ಅತ್ತಿತ್ತ ನೋಡಿದನು.

"ನನ್ನೊಂದಿಗೇ ಇದ್ದಳಲ್ಲ! ಎಲ್ಲಿ ಹೋದಳು?— ಏ ಗೌರಿ!" ಎಂದು ವಸಂತಿ ಕೂಗಿದಳು

ವಸಂತಿಯ ಹಿಂದೆಯೇ ಆ ಕಾರಿನ ಸಮೀಪದ ವರೆಗೂ ಬಂದಿದ್ದ ಗೌರಿ ಥಕ್ಕನೆ ಎಲ್ಲಿ ಮಾಯವಾದಳು?

"ಜಲ್ದೀ ಛಲೋ ಜಾವ್!'' ಎಂದು ಆ ಪಟ್ಲಾಮಿನವನು ಮತ್ತೊಮ್ಮೆ ಗರ್ಜಿಸಿದನು.

ವಸಂತಿ ಹೆದರಿ "ಬಿಡೋ ಸದಾಶಿವಾ! ಅವಳೆಲ್ಲಿ ಸತ್ತಳೋ! ಬಿಡು! ಬಿಡು!'' ಎಂದು ಚೀರಿದಳು.

ನಿರುಪಾಯನಾಗಿ ಸದಾಶಿವನು ಕಾರನ್ನು ಸ್ಟಾರ್ಟ್ ಮಾಡಿದನು. ಮೆಲ್ಲಮೆಲ್ಲನೆ ಕಾರು ಮುಂದೆ ಹೊರಟಿತು. ಗೌರಿ ಗೌರಿ ಕಣ್ಣಿಗೆ ಬೀಳುವ

ಳೇನೋ ಎಂದು ಸದಾಶಿವನು ಅತ್ತಿತ್ತ ತಿರುತಿರುಗಿ ನೋಡುತ್ತಾ, ಮೆಲ್ಲನೆ ಕಾರನ್ನೋಡಿಸುತ್ತಿದ್ದನು. ವಸಂತಿಯೂ ಕೇಶವನೂ ಗೌರಿ ಕಾಣಿಸುವಳೇನೋ ಎಂದು ಎರಡು ಪಕ್ಕಗಳಲ್ಲಿಯೂ ನೋಡುತ್ತಿದ್ದರು.

ಹೀಗೆ ಈ ಕಾರು ಹೊರಡುತ್ತಲೇ, ಬೀದಿಯಲ್ಲಿ ನಿಂತಿದ್ದ ಮಿಲಿಟ್ರೀ ಲಾರಿ ಮೊದಲಾದುವುಗಳೂ ಧಡಧಡನೆ ಸ್ಟಾರ್ಟಾಗಿ, ಹೊರಡಲಾರಂಭಿಸಿದುವು ಒಂದರಮೇಲೊಂದಾಗಿ, ಸದಾಶಿವನ ಕಾರಿನ ಪಕ್ಕದಿಂದಲೇ ಮುಂದೋಟವೋಡಿಕೊಂಡು ಹೋಗಲಾರಂಭಿಸಿದುವು.

ಇನ್ನು ಗೌರಿಯನ್ನು ಹುಡುಕುವುದು ವ್ಯರ್ಥವೆಂದು ಸದಾಶಿವನು ಸುಮ್ಮನೆ ಮುಂದೆ ಸಾಗಿಸಿದನು. ಸುಮಾರು ಮೂರು ಮೈಲು ಮುಂದೆ ಹೋದ ಮೇಲೆ, ಒಂದು ಗ್ರಾಮವು ಹತ್ತಿತು. ಅಲ್ಲಿ ಕಾರನ್ನು ನಿಲ್ಲಿಸಿ, ನಿಧಾನವಾಗಿ ಉಸಿರುಬಿಡಲಾರಂಭಿಸಿದನು ಸದಾಶಿವ. ಗೌರಿಯನ್ನು ಕಳೆಗೊಟ್ಟುದಕ್ಕಾಗಿ ಅವನು ತುಂಬಾ ಮರುಗಿದನು. ವಸಂತಿಯೂ ಮರುಗುತ್ತ— "ಏನು ಮಾಡುವುದು! ನನ್ನೊಟ್ಟಿಗೇ ಓಡಿಬಂದರೆ ತಾನೇ! ನೋಡು! ನನ್ನ ಕಾಲಿಗೆ ಎಷ್ಟು ಮುಳ್ಳು ಕಂತಿತು! ಲಕ್ಷ್ಯವೇ ಮಾಡಲಿಲ್ಲ ನಾನು! ಪಾಪ! ಮಿಲಿಟ್ರೀ ರಾಕ್ಷಸರು ಎಳೆದುಕೊಂಡೇ ಹೋಗಿರಬೇಕು! ಅವಳ ಗತಿ ಅಷ್ಟೇ! ಪಾಪ!" ಎಂದು ತುಂಬ ದುಃಖೋದ್ಗಾರಗರೆದಳು.

ಸದಾಶಿವನು ಕಾರಿಗೆ ಎಷ್ಟು ಅಪಾಯವಾಗಿದೆಯೆಂದು ಆಗ ತಾನೇ ಚೆನ್ನಾಗಿ ಪರಿಶೀಲನೆ ಮಾಡಿದನು. ಮಡ್ಗಾರ್ಡಿನ ಬದಿ ಕೊಂಚ ಜಜ್ಜಿ ಹೋಗಿತ್ತಷ್ಟೆ "ಅಬ್ಬ! ಒಳ್ಳೇ ಸ್ಟ್ರಾಂಗಾದ 'ಫೋರ್ಡ್' ಕಾರಾದುದರಿಂದಲೇ ಉಳಿಯಿತು. ಬೇರೆಯಾಗಿದ್ದರೆ, ಆ ಪ್ರಚಂಡ ಲಾರಿ ಕೊಟ್ಟ ಫ್ಲ್ಯಾಶ್‌ಗೆ ಇಂಜಿನ್ ಪುಡಿಯಾಗುತ್ತಿತ್ತು!" ಎಂದುಕೊಂಡನು. ಅಲ್ಲಿ ಸವೆದು ಹೋಗಿದ್ದ ಒಂದು ಹೊಸ ಟಯ್ಯರನ್ನು ತೆಗೆದು, ಸ್ಟಾಕಿದ್ದ ಹೊಸ ಟಯ್ಯರನ್ನು ಜೋಡಿಸಿದ್ದೂ ಆಯಿತು. ನೀರು, ಗ್ಯಾಸು, ಕರಿ ಮೊದಲಾದುವುಗಳನ್ನೂ ನೋಡಿಕೊಂಡು, ಅಲ್ಲಿಯ ಹೋಟಲಿನಲ್ಲಿ ಎಲ್ಲರೂ ಹಸಿವೆಯನ್ನು ನೀಗಿಸಿಕೊಂಡು, ಆ ರಾತ್ರಿಯನ್ನು ಅಲ್ಲಿಯೇ ಇದ್ದು ಕಳೆದರು.

ಮಾರುದಿನ ಬೆಳಗ್ಗೆ ಮತ್ತೆ ಅವರು ಕಾರೇರಿಕೊಂಡು, ಮದ್ರಾಸಿಗಭಿಮುಖವಾಗಿ ಹೊರಟರು ಆಗ ಮಿಲಿಟರೀ ವಾಹನಗಳು, ಆಗೊಂದು ಈಗೊಂದರಂತೆ ಓಡಾಡುತ್ತಲೇ ಇದ್ದುವಾದರೂ, ಸಾಲುಗಟ್ಟಿ ಓಡಾಡುತ್ತಿರುವ ತಂಟೆ ಬರಲಿಲ್ಲ.

## ೨೬

ಗೌರಿ ಪಾಪ, ವಸಂತಿಯು ಹಿಂದಿನಿಂದಲೇ ಓಡಿಬರುತ್ತಿರುವುದನ್ನು ನಾವೂ ನೋಡಿದ್ದೇವೆ ಸದಾಶಿವನೂ ನೋಡಿದ್ದ. ಆದರೆ ಆಗಲೇ ಅವನು ಆ ಹಾಳು ಮಿಲಿಟ್ರೀಯುವನ ಒತ್ತಾಟದಿಂದ ಕಾರಿನೊಳಗೆ ಏರಿಕೊಳ್ಳಲ್ಪಟ್ಟು, ಗೌರಿ ಏನಾದಳೆಂದು ಅವನಿಗೆ ಗೊತ್ತಾಗದಂತಾಯಿತು ವಸಂತಿಯನ್ನು ನುಸುಳಗೊಟ್ಟು, ಅವಳ ಹಿಂದೆಯೇ ಇದ್ದ ಗೌರಿಯನ್ನು ಇನ್ನೊಬ್ಬ ಮಿಲಿಟ್ರೀಯುವನು ಅಡ್ಡಗಟ್ಟಿ ನಿಂತ! ಮುಂದೆ ಬಂದುಬಿಟ್ಟಿದ್ದ ವಸಂತಿಗೆ ತನ್ನ ಚಿಂತೆಯೇ ದೊಡ್ಡದಾಗಿ, ಕತ್ತು ತಿರುಗಿಸದೆಯೇ ಕಾರಿನೊಳಗೆ ಏರಿಬಿಟ್ಟಿದ್ದಳು. ಗೌರಿ "ಹಾ!" ಎಂದು ಚೀರಿದ ದನಿಯೊಂದು ಅವಳ ಕಿವಿಗೆ ಬಿದ್ದು, ಅವಳನ್ನು ಮತ್ತಷ್ಟು ಭಯಪಡಿಸಿಬಿಟ್ಟಿತ್ತು!

ಗೌರಿ 'ಹಾ!' ಎಂದು ಕಿರುಚುತ್ತಲೇ, ಆ ಮಿಲಿಟ್ರಿಯುವನು, ಅವಳನ್ನು ಇಕ್ಕೈಗಳಿಂದಲೂ ಬಾಚಿ ಎತ್ತಿಕೊಂಡು, ಅತ್ತ ಹೊತ್ತೊಯ್ದು ಒಂದು ಲಾರಿಯೊಳಗೆ ಹಾಕಿಯೂ ಬಿಟ್ಟನು! ಅನಂತರ ಮುಂದಿನ ಲಾರಿಯ ಹಿಂದಿನಿಂದ ಆ ಲಾರಿಯೂ ಹೊರಟಿತು!

ಗೌರಿ ಲಾರಿಯೊಳಗೆ ಬಾಡಿದೊಂದು ಬಳ್ಳಿಯಂತೆ ಬಿದ್ದುಬಿಟ್ಟಿದ್ದಳು. ತನ್ನನ್ನೊಂದು ಹುಲಿ ಹಿಡಿದಂತೆಯೇ ಅವಳ ಬೋಧೆಯಾಗಿತ್ತು! ಆ ಹುಲಿಯ ಗಂಟಲಿನೊಳಗೆ ಅವಳು ತುಂಡುತುಂಡಾಗಿ ಇಳಿದು ಹೋಗುತ್ತಿದ್ದಳು! ತಾನು ತುಂಡುತುಂಡಾಗುತ್ತಿದ್ದರೂ ಜೀವವಿರುವುದೆಂದೂ, ತನಗೇಕೆ ನೋವಾಗುವುದಿಲ್ಲವೆಂದೂ ಅವಳು ಆಶ್ಚರ್ಯಪಡುತ್ತಿದ್ದಳು. ಹುಲಿಯ ಗಂಟಲಿನ ಗರ್ಜನೆಯಂತೆ ಆ ಲಾರಿಯ ಘನಗರ್ಜನೆ ಅವಳಿಗೆ ಕೇಳಿಸುತ್ತಿತ್ತು!

ಪ್ರಾಣವು ಹೋದಂತೆಯೂ, ಅದು ಶೂನ್ಯಾಕಾಶದಲ್ಲಿ ತೇಲುತ್ತಾ, ಕೆಳಗಿರುವ ತನ್ನ ಒಡಲನ್ನು ಮಿಲಿಟ್ರೀ ಹುಲಿಗಳು ಹರಿಹರಿದು ತಿನ್ನುತ್ತಿರುವುದನ್ನು ಅವಳೇ ನೋಡುತ್ತಿದ್ದಳು ! ಮೈ ಜುಮ್ಮುಗುಟ್ಟುತ್ತಿದ್ದಿತು !

ನಿಜವಾಗಿ ಅವಳು ಅಚೇತನಳಾಗಿ ಬಿದ್ದುಕೊಂಡಿದ್ದಳು. ಅದು ಮೂರ್ಛೆಯೋ ಪೂರ್ಣ ಮೂರ್ಛೆಯೋ ಹೇಳುವುದು ಕಷ್ಟ

ಇದಿರಿನಿಂದ ಒಂದು ಜೀಪ್ ಕಾರು ಓಡೋಡಿ ಬಂದು, ಗೌರಿಯನ್ನು ಸಾಗಿಸುವ ಲಾರಿಯ ಬಳಿಯಲ್ಲಿ ಸನ್ನೆದೋರಿ ನಿಂತಿತು. ಅದರಲ್ಲಿ ಇಬ್ಬರೇ ಇದ್ದರು.

ಅದರ ಬದಿಯಲ್ಲಿಯೇ ಗೌರಿಯ ಲಾರಿಯೂ ನಿಂತುಬಿಟ್ಟಿತು.

ಆಗ ಸದಾಶಿವನ ಕಾರನ್ನು ದಾಟಿ ಮುಂದುವರಿದು ಹೋದ ಜೀಪ್ ಕಾರೇ ಅದಾಗಿತ್ತು !

ಮಿಲಿಟ್ರೀಯುವನೊಬ್ಬನು ಲಾರಿಯಿಂದ ಗೌರಿಯನ್ನು ಎತ್ತಿಕೊಂಡು, ಈ ಜೀಪ್ ಕಾರಿನೊಳಗೆ ಸೇರಿಸಿದನು ಜೀಪಿನೊಳಗೆ ಹಿಂದಿನ ಸೀಟಿನಲ್ಲಿ ಕುಳಿತವನ ಪಕ್ಕದಲ್ಲಿ ಗೌರಿಯನ್ನು ಒರಗಿಸಿಡಲಾಯಿತು. ಅವಳು ಹೊರಳಿಕೊಳ್ಳದಂತೆ ಆಧಾರವಾಗಿಯೇ, ಅತನು ಕುಳಿತನು.

ಲಾರಿಗಳ ಹಿಂದೆ ಮೋಟಾರು ಬೈಕ್ಕಿನಲ್ಲಿ ಬರುತ್ತಿದ್ದ ಕಮಾಂಡರನು, ಈ ಜೀಪ್‌ಕಾರಿನ ಬಳಿಗೆ ಬಂದು, ಹಿಂದಿನ ಸೀಟಿನವನನ್ನು ಕುರಿತು— "ನಿಮ್ಮ ಕೆಲಸ ಮುಗಿಯಿತಷ್ಟೆ? ಛೇ! ಎಂಥವರಯ್ಯ ನೀವು? ಆ ಕೆಂಪು ಸೊಗಸಿನ ಹುಡುಗಿಯನ್ನು ಬಿಟ್ಟು, ಈ ಕಪ್ಪು ಹುಡುಗಿ ನಿಮಗೇಕಯ್ಯ! ಒಳ್ಳೆ ವಿಚಿತ್ರ ಇದ್ದೀರಿ ಬಿಡಿ. ಹುಂ. ಇನ್ನು ನಮ್ಮನ್ನು ಬೇಗನೇ ಕಳಿಸಿರಿ" ಎಂದು ಇಂಗ್ಲಿಷಿನಲ್ಲಿ ನುಡಿದು ಕೈ ಮುಂದೆ ಚಾಚಿದನು.

"ಓಯಸ್! ಮೆನಿಮೆನೀ ಥ್ಯಾಂಕ್ಸ್!—" ಎಂದು ಮುಗುಳ್ನಗುತ್ತ, ಆ ಹಿಂದಿನ ಸೀಟಿನಲ್ಲಿ ಕುಳಿತಿದ್ದ ವರದನು, ತನ್ನ ಮನಿಫರ್ಸಿನೊಳಗಿನಿಂದ ೧೦ ರೂಪಾಯಿಯ ೧೦ ನೋಟುಗಳನ್ನು ತೆಗೆದು ಆ ಕಮಾಂಡರನಿಗೆ ಕೊಟ್ಟನು. ಮೇಲೆ ಇನ್ನಷ್ಟು "ಥ್ಯಾಂಕ್ಸ್"ಗಳನ್ನು ಕೊಟ್ಟನು.

ಆಗ ಸದಾಶಿವನ ಕಾರಿಗೆ ಢಿಕ್ಕೀ ಹೊಡೆದು ನಿಲ್ಲಿಸಿದ ಲಾರಿಯೂ ಹಿಂದಿರುಗಿ ಬಂದಿತು ರೂಪಾಯಿಗಳನ್ನು ಪಡೆದ ಕಮಾಂಡರನು ಆ ಲಾರಿಯ ಡ್ರೈವರನಿಗೂ, ಗೌರಿಯನ್ನು ಹೊತ್ತವನಿಗೂ, ಮತ್ತೂ ಈ ತಂತ್ರಕ್ಕೆ ಸಹಾಯಕರಾದ ಕೆಲವರಿಗೂ, ಏನೋ ಕೆಲವು ರೂಪಾಯಿಗಳನ್ನು ಹಂಚಿಕೊಟ್ಟನು.

ಬಳಿಕ ಲಾರಿಗಳೂ ವ್ಯಾನಗಳೂ ಮೋಟಾರು ಬೈಕ್ಕೂ, ತಮ್ಮ ಪಾಡಿಗೆ ಹೊರಟು ಹೋದುವು. ಗೌರಿಯನ್ನು ಹೇರಿಕೊಂಡ ಈ ಜೀಪ್ ಕಾರೂ, ತಿರುಗಿ ಅವುಗಳ ಹಿಂದೆಯೇ ಹೊರಟಿತು.

ಎಲ್ಲವೂ ಮದರಾಸಿಗಭಿಮುಖವಾಗಿಯೇ ಓಡಿದುವು.

## ೨೭

ಗೌರಿ ಮೂರ್ಛೆ ತಿಳಿದೆಚ್ಚತ್ತಾಗ ಏನೋ ಹೆದರಿ "ಹಾ!" ಎಂದು ಕೂಗಿಕೊಂಡಳು.

ವರದನು ಅವಳ ತಲೆಯನ್ನು ತಡವುತ್ತ— "ಹೆದರಿಕೆಯೇನೂ ಇಲ್ಲ. ನೀನೀಗ ನಿರ್ಭಯವಾದ ಸ್ಥಳದಲ್ಲಿಯೇ ಇರುತ್ತೀ'' ಎಂದು ಅಭಯಪ್ರದವಾಗಿ ಮಧುರ ಸ್ವರದಿಂದ ಹೇಳಿದನು.

ಸ್ವಲ್ಪಹೊತ್ತು ಗೌರಿ ಸುಮ್ಮನಿದ್ದಳು. ಜೀಪ್ ಓಡುತ್ತಲೇ ಇತ್ತು. ಮಿಲ್ಟ್ರೀ ಲಾರಿಗಳೆಲ್ಲಾ ಎತ್ತೋ ಮುಂದೋಡಿ ಕಣ್ಮರೆಯಾಗಿ ಹೋಗಿದ್ದುವು ಸುತ್ತುಮುತ್ತೂ ಕತ್ತಲೆ ಕವಿದಿತ್ತು. ಆಗ ತಾನೇ ರಾತ್ರಿ ತಲೆ ಹಾಕಿತ್ತು. ಆದುದರಿಂದ ತಾನು ಯಾರ ಜತೆಯಲ್ಲಿ ಹೋಗುತ್ತಿದ್ದೇನೆ ಎಂಬುದು ಗೊತ್ತಾಗದೆ ಗೌರಿ ಗಲಿಬಿಲಿಯಲ್ಲಿ ಯೋಚನೆ ಮಾಡುತ್ತಿದ್ದಳು. "ವಸಂತೀ!'' ಎಂದು ಒಮ್ಮೆ ಕರೆದು ನೋಡಿದಳು. ವರದನು ಮೌನವಾಗಿದ್ದನು. ಸ್ವಲ್ಪಹೊತ್ತು ಕಳೆದಮೇಲೆ ವರದನು,— "ಏನಮ್ಮ, ನಿನಗೇನಾದರೂ ದಾಹವಾಗುತ್ತದೆಯೆ?'' ಎಂದು ಮೃದುಮಧುರವಾಗಿ ಕೇಳಿದನು.•

"ಇಲ್ಲ"— ಎಂದು ಗೌರಿಯ ಬಾಯಿಯಿಂದ ಉತ್ತರವು ಜಾರಿತು. ಈಗ ಅವಳು ಮೈಯನ್ನು ಸರಿಪಡಿಸಿಕೊಂಡು, ವರದನನ್ನು ಮುಟ್ಟದೆ ಒಂದು ಬದಿಯಲ್ಲಿ ಕುಳಿತಿದ್ದಳು.

"ನೀವು ಯಾರೋ ಹೊಸಬರಾಗಿದ್ದೀರಿ? ನಾನು ಇಲ್ಲಿಗೆ ಹೇಗೆ ಬಂದೆ?" ಎಂದು ಗೌರಿ ಮೆಲ್ಲನೆ ಪ್ರಶ್ನಿಸಿದಳು.

"ಅದನ್ನು ನಿಧಾನವಾಗಿ ತಿಳಿಸಿದರೆ ಆಗದೆ?'' ಎಂದು ವರದನು ಮರಪ್ರಶ್ನೆ ಕೇಳಿದನು.

"ಈಗಲೇ ಹೇಳಿದರೆ ನನ್ನ ಮನಸ್ಸಿಗೆ ಸಮಾಧಾನವಾದೀತು.'' ಎಂದಳು ಗೌರಿ.

"ಹಾಗಾದರೆ ಕೇಳು, ಏನೂ ಹೆದರಬೇಡವೆಂದೂ, ನೀನು ಸುರಕ್ಷಿತವಾದ ಸ್ಥಳದಲ್ಲಿಯೇ ಇರುತ್ತೀಯೆಂದೂ ಇನ್ನೊಮ್ಮೆ ನಿನಗೆ ಹೇಳುತ್ತೇನೆ ನಿನ್ನನ್ನು ಕೆಲವು ಮಿಲಿಟರೀ ಜನರು ಆಕ್ರಮಿಸಿ ಹಿಡಿದು, ಅವರ ಲಾರಿಯೊಳಗೆ ಹಾಕುವುದನ್ನು, ನಾನು ಈ ಜೀಪ್ ಕಾರಿನಲ್ಲಿ ಬರುತ್ತಾ ನೋಡಿದೆ ಪಾಪ, ನೀನು ತಳ್ಳಾಡುತ್ತಿದ್ದಿ ಕೂಡಲೇ ನಾನು ಆ ಮಿಲಿಟ್ರೀ ಲಾರಿಯನ್ನು ಅಡ್ಡಗಟ್ಟಿ ನನ್ನ ಕಾರನ್ನು ನಿಲ್ಲಿಸಿ, ಅವರ ಆ ದುಷ್ಟ ವರ್ತನೆಯನ್ನು ಖಂಡಿಸಿದೆ. ನಿನ್ನನ್ನು ನನ್ನ ವಶಕ್ಕೆ ಕೊಟ್ಟು ಬಿಡುವಂತೆ ಹೇಳಿದೆ. ಅವರು ಒಪ್ಪಲಿಲ್ಲ. ನಮ್ಮೊಳಗೆ ತುಂಬ ತಕರಾರಾಯಿತು. ನಾನು ಮತ್ತು ಡ್ರೈವ್ ಮಾಡುತ್ತಾರಲ್ಲಾ, ನನ್ನ ಈ ಮಿತ್ರರು, ಹೀಗೆ ನಾವಿಬ್ಬರೇ ಅವರು ಹತ್ತೆಂಟು ಮಂದಿಗಳು. ಮಿಲಿಟರೀಯವರ ವಿಷಯ ಗೊತ್ತಿಲ್ಲವೆ? ನಮ್ಮನ್ನು ಕೊಂದು ಹಾಕಲಿಕ್ಕೂ ಅವರೇನೂ ಹಿಂಜರಿಯುವವರಲ್ಲ. ಕಡೆಯ ಉಪಾಯ ಮಾಡಿ ನೋಡೋಣವೆಂದು ನಾನು ಮೆಲ್ಲನೆ ಅವರಿಗೆ ರೂಪಾಯಿಯ ಆಸೆ ತೋರಿಸಿದೆ ಐನೂರು ರೂಪಾಯಿ ಕೊಟ್ಟರೆ ಇವಳನ್ನು ಬಿಟ್ಟು ಕೊಟ್ಟೇವು — ಎಂದು ಕಮಾಂಡರನು ಖಂಡಿತವಾಗಿ ಹೇಳಿದ. ನನ್ನೊಡನೆ ಮುನ್ನೂರು ರೂಪಾಯಿ ಮಾತ್ರವೇ ಇತ್ತು. ಅಷ್ಟನ್ನೇ ಕೊಟ್ಟು ಉಳಿದುದನ್ನು ಮದರಾಸಿನಲ್ಲಿ ಕೊಟ್ಟು, ಹೇಗಾದರೂ ಒಡಂಬಡಿಸಿ ನಿನ್ನನ್ನು ಬಿಡಿಸಿಕೊಂಡು ಬಂದೆ. ನೀನು ಯಾರಮ್ಮ? ನಿನ್ನ ಹೆಸರೇನು? ನೀನು

ಹೇಗೆ ಆ ಘಾತುಕರ ಕೈಗೆ ಸಿಕ್ಕಿದಿ?" ಎಂದು ವರದನು ಪುನಃ ಪ್ರಶ್ನಿಸಿದನು.

''ನನ್ನ ಗ್ರಹಚಾರ!—" ಎಂದು ಗೌರಿ ವಂಚನೆಯನ್ನು ತಿಳಿಯದೆ ಸರಳವಾಗಿ ಮಾತಾಡತೊಡಗಿದಳು.

''ನಾನು ನನ್ನ ಗೆಳತಿ, ಅವಳ ತಮ್ಮ, ಡ್ರೈವರು ಇಷ್ಟು ಜನ ಕಾರಿನಲ್ಲಿ ಪಯಣ ಮಾಡುವಾಗ, ಇದಿರಿನಿಂದೊಂದು ಮಿಲಿಟ್ರೀ ಲಾರಿ ಬಂದು, ನಮ್ಮ ಕಾರಿಗೆ ಢ್ಯಾಶ್ ಕೊಟ್ಟಿತು ಪುಣ್ಯಕ್ಕೆ ಒಳಗಿನ ಜನರಿಗೇನೂ ಅಪಾಯವಾಗಲಿಲ್ಲ. ಕೂಡಲೇ ಮಿಲಿಟ್ರೀ ಸಿಪಾಯಿಗಳು ನಮ್ಮ ಕಾರಿಗೆ ಮುತ್ತಿಗೆ ಹಾಕಿದ್ದು ನೋಡಿ, ನಾನೂ ನನ್ನ ಗೆಳತಿಯೂ ಹೆದರಿ ಕಾರಿನಿಂದ ಕೆಳಗಿಳಿದೋಡಿದೆವು. ಸ್ವಲ್ಪ ಹೊತ್ತಿನ ಮೇಲೆ ನಮ್ಮ ಡ್ರೈವರನು, ಏನೂ ಭಯವಿಲ್ಲ, ಬನ್ನಿ ಬನ್ನಿ—ಎಂದು ನಮ್ಮನ್ನು ಕರೆದನು. ನನ್ನ ಗೆಳತಿ ಮುಂದಾಗಿ ಓಡಿಹೋಗಿ ಕಾರಿನೊಳಗೆ ಏರಿದಳು. ನನ್ನನ್ನು ಒಬ್ಬ ಮಿಲಿಟರೀ ಸಿಪಾಯಿ ತಡೆದು ಹಿಡಿದು ಎತ್ತಿ ಲಾರಿಯೊಳಗೆ ಹಾಕಿಬಿಟ್ಟ. ಮತ್ತೇನಾಯಿತೋ ಗೊತ್ತಿಲ್ಲ ಈಗ ನಿಮ್ಮೊಂದಿಗೆ ಇದ್ದೇನೆ. ದೇವರು ನಿಮ್ಮನ್ನು ಒಳ್ಳೆಯರಸ್ನಾಗಿ ಮಾಡಲಿ. ನನ್ನನ್ನು ಆ ರಾಕ್ಷಸರ ಕೈಯಿಂದ ಪಾರು ಮಾಡಿದ ಉಪಕಾರವನ್ನು ನಾನೆಂದಿಗೂ ಮರೆಯಲಾರೆ. ನನ್ನ ಗೆಳತಿ ಮೊದಲಾದವರೆಲ್ಲ ಎಲ್ಲಿ ಹೋದರೋ ಏನೋ!''

''ಏನೋ! ಎಲ್ಲಿ ಹೋದಾರು? ಸುಖವಾಗಿ ಅವರ ಪಾಡಿಗೆ ಅವರು ಹೋಗಿದ್ದಾರು. ಅವರು ನಿನಗೇನಾದರೂ ಆಗಬೇಕೆ?''

''ಅದೇನೂ ಇಲ್ಲ. ನಾನು ಅವರ ಜತೆಯಲ್ಲಿ ಬಂದವಳು. ನೀವು ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತೀರಿ?''

''ಮಂದರಾಸಿಗೆ ''

''ಓ! ಹಾಗಾದರೆ ಒಳ್ಳೆಯದೇ ಆಯಿತು ಅಲ್ಲಿ ಶಿಶುವಲ್ಲಿ ಕೇಣಿ ಎಂಬಲ್ಲಿ ಗಜವದನರಾಯರೆಂಬ ವಕೀಲರು ಇದ್ದಾರೆ. ನಿಮಗೆ ಗೊತ್ತೊ?''

''ಗೊತ್ತಿಲ್ಲವಲ್ಲಾ!"

''ಅವರ ಮನೆಗೇ ನಾವೆಲ್ಲಾ ಹೊರಟದ್ದೆವು. ನನ್ನನ್ನು ಅಲ್ಲಿಗೇ ಕರೆದೊಯ್ದು ಬಿಟ್ಟುಬಿಡಿರಿ. ನಾನು ನಿಮಗೆ ಎಂದೆಂದಿಗೂ ಋಣಿ."

"ಅವರು ಅಲ್ಲಿ ಯಾವ ಬೀದಿಯಲ್ಲಿದ್ದಾರೆ? ಮನೆಯ ನಂಬರೇನು?"

"ಅದು ನನಗೆ ಗೊತ್ತಿಲ್ಲವಲ್ಲಾ!"

"ಹಾಗಾದರೆ ಕಷ್ಟವಿದೆ. ಮದರಾಸಿನಂತಹ ಮಹಾನಗರದಲ್ಲಿ ಮನೆ ನಂಬರು ತಿಳಿಯದೆ ಯಾರನ್ನೂ ಕಂಡು ಹಿಡಿಯಲು ಸಾಧ್ಯವಿಲ್ಲ."

"ಹಾಗಿದ್ದರೆ..............ತಾಂಬರಂ ಎಂಬಲ್ಲಿ ಮಹಿಳಾಭ್ಯುದಯ ಮಂಡಲಿ ಎಂಬೊಂದು ಸಂಸ್ಥೆ ಇದೆ. ಅಲ್ಲಿಗೆ ನನ್ನನ್ನು ಕರೆದೊಯ್ದು ಬಿಡಿರಿ."

"ನೋಡೋಣ"

"ಯಾಕೆ ಸಂದೇಹವಾಗಿ ಹೇಳುತ್ತಿರಲ್ಲಾ?"

"ಅವಸರಪಡುವುದೇಕೆ? ಮೊದಲು ನನ್ನ ಮನೆಗೇ ಹೋಗುವ. ನೀನು ಸ್ವಲ್ಪ ಸುಧಾರಿಸಿಕೊಂಡ ಮೇಲೆ, ಎಲ್ಲಾ ನಿಧಾನವಾಗಿ ಮಾತಾಡುವ"

ಓಡುತ್ತಿದ್ದ ಜೀಪ್ ಕಾರು ನಿಂತಿತು. ಆಗ ರಾತ್ರಿ ಒಂಭತ್ತು ಗಂಟೆಯಾಗಿತ್ತು. ಅವರು ಬಂದು ನಿಂತ ಆ ಊರು ರೇಣಿಗುಂಟಾ. ಅಲ್ಲಿಯೇ ರಾತ್ರಿಯಲ್ಲಿ ತಂಗುವುದಾಗಿ ತೀರ್ಮಾನಿಸಿ, ಒಂದು ದೊಡ್ಡ ಹೋಟಲಿನ ಮುಂದೆ ಆ ಕಾರು ನಿಂತಿತ್ತು.

ಇಬ್ಬರೂ ಮರ್ಯಾದೆಯಾಗಿ ಗೌರಿಯನ್ನಿಳಿಸಿಕೊಂಡು ಆ ಹೋಟಲಿನೊಳಗೆ ಕರೆದೊಯ್ದರು ಅಲ್ಲೊಂದು 'ಪ್ರೈವೇಟು ರೂಂ' ನೊಳಗೆ ಮೂವರು ಹೊಕ್ಕರು. ಅಲ್ಲಿ ಉಜ್ವಲವಾದ ದೀಪವು ಬೆಳಗುತ್ತಿತ್ತು. ಆ ಬೆಳಕಿನಲ್ಲಿ, ಜೀಪ್ ಕಾರಿನೊಳಗೆ ತನ್ನ ಪಕ್ಕದಲ್ಲಿ ಕುಳಿತಿದ್ದಾತನ ಮುಖವನ್ನು ಆಗ ತಾನೇ ಸರಿಯಾಗಿ ನೋಡಿದ ಗೌರಿ— "ಹಾ! ಡೈರೆಕ್ಟರ್‌ವರದನ್!" ಎಂದು ಗಾಬರಿಯ ಉದ್ಗಾರವನ್ನೆತ್ತಿದಳು.

ವರದನು ಮುಗುಳುನಗುತ್ತ— "ಗಾಬರಿ ಏಕೆ ಗೌರಿ! ಕೂಡು! ನಾನೇನೂ ಪರಕೀಯನಲ್ಲ ನಿನಗೆ" ಎಂದನು

ಮುಳ್ಳಿನ ಮೇಲೆ ಕುಳಿತುಕೊಳ್ಳುವಂತೆ ಗೌರಿ ಮೆಲ್ಲನೆ, ಅಲ್ಲಿದ್ದೊಂದು ಕುರ್ಚಿಯ ಮೇಲೆ ಕುಳಿತಳು.

ವರದನು ಈ ತಂತ್ರವನ್ನು ಹೊಸಪೇಟೆಯಲ್ಲಿರುವಾಗಲೇ ಪ್ರಾರಂಭಿಸಿ ಬಿಟ್ಟಿದ್ದ. ಶೀನು ಖೈದಾಗುವಂತೆ, ಆ ಗಲಾಟೆ ಎಬ್ಬಿಸಿದವನೂ

ಅವನೇ. ಅನಂತರ ಗೌರಿಯೇ ಮೊದಲಾದವರು ಮದರಾಸಿನ ಕಡೆಗೆ ಪ್ರಯಾಣ ಹೊರಟಾಗ, ವರದನೂ ಕೆಲವು ಮೈಲು ಅಂತರದಲ್ಲಿ ಅವರನ್ನು ಅನುಸರಿಸಿಕೊಂಡು ಹೊರಟಿದ್ದ. ಗುಂತಕಲ್ಲು ದಾಟಿದ ಮೇಲೆ ಅಲ್ಲಿಂದ ಮದರಾಸಿಗೆ ಹೋಗುವ ೧೨ ಮಿಲಿಟರೀ ಲಾರಿಗಳು ಅವನನ್ನು ಸಂಧಿಸಿದುವು. ಅವೆಲ್ಲವೂ ಒಬ್ಬ ಕಮಾಂಡರನ ಮೇಲು ನೋಟದಲ್ಲಿ ಹೊರಟಿದ್ದುವು. ಆ ಕಮಾಂಡರನೊಬ್ಬ ಯುರೋಪೀಣ ಸಾರ್ಜೆಂಟ್. ವರದನು ಅವನನ್ನು ಮಧುರವಾಗಿ ಮಾತಾಡಿಸಿ ಒಳ್ಳೆಯದು ಮಾಡಿಕೊಂಡು, ಮೊದಲ ತುತ್ತಿಗೇ ಹತ್ತು ರೂಪಾಯಿಗಳನ್ನು ಖರ್ಚುಮಾಡಿ, ಅವನಿಗೆ ಒಳ್ಳೊಳ್ಳೆಯ ತೀನಿಪಾನ ಧೂಮಾದಿಗಳನ್ನು ಕೊಡಿಸಿ ಮೆಚ್ಚಿಸಿಬಿಟ್ಟನು. ಅನಂತರ ಗೌರೀ ವಸಂತಿಯರು ಹೋದ ಕಾರಿನ ಗುರುತು ನಂಬರನ್ನು ತಿಳಿಸಿ, ಆ ಕಾರನ್ನು ನಡುದಾರಿಯಲ್ಲಿ ತಡೆದು, ಅದರೊಳಗಿದ್ದ ಇಬ್ಬರು ತರುಣಿಯರಲ್ಲಿ, ಕಪ್ಪಾಗಿರುವವಳನ್ನು ಮಾತ್ರ ಎಳೆದುಕೊಂಡು, ಅವರ ಲಾರಿಯೊಳಗೆ ಹಾಕಿಕೊಂಡು, ತನಗೆ ಒಪ್ಪಿಸಬೇಕು--ಎಂದು ಕೇಳಿಕೊಂಡು, ಅದಕ್ಕೆ ಅವನನ್ನು ಒಪ್ಪಿಸಿದನು. ಕೆಲಸವಾಗುತ್ತಲೇ ನೂರು ರೂಪಾಯಿ ಭಕ್ಷಿಸು ಕೊಡುವೆನೆಂದೂ ಹೇಳಿದ್ದನು.

ಗೌರೀ ವಸಂತಿಯರ ಕಾರು ಮುಂದೆ ಹೊರಟ ಸ್ವಲ್ಪ ಹೊತ್ತಿನಲ್ಲಿ, ಆ ಮಿಲಿಟ್ರೀ ಲಾರಿಗಳೂ ಹೊರಟಿದ್ದುವು. ಜೀಪ್ ಕಾರಿನಲ್ಲಿ ವರದನೂ ಹೊರಟಿದ್ದನು.

ಮುಂದೆ ನಿರ್ಜನ ಸ್ಥಾನವಾದ ಹಳುವಿನ ಬೀದಿಯಲ್ಲಿ ಲಾರಿಗಳೆಲ್ಲ ವೇಗವಾಗಿ, ಗೌರೀ ವಸಂತಿಯರ ಕಾರನ್ನು ದಾಟಿದುವು. ಹಾಗೆ ದಾಟಿದ ಒಂದು ಲಾರಿ ತಿರುಗಿ ಬಂದು, ಸದಾಶಿವನ ಕಾರಿಗೆ ಢ್ಯಾಶ್ ಕೊಟ್ಟಿತ್ತು. ಮುಂದಿನ ವಿಷಯ ನಾವೆಲ್ಲ ಕಣ್ಣಾರೆ ಕಂಡುದೇ.

## ೨೮

ವರದನು ಅಷ್ಟು ಒಳ್ಳೆಯವನಲ್ಲವೆಂದು ಹಂಪೆಯಲ್ಲಿ ಅವನ ವರ್ತನೆಯಿಂದಲೇ ಗೌರಿಗೆ ಗೊತ್ತಾಗಿತ್ತು. ಶೀನಣ್ಣನೂ ಕೊಂಚ ಹೇಳಿದ್ದ.

ಈಗ ತಾನು ಅವನ ಕೈಗೇ ಸಿಕ್ಕಿ ಬಿದ್ದುದು ನೋಡಿದರೆ, ಇದೆಲ್ಲಾ ಇವನ ತಂತ್ರವೋ ಏನೋ ಎಂದು ಸಂದೇಹವೂ ಎದ್ದಿತವಳಿಗೆ. ಇನ್ನೊಂದು ಹೊಸ ಭೀತಿಗೆ ಬಿದ್ದಳವಳು

ಹೋಟಲ್ಲಿನ 'ಸರ್ವರು' ಹುಡುಗನು ಬಂದು ಬಾಗಿಲಿನಲ್ಲಿ ಪ್ರಶ್ನಾಕೃತಿಯಾಗಿ ನಿಂತನು.

ಅವನನ್ನು ನೋಡಿ ವರದನು ಗೌರಿಯನ್ನು ಕುರಿತು, "ಗೌರೀದೇವಿ! ಮೊದಲು ಸ್ವಲ್ಪ ಕಾಫೀ ಕುಡಿದು, ಆ ಮೇಲೆ ಊಟ ಮಾಡೋಣವೆ?" ಎಂದು ಕೇಳಿದನು

"ನನಗೇನೂ ಬೇಡ. ಹಸಿವೆಯೆ ಇಲ್ಲ" ಎಂದಳು ಗೌರಿ ಶುಷ್ಕ ಸ್ವರದಿಂದ.

"ಹಸಿವೆಯಿಲ್ಲದೇನು? ಹಾಗಾದರೆ ಕಾಫಿ ಬೇಡ. ಈಗಿನ ರೇಶನೀ ಅಳತೆಯ ಊಟವೇ ಒಂದು ಲೈಟ್ಟಾದ ಅಲ್ಪಾಹಾರವಿದ್ದಂತಲ್ಲವೆ? ಸರ್ವರ್, ನಾವು ಮೂರು ಮಂದಿಗೆ ಇಲ್ಲಿಗೇ ತಂದು ಬಡಿಸಿಬಿಡು."—ಎಂದು ಅಜ್ಞಾಪಿಸಿದನು ವರದ.

ಗೌರಿ ಮೌನವಾಗಿಯೇ ಇದ್ದಳು. ಈಗ ಹೆಚ್ಚು ಮಾತಾಡಿಸುವುದು ಉಚಿತವಲ್ಲವೆಂದು ಭಾವಿಸಿ ವರದನೂ ಸುಮ್ಮನಿದ್ದನು. ಮೌನವು ಗಂಭೀರ ಭಾವಕ್ಕೆ ತಿರುಗಿತು. ಸ್ವಲ್ಪ ಹೊತ್ತಿನಲ್ಲಿ ಧೈರ್ಯವು ಮೆಲ್ಲ ಮೆಲ್ಲನೆ ಗೌರಿಯನ್ನಾಕ್ರಮಿಸಿಕೊಂಡಿತು. ಮತಿವಂತೆಯಲ್ಲವೆ? ಆಪತ್ಕಾಲದಲ್ಲಿ ಧೈರ್ಯವನ್ನು ಬಿಟ್ಟರೆ ಒಂದೂ ಸಾಗದು, ಎಂದು ಅವಳಿಗೆ ಗೊತ್ತಿಲ್ಲವೆ? ಧೈರ್ಯವಲಂಬನದಿಂದ ಅವಳ ಮುಖದಲ್ಲೊಂದು ಪ್ರಕಾಶವು ಹರಡಿತು

ಸರ್ವರನು ಎಲೆ ಹಾಕಿ ಹೋಗುತ್ತಿದ್ದಾಗ, ಗೌರಿ ಅವನನ್ನು ನೋಡಿ— "ಅಪ್ಪಾ! ಬಚ್ಚಲು ಮನೆ ಎಲ್ಲಿ?" ಎಂದು ಕೇಳುತ್ತಾ ಎದ್ದಳು.

"ಬನ್ನಿ ಅಮ್ಮ" ಎಂದು ಸರ್ವರು ಅವಳನ್ನು ಕರೆದುಕೊಂಡು ಹೋದನು.

ಸ್ವಲ್ಪಹೊತ್ತಿನಲ್ಲಿ ಗೌರಿ ಕೈಕಾಲು ತೊಳೆದುಕೊಂಡು ಬಂದಳು. ಅನಂತರ ವರದನೂ ಅವನ ಸಂಗಡಿಗನೂ ಹೋಗಿ ಬಂದರು. ಮೂವರೂ

ಊಟಕ್ಕೆ ಕುಳಿತರು. ವರದನು ಸರಿಯಾಗಿ ಉಣ್ಣುವಂತೆ ಗೌರಿಗೆ ಮಧುರ ನುಡಿಯಿಂದ ಒತ್ತಾಯಿಸುತ್ತಿದ್ದರೂ, ಅವಳು, ರೇಶನ್ ಲೆಕ್ಕದಂತೆ ಅಳೆದು ಹಾಕಿದ ಒಂದು ಡಬರಾ ಅನ್ನದಲ್ಲಿ ಅರ್ಧ ಭಾಗ ಮಾತ್ರವೇ ಉಂಡೆದ್ದಳು.

ಎಲ್ಲಾ ಮುಗಿದು ಮಲಗುವ ವೇಳೆ ಬಂತು. ಆ ಕೋಣೆಯೊಳಗೆ ಒಂದೇ ಒಂದು ಮಂಚವೂ ಎರಡು ಬೆಂಚುಗಳೂ ಇದ್ದುವು ಈ ರಾತ್ರಿ ಹೇಗೆ ಬೆಳಗಾಗುವುದೋ ಎಂದು ಗೌರಿ ಚಡಪಡಿಸುತ್ತಿದ್ದಾಗ, ವರದನು "ಗೌರೀದೇವಿ! ನೀನು ಈ ಜಮಖಾನೆಯನ್ನು ಹಾಸಿಕೊಂಡು ಮಂಚದಲ್ಲಿ ಮಲಗು ನಾವಿಬ್ಬರೂ ಈ ಬೆಂಚಿಗಳನ್ನು ಹೊರಗೆ ಹಾಕಿಕೊಂಡು, ನಿನಗೆ ಕಾವಲಾಗಿ ಅಲ್ಲಿ ಮಲಗುತ್ತೇವೆ. ಏನೂ ಅಂಜಬೇಡ ಬಾಗಿಲು ತಾಳ ಹಾಕಿಕೊಂಡು ಸುಖವಾಗಿ ನಿದ್ದೆ ಮಾಡಮ್ಮ" ಎಂಮುದು ಕೇಳಿ, ಅವಳ ಮನಸ್ಸು ಹಗುರಾಯಿತು ವರದನ ಮೇಲಿದ್ದ ದುಷ್ಟ ಕಲ್ಪನೆಗಳು ದೂರದೂರ ಹಾರಿಹೋದುವು

ಹಾಗೆಯೇ ಆ ರಾತ್ರಿ ಕಳೆಯಿತು. ಗೌರಿ ಮಲಗಿ ನಿದ್ರಿಸಿದಳೋ ಇಲ್ಲವೋ ಅವಳಿಗೇ ಗೊತ್ತು. ಮರಂತು, ನೀರಳೀ ಬಣ್ಣಕ್ಕೆ ತಿರುಗಿದ ಅವಳ ಬಾಡಿದ ಕಣ್ಣುಗಳನ್ನು ನೋಡಿದರೆ, ಸರಿಯಾದ ನಿದ್ರೆ ಬಂದಿರಲಿಕ್ಕಿಲ್ಲ ಮನಸ್ಸು ಸಾಧಕಬಾಧಕವಾದ ಯೋಚನೆಗಳಲ್ಲಿ ತೊಳಲಾಡುತ್ತಿದ್ದರೆ, ಸುಖ ನಿದ್ದೆ ಹೇಗೆ ಬಂದೀತು ?

ಬೆಳಗಾಗುವಾಗ, ಅವಳು ಧೈರ್ಯವನ್ನು ಮಾತ್ರ ಬಿಡದೆ ಹಾಗೆಯೇ ಹಿಡಿದುಕೊಂಡಿದ್ದಳು. ವರದನು ಸಿಸಿಮಾ ಉದ್ಯೋಗಿ ಸಿನಿಮಾ ಉದ್ಯೋಗದಲ್ಲಿರುವವರೆಲ್ಲ, ಕಿಲಾಡಿ–ಕುಡಿಗಾರ–ಪೋಕರಿಗಳೇ, ಎಂಬ ದುಷ್ಪ್ರವಾದವನ್ನು ಅವಳು ತುಂಬಾ ಕೇಳಿದ್ದಳು ಇಂತಹನ ಕೈಗೆ ಸಿಕ್ಕಿಬಿದ್ದ ತಾನು ಸಮಯೋಚಿತ ಉಪಾಯದಿಂದಲೇ ಪಾರಾಗಬೇಕೆಂದು ಗಟ್ಟಿಯಾಗಿಯೇ ಇದ್ದಳು

ಪ್ರಾತಃಕೃತ್ಯಗಳೆಲ್ಲಾ ತೀರಿ, ಅಲ್ಪಾಹಾರದ ಸೇವನೆಯಾದ ವೇಲೆ ಆ ಮೂವರೂ ಆ ಹೋಟಲಿನಿಂದ ಹೊರಟರು. ಜೀಪ್ ಕಾರು ಅವರನ್ನು ಸಾಗಿಸಿಕೊಂಡು ಮದರಾಸಿನ ದಾರಿ ಹಿಡಿಯಿತು.

ಆಗ ಗೌರಿ ವರದನನ್ನು ಕುರಿತು,— "ನಾವು ಮದರಾಸಿಗೆ ಯಾವಾಗ ಮುಟ್ಟುಯೇವು?'' ಎಂದು ಕೇಳಿದಳು.

''ಸಂಜೆಯಾದೀತು." ಎಂದನು ವರದ.

"ನನ್ನನ್ನು ಮಹಿಳಾಭ್ಯುದಯ ಮಂಡಲಿಗೆ ಯಾವಾಗ ಕರೆದೊಯ್ಯುತ್ತೀರಿ?"

''ನಾಳೆ ಸಮಯಮಾಡಿ ಹೋದರಾಯಿತು."

''ನಾಳೆಯೇ ಸಮಯಮಾಡಿ ಕರೆದೊಯ್ದು ಬಿಟ್ಟುಬಿಡಿ!''

''ನೋಡೋಣ.''

''ನೋಡೋಣ—ಎಂದು ಸಂದೇಹವಾಗಿ ಹೇಳುವಿರೇಕೆ?''

''ನನ್ನ ಮೇಲೆ ನಿನಗಿರುವ ಸಂದೇಹವನ್ನು ಹೇಗೆ ನಿವಾರಿಸುವುದೆಂದು ಯೋಚಿಸುತ್ತಿದ್ದೇನೆ. ನೀನು ಇನ್ನೂ ನನ್ನನ್ನು ಪರಕೀಯನೆಂದು ತಿಳಿದಿರುವಿ! ನಿನ್ನ ಅಣ್ಣ ಶೀನು ನನ್ನ ತಂಗಿ ಸುಂದರಿಯ ಗಂಡನಲ್ಲವೆ? ನಿನಗಿದು ಗೊತ್ತಿದ್ದೂ ನನ್ನನ್ನು ಪರಕೀಯನಂತೆ ಭಾವಿಸುವಿಯಲ್ಲಾ! ನನ್ನ ಮನೆಯಲ್ಲಿ ನೀನು ಕೆಲವು ದಿನ ಇದ್ದರೇನಾದೀತು?" ಎಂದು ವರದನು ಸಂಬಂಧವನ್ನು ಒಡೆದು ಹೇಳಿದನು.

"ಸುಂದರಿ ಅತ್ತಿಗೆ ನಿಮ್ಮಲ್ಲಿಗೆ ಬರುತ್ತಾಳೆಯೆ?" ಎಂದು ಗೌರಿ ಕೇಳಿದಳು.

''ಬರುತ್ತಾಳೆ. ನೀನು ಸೇರಬೇಕೆಂದಿರುವ ಮಹಿಳಾಭ್ಯುದಯ ಮಂಡಲಿಯಲ್ಲಿಯೇ ಅವಳೂ ಇದ್ದಾಳೆ. ಅವಳ ಜತೆಯಲ್ಲಿಯೇ ನಿನ್ನನ್ನು ಅಲ್ಲಿಗೆ ಕಳುಹಿಸಿದರಾಯಿತೋ ಇಲ್ಲವೊ?"

ಈ ಮಾತು ಗೌರಿಗೆ ತುಂಬ ಸಮಾಧಾನವನ್ನು ಕೊಟ್ಟಿತು ಮತ್ತೆ ಅವಳು ಹೆಚ್ಚು ಮಾತಾಡಲಿಲ್ಲ.

ಸಾಯಂಕಾಲ ಆರು ಗಂಟೆಯ ಸುಮಾರಿಗೆ ಜೀಪ್ ಕಾರು ಮದ್ರಾಸುನಗರವನ್ನು ಹೊಕ್ಕಿತು.

ಗೌರಿ ಇದುವರೆಗೂ ಮದರಾಸನ್ನು ನೋಡಿರಲಿಲ್ಲ. ಕಾರು ಮದರಾಸಿನೊಳಗೆ ಪ್ರವೇಶ ಮಾಡುತ್ತಲೇ ಅವಳಿಗೆ ಕುತೂಹಲವೂ ಭಯವೂ ಆಶ್ಚರ್ಯವೂ ಒಟ್ಟಿಗೇ ಎದ್ದುಕೊಂಡವು. ಅಪಾಯವೇನೂ ಉಂಟಾಗದೆ, ಯೋಚಿಸಿದ ರೀತಿಯಲ್ಲಿಯೇ ಅವಳು ಮದರಾಸಿಗೆ ಬಂದಿದ್ದರೆ,

ಪಟ್ಟಣದ ವೈಭವವನ್ನು ಕಂಡು ಸಂತೋಷಪಡುತ್ತಿದ್ದಳಲ್ಲವೆ? ಈಗ ಆ ಮದರಾಸು, ಸುತ್ತುಮುತ್ತೂ, ಮೇಲು ಕೆಳಗೂ, ಇಲೆಕ್ಟ್ರಿಕ್ ವಯರುಗಳು ಹರಡಿಕೊಂಡಿರುವ ಆ ಮದರಾಸು, ಪಾಪದ ಮುಂದಿಗೆ ಟೋಪಿ ಹಾಕುವ ಒಂದು ಬೇಟೆಯ ಬಲೆಯಂತೆ ಒಮ್ಮೆ ಅವಳನ್ನು ಭಯಪಡಿಸಿತು. ಕ್ಷಣೇಕ್ಷಣೇ ಗಂಡಾಂತರಗಳಿಂದೊಪ್ಪುವ ಬೀದಿಗಳು; ಗಂಡಾಂತರಗಳನ್ನು ಕೂದಲೆಳೆಯಷ್ಟು ಅಂತರದಲ್ಲಿ ತಪ್ಪಿಸಿಕೊಂಡು ಓಡಾಡುತ್ತಿರುವ ಕಾರುಗಳು, ಬಸ್ಸುಗಳು, ಮಿಲಿಟ್ರೀ ಲಾರಿಗಳು, ಟ್ರಕ್ಕುಗಳು! ಇವೆಲ್ಲವುಗಳ ನಟ್ಟನಡುವಿನಲ್ಲಿ. ಬೇತಾಳನಂತೆ ನಿರ್ಲಕ್ಷ್ಯವಾಗಿ ಮಂದಗತಿಯಿಂದ ಸಾಗುತ್ತಿರುವ ಟ್ರಾಮುಗಳು! ಅಕಸ್ಮಾತ್ತಾಗಿ ನೆಲದಲ್ಲೆ ಸಿಡಿಲೇಳುವಂತೆ ಸಾಗುತ್ತಿರುವ ಮೋಟಾರು ಬೈಕ್ಕುಗಳು! ಅಲ್ಲದೆ ಸೈಕಲ್ಲುಗಳೆಷ್ಟು! ಜಟ್ಕಾಗಳೆಷ್ಟು! ರೊಟ್ಟೀ ಬಿಸ್ಕೇಟ್ ಬಂಡಿಗಳೆಷ್ಟು!

ಬೀದಿಯ ಇಕ್ಕೆಲಗಳಲ್ಲಿಯೂ ಯಂತ್ರಶಾಲೆಗಳೆಷ್ಟು! ಅಂಗಡಿಗಳೆಷ್ಟು! ಕಂಪನಿಗಳೆಷ್ಟು! ಬ್ರಹ್ಮಾಂಡವಾದ ಬ್ಯಾಂಕುಗಳೆಷ್ಟು! ವ್ಯಾಪಾರವೆಷ್ಟು! ಸಂಘಗಳೆಷ್ಟು! ಸಂಸ್ಥೆಗಳೆಷ್ಟು! ಸಿನಿಮಾ ಮಂದಿರಗಳೆಷ್ಟು! ಫಿಲಿಂ ಸ್ಟೂಡಿಯೋಗಳೆಷ್ಟು! ದಶದಿಶೆಗಳೂ ಶಬ್ದಮಯ.

ಇವೆಲ್ಲ ಶಬ್ದಗಳಿಗೊಂದು ಇಂಪುಗೊಡುವ ಆಕಾಶವಾಣಿ ರೇಡಿಯೋ ಸಂಗೀತ! ಗಗನಾಂಗಣದಲ್ಲಿ ಅಡಿಗಡಿಗೆ ಕರ್ಕಶ ಶಬ್ದದಿಂದ ತಿರುಗುತ್ತಾ, ಪಲ್ಟೀ ಹೊಡೆಯುತ್ತಾ ಲಾಗ ಹಾಕುತ್ತಾ ಹಾರುತ್ತಿರುವ ವಿಮಾನಗಳೆಷ್ಟು! ಕಪ್ಪು ಬಣ್ಣದ ಭಯಂಕರವಾದ 'ಬಾಂಬರು'ಗಳೆಷ್ಟು!

ಅಲ್ಲಲ್ಲಿ ಬೀದಿಯ ಬದಿಯಲ್ಲಿ ಫರ್ಲಾಂಗಿಗೊಂದರಂತಿರುವ ಎ. ಆರ್. ಪಿ ಶೆಲ್ಟರು ಗೂಡುಗಳೆಷ್ಟು!

"ಕೂಂಂಂಂ................" ಎಂಬೊಂದು ಪಾತಾಳಸ್ವರದಂತೆ ಅಪಸ್ವರದಿಂದ ಹೊರಟು, ಇಡೀ ಮದರಾಸುನಗರ ವಾತಾಂಗಣವನ್ನೆಲ್ಲಾ ಒಂದೇ ನಾದದೊಳಗೆ ತೇಲಿಸುತ್ತಿರುವಂತೆ, ನೀಳವಾದೊಂದೂಳ ಶಬ್ದವನ್ನು ಕೇಳಿ ಗೌರಿ ಬೆಚ್ಚಿಬಿದ್ದಳು. "ಅದು ಎ ಆರ್. ಪಿ. ಯುವರ ಪರೀಕ್ಷಾರ್ಥ ಪ್ರಯೋಗವಾದ ಜಗಿಲು" ಎಂದು ವರದನು ಗೌರಿಗೆ ತಿಳಿಸಿದನು.

ಮದರಾಸಿನಲ್ಲಿ ಎ. ಆರ್ ಪಿ ಯವರೂ ಮಿಲಿಟ್ರೀಯವರೂ, ಪೋಲೀಸರೂ ತುಂಬಿಕೊಂಡು ಎಲ್ಲಿ ನೋಡಿದರೂ ಕಾಣುತ್ತಿದ್ದರು. ಯಾವ್ಯಾವ ಊರುಗಳಿಂದಲೋ ಬಂದು ಸೇರಿರುವ ಚಿತ್ರವಿಚಿತ್ರವಾದ ಜನರು ಇನ್ನೂ ಹೆಚ್ಚಾಗಿದ್ದರು ಕೆಲವು ವಿಕಾರರೂಪಿಗಳಾದ ನೀಗ್ರೋ ಸಿಪಾಯಿಗಳ ಕತ್ರಗೂ ಗಟ್ಟಿಮುಟ್ಟಾ ಆದ ಮೈಕಟ್ಟನ್ನು ನೋಡಿ ಗೌರಿ ಆಶ್ಚರ್ಯಪಟ್ಟಳು ಯುರೋಪೀಯರು! ಬರ್ಮೀಯರು! ಚೈನೀಯರು! ಚುರುಕಾಗಿ ಉನ್ನತಗಾತ್ರರಾಗಿರುವ ಅಮೇರಿಕನ್ ಏರ್ ಪೈಲೆಟ್‌ಗಳು!................

ಆಹಾ! ಎಂಥ ಮದರಾಸಿದ! ಇಂಥ ಜಟಿಲನಗರದಲ್ಲಿ ಏಕಾಂಗಿಯಾದ ಸ್ತ್ರೀಯೊಬ್ಬಳು ಸಿಕ್ಕಿಕೊಂಡರೆ ಅವಳ ಗತಿಯೇನು! ಗೌರಿ ಏಕಾಂಗಿನಿಯಾಗಿ ಅಪರಿಚಿತರ ಮಧ್ಯದಲ್ಲಿಯೇ ಸಿಕ್ಕಿದ್ದಾಳಲ್ಲವೆ!— ಈ ಯೋಚನೆಯಿಂದ ಗೌರಿಯ ಮೈನಡಗಿತು! ಕೆಳಗೆ ಬೀಳುತ್ತಿರುವ ಧೈರ್ಯದೇವತೆಯನ್ನು ಗಟ್ಟಿಯಾಗಿ ಹಿಡಿದುಕೊಂಡಳು.

ಬೀದಿಗಳಲ್ಲೆಲ್ಲಾ ಎಲೆಕ್ಟ್ರಿಕ್ ದೀಪಗಳು ಮಿಣುಕಿದುವು! 'ಬ್ಲ್ಯಾಕ್ ಔಟ್'ನಿಂದ ಆ ದೀಪಗಳು ಕಪ್ಪುಕಪ್ಪಾಗಿ, ನಗರದ ಸರ್ವಾಂಗದಲ್ಲಿಯೂ, ನೆರಳು ಭೂತಗಳನ್ನು ಸೃಷ್ಟಿಸಿಕೊಂಡು ನಿಂತಿದ್ದುವು!

ಜೀಪ್ ಕಾರು ಸಾಗಿತು. ತ್ಯಾಗರಾಯನಗರವನ್ನು ಹೊಕ್ಕಿತು. ಬಳಿಕ ಒಂದು ದೊಡ್ಡ ಕಂಪಾವುಂಡ್ ಗೇಟಿನೊಳಗೆ ಹೊಕ್ಕಿತು. ಆ ಮುಖದ್ವಾರದಲ್ಲಿ ಇಬ್ಬರು ಘೂರ್ಕಾ ಸಿಪಾಯಿಗಳು ನಿಂತಿದ್ದರು. ವರದನ ಜೀಪ್ ಕಾರಿಗೆ ಅವರು 'ಸೆಲ್ಯೂಟ್ ಮಾಡಿ ದಾರಿಬಿಟ್ಟರು. ಮುಖದ್ವಾರದ ಕಮಾನಿನಲ್ಲಿ "ಪ್ರಕೃತಿ ಕಳೋದ್ಧಾರಕ ಫಿಲಿಂ ಕಂಪನಿ" ಎಂಬ ಹೆಸರು, ಬ್ಲ್ಯಾಕ್‌ಔಟ ಬೆಳಕಿನಲ್ಲಿ ದೊಡ್ಡದಾಗಿ ಹೊಳೆಯುತ್ತಿತ್ತು.

ಅದರೊಳಗೆ ಅಚ್ಚುಕಟ್ಟಾದೊಂದು ಸುಂದರವಾದ ಕಾಂಕ್ರೀಟು ಬಂಗಲೆಯ ಮುಂದೆ ಜೀಪ್ ಕಾರು ನಿಂತಿತು. ಮನೆಯೊಳಗಿದ್ದ ಸೇವಕನು ಓಡಿಯೋಡಿ ಕಾರಿನ ಬಳಿಗೆ ಬಂದನು.

ವರದನು ಕೆಳಗಿಳಿದು ಗೌರಿಯನ್ನು ಇಳಿಯುವಂತೆ ಹೇಳಿದನು.

ಗೌರಿ ಸಾಶಂಕದಿಂದ— "ಇಲ್ಲೇಕೆ ಇಳಿಯಬೇಕು?"

"ನನ್ನದೇ ಮನೆಯಿದು."

"ಇಲ್ಲಿ ಹೆಂಗುಸರಾರೂ ಇಲ್ಲವೆ?"

"ಇದ್ದಾರೆ." ಎಂದು ವರದನು ಆ ಸೇವಕನ ಕಡೆಗೆ ತಿರುಗಿ— "ಲೋ! ವೆಂಕೂ! ಈ ಅಮ್ಮನವರನ್ನು ಮಾಳಿಗೆಯ ಮೇಲೆ ಕರೆದು ಕೊಂಡುಹೋಗು. ಶೆಲ್ಲಂಳನ್ನು ಇವರ ಜತೆಗೆ ಕೊಡು." ಎಂದನು.

ಅಷ್ಟರಲ್ಲಿ "ಹಲೋ ಮಿಸ್ಟರ್ ವರದನ್!—" ಎಂದು ಅವನನ್ನು ಮಾತಾಡಿಸುತ್ತ, ಅತ್ತ ಕಡೆಯಿಂದ ಯಾರೋ ಕೆಲವರು ಬರುತ್ತಿದ್ದರು. ಅವರೆಲ್ಲರೂ, ಹ್ಯಾಟು ಬೂಟು ಕೋಟು ಸೂಟುಧಾರಿಗಳಾದ 'ಜಂಟಲ್ ಮ್ಯಾನು'ಗಳೇ ಆಗಿದ್ದರು ವರದನು ತಟ್ಟನೆ ಅವರ ಕಡೆಗೆ ಹೊರಟನು ಅವರಿಗೆ 'ಶೇಕ್‌ಹ್ಯಾಂಡು' ಕೊಡುತ್ತ ನಗುನಗುತ್ತ ಏನೇನೋ ಮಾತಾಡ ಲಾರಂಭಿಸಿದನು.

ಗೌರಿ ಕಾರಿಳಿದು ಸಾಶಂಕದಿಂದ ಆ ಸೇವಕ ವೆಂಕೂನ ಹಿಂದೆಯೇ ಹೋದಳು. ಮಾಳಿಗೆಯ ಮೇಲೆ ಜಗಜ್ಜಗಾಯಮಾನವಾಗಿ ಬೆಳಗುವ, ನಾಗರಿಕ ಅಲಂಕಾರಗಳಿಂದೊಪ್ಪುವ ಕೊಟಡಿಯೊಳಗೆ ಅವಳ ಪ್ರವೇಶ ವಾಯಿತು.

ವೆಂಕು ತಮಿಳು ಭಾಷೆಯಲ್ಲಿ— "ಇಳ್ಲೆ ಕೂತುಕೊಳ್ಳಿರಮ್ಮ. ಶೆಲ್ಲಂಮನನ್ನು ಕಳುಹಿಸುತ್ತೇನೆ." ಎಂದೆದು ಕೆಳಗೆ ಹೋದನು.

ಗೌರಿಗೆ ತಮಿಳು ಬಾರದು. ಅವನು ಹೇಳಿದ್ದು ಅವಳಿಗೆ ಸ್ಪಷ್ಟ ವಾಗಲಿಲ್ಲ.

ಅಷ್ಟರಲ್ಲಿ ಕೆಳಗಿನ ಹಾಲಿನಲ್ಲಿ, ವರದನೂ ಅವನ ನಾಲ್ಕಾರು ಮಂದಿ ಮಿತ್ರರೂ ಬಂದು ಸೇರಿ, ಅಟ್ಟಹಾಸದಿಂದ ಮಾತಾಡುತ್ತಿರುವುದು ಕೇಳ ಲಾರಂಭಿಸಿತು

ಗೌರಿ ಒಮ್ಮೆ ಆ ಕೊಟಡಿಯನ್ನು ಪೂರಾ ನೋಡಿದಳು. ಸುಂದ ರಾಕಾರದ ಕೊಟಡಿ ಗೋಡೆಯಲ್ಲಿ ಪ್ರಸಿದ್ಧ ಸಿನಿಮಾ ತಾರೆಗಳ ಭಾವ-ಭಂಗಿಗಳ ಭಾವಚಿತ್ರಗಳು ಅಲಂಕರಿಸಿಕೊಂಡಿದ್ದುವು ನಾಲ್ಕು ಮೂಲೆ ಗಳಲ್ಲಿ ನಾಲ್ಕು ಸ್ಟೂಲುಗಳ ಮೇಲೆ ನಿಕ್ಷೇಪಿಸಲ್ಪಟ್ಟಿರುವ, ಬೇರೆ ಬೇರೆ ಭಂಗಿ ಗಳ ಲೋಹದ ನಾಲ್ಕು ನಿರ್ವಾಣ ಸ್ತ್ರೀ ಮೂರ್ತಿಗಳನ್ನು ಕಂಡು ಗೌರಿ ತುಂಬಾ ಅಸಂಹಿಸಿಕೊಂಡಳು. ಮೇಲೆ ಫ್ಯಾನು ಗಿರಗಿರನೆ ಸುತ್ತುತ್ತಿತ್ತು.

ವಿದ್ಯುದ್ದೀಪವು ಉಜ್ವಲ ಪ್ರಕಾಶದಿಂದ ಬೆಳಗುತ್ತಿತ್ತು. ಆದರೆ ಕಿಟಕಿಯಿಂದ ಆ ಬೆಳಕು ಹೊರಗೆ ಹಾಯುದಂತೆ, ಕರೀ ಪರದೆಗಳನ್ನು ಇಳಿಬಿಡಲ್ಪಟ್ಟಿದ್ದುವು.

ಶೆಲ್ಲಂ ಬಂದಳು. ಅವಳು ೨೫ ವರ್ಷ ವಯಸ್ಸಿನ ಯುವತಿ ವೀಳ್ಯದ ತುಂಬುಲದಿಂದ ಅವಳ ಬಾಯಿ ಕೆಂಪು ಕೆಂಪಾಗಿತ್ತು. ಬಾಯಿ ತುಂಬಾ ಮಾತಾಡುವವಳೆಂದು ತೋರುತ್ತದೆ ತಮಿಳು ಭಾಷೆಯಲ್ಲಿ ಗೌರಿಯೊಡನೆ ಏನೇನೋ ವಳವಳನೆ ಮಾತಾಡಿದಳು. ಅದೇನೂ ಗೌರಿಗೆ ಅರ್ಥವಾಗದಿದ್ದರೂ ಒಂದು ಹೆಂಗುಸಿನ ಜತೆ ಸಿಕ್ಕಿದುದಕ್ಕಾಗಿ ಅವಳ ಮನಸ್ಸಿಗೆ ಹಗುರೆನಿಸಿತು. ಶೆಲ್ಲಂ ಗೌರಿಗೆ ಹೊಸ ಸೀರೆ-ರವಕೆಗಳನ್ನು ತಂದುಕೊಟ್ಟಳು. ಪಕ್ಕದ ಕೋಣೆಗೆ ಕರೆದೊಯ್ದು ಮುಖಮಾರ್ಜನ ಮಾಡಿಸಿದಳು. ಬಿಸಿನೀರಿನಲ್ಲಿ ಗೌರಿಗೆ ಸ್ನಾನವೂ ಜರುಗಿತು.

ಗೌರಿಗೆ ಅವಳು ಉಟ್ಟ ಬಟ್ಟೆಗಳಲ್ಲದೆ ಬೇರೆ ಬಟ್ಟೆಗಳುಂಟೆ? ಎಲ್ಲವೂ ವಸಂತಿಯ ಜತೆಯಲ್ಲಿ, ಆ ಕಾರಿನಲ್ಲಿಯೇ ಬಿಟ್ಟು ಹೋಗಿದ್ದುವು. ಆದುದರಿಂದ ಶೆಲ್ಲಂ ಕೊಟ್ಟ ಬಟ್ಟೆಬರೆಗಳನ್ನು ಉಡದಿದ್ದರೆ ಬೇರೆ ನಿರ್ವಾಹವಿದ್ದಿಲ್ಲ.

ಅಲ್ಲಿ ಒಬ್ಬ ಅಯ್ಯರ್ ಅಡುಗೆಯವನೂ ಇದ್ದನು. ಅವನ ಬಡಿಸುವಿಕೆಯಿಂದ ಅವಳ ಊಟವೂ ಆಯಿತು.

ಅದೇ ಕೋಣೆಯಲ್ಲಿ ಮಂಚ-ಹಾಸಿಗೆ ಮೊದಲಾದವುಗಳನ್ನೂ ಶೆಲ್ಲಂ ಸಿದ್ಧಪಡಿಸಿದಳು. ಆ ರಾತ್ರಿ ಗೌರಿಯ ಜತೆಯಲ್ಲಿ ಶೆಲ್ಲಂಳೂ ಅಲ್ಲಿಯೇ ಮಲಗಿದಳು.

ಶೆಲ್ಲಂ ಆಡಿದ ಮಾತಿನಿಂದ ಗೌರಿಗೆ ಸ್ವಲ್ಪ ಸ್ವಲ್ಪ ಅರ್ಥವಾದ ಸಾರಾಂಶವಿಷ್ಟೆ. ಅದೊಂದು ಸಿನಿಮಾ ಮಂಡಲಿ ಅದು ವರದನ ಪ್ರತ್ಯೇಕವಾದ ಮನೆ. ಆ ಮನೆಯಲ್ಲಿ ವರದನೊಬ್ಬನೇ ಇದ್ದಾನೆ. ಶೆಲ್ಲಂ ಒಬ್ಬಳು ದಿಕ್ಕುಗೆಟ್ಟ ಹೆಂಗುಸು. ಅಲ್ಲಿ ಕಸಗುಡಿಸುವುದು, ಪಾತ್ರೆ ಬೆಳಗುವುದು, ಬಟ್ಟೆ ಒಗೆಯುವುದು ಮೊದಲಾದ ಸಾಮಾನ್ಯ ಕೆಲಸವನ್ನು ಮಾಡುವವಳು. ಫಿಲಿಂನಲ್ಲಿ ಕೂಡಾ ಅವಳು ದಾಸಿಯ ಪಾರ್ಟ್ ಹಾಕುತ್ತಾಳೆಂತೆ. ಡ್ಯಾನ್ಸ್ ಕೂಡಾ ಅವಳು ಇತ್ತೀಚೆಗೆ ಕಲಿತಿದ್ದಾಳಂತೆ. ಇದನ್ನೆಲ್ಲಾ ಹೇಳುತ್ತಾ ಶೆಲ್ಲಂ ಒಂದಿಷ್ಟು ಡ್ಯಾನ್ಸ್ ಮಾಡಿಯೂ

ಕೋರಿಸಿಬಿಟ್ಟಿದ್ದಳು. "ಕಳ್ಳ ಕಂ" ಎಂಬ ಸಿನಿಮಾ ಚಿತ್ರದಲ್ಲಿ ಮೊಸರಿ ನವಳಾಗಿ ಕುಣಿಯುತ್ತಾ ಬಂದವಳು ಅವಳೇ ಅಂತೆ!

"ನಿಮಗೆ ಯಾರೂ ಇಲ್ಲವೆ?" "ವರದರಾಯರು ನಿಮಗೇನಾದರೂ ಆಗಬೇಕೆ?" ಎಂದು ಮುಂತಾಗಿಯೂ ವಿಚಾರಿಸಿದಳು ಶೆಲ್ಲಂ ಗೌರಿ "ಹುಂ" "ಹಂ" "ಹೌದು" "ಅಲ್ಲ" ಎಂದಷ್ಟೆ ಉತ್ತರ ಕೊಡುತ್ತಿದ್ದಳು

ಈ ಹರಕು ಬರಕು ಸಂಭಾಷಣೆಯಿಂದ ಏನೂ ಪ್ರಯೋಜನವಿಲ್ಲವೆಂದು ಗೌರಿ ಅವಳೊಡನೆ ವಿಶೇಷ ಮಾತಾಡುವ ಗೊಡವೆಗೆ ಹೋಗಲಿಲ್ಲ.

ಆ ರಾತ್ರಿ ಬೆಳಗಾಗುವವರೆಗೂ ವರದನು ಅವಳ ಬಳಿಗೆ ಬರಲೇ ಇಲ್ಲ. ಇದು ಅವಳಿಗೆ ಬಹಳ ಆಶ್ಚರ್ಯವಾಗಿತ್ತು.

## ೨೯

ಬೆಳಗಾದ ಮೇಲೆ ನೋಡಿದಾಗ, ಸುತ್ತುಮುತ್ತಣ ದೃಶ್ಯವು ಬಲು ರಮಣೀಯವಾಗಿ ಕಂಗೊಳಿಸುತ್ತಿತ್ತು. ಆ ಸಣ್ಣ ಬಂಗಲೆಯ ಸುತ್ತಾ, ಬಣ್ಣ ಬಣ್ಣದ ಹೂಯೆಲೆ ಚಿಗುರುಗಳ ಕ್ರೋಟನ್ ಗಿಡಗಳಿದ್ದುವು ಅಲಂಕಾರವಾಗಿ ಬೆಳೆಸಿರುವ ಗಿಡ ಬಳ್ಳಿ ಮರಗಳಿಂದ ತುಂಬಿರುವ ತೋಟವು ತಂಪಾಗಿ ಕಾಣುತ್ತಿತ್ತು. ತೋಟದ ನಡುನಡುವೆ ಸುಂದರವಾದ ಮಂದಿರಗಳು ಕಂಗೊಳಿಸುತ್ತಿದ್ದುವು. ಆ ಕಾಂಪಾಉಂಡಿನ ಸುತ್ತಳತೆ ಬಹಳ ವಿಶಾಲವಾಗಿತ್ತು. ಅದರ ಸುತ್ತೆಲ್ಲೆಗಳು ಕಣ್ಣಿಗೆ ಕಾಣಿಸುತ್ತಿರಲಿಲ್ಲ. ನಡೂಗಡೆಯಲ್ಲಿ ಆಕಾಶಕ್ಕೆ ತಲೆಚಾಚಿ ನಿಂತಿರುವ ಒಂದು ದೊಡ್ಡ ಸುಚಿತ್ರ ಕಟ್ಟಡವು ಕಣ್ಣನ್ನು ಸೆಳೆಯುತ್ತಿತ್ತು. ಅದರಲ್ಲಿ ದೊಡ್ಡ ದೊಡ್ಡ ಹೊಂಬಣ್ಣದ ಚಿತ್ರಾಕ್ಷರಗಳಿಂದ "ಪ್ರಕೃತಿ ಕಳೋದ್ಧಾರಕ ಸ್ಟೂಡಿಯೊ" ಎಂಬ ಹೆಸರು ಸೂರ್ಯ ಕಿರಣಗಳಿಂದ ಥಳಥಳಿಸುತ್ತಿತ್ತು. ಮೊತ್ತಕ್ಕೆ ಅದೊಂದು ದೊಡ್ಡ ರಾಜಭವನೋದ್ಯಾನದಂತೆ ಕಾಣುತ್ತಿತ್ತು. ಪಟ್ಟಣದ ಕರ್ಕಶವಾದ ಗಲಭೆಗಳೊಂದೂ ಅಲ್ಲಿಲ್ಲ. ಶಾಂತತೆಯೇ ಸಾಂದ್ರವಾಗಿ ಪಸರಿಸಿರುವಂತೆ ಕಾಣುತ್ತಿತ್ತು.

ಆಗಾಗ ಆ ಮಹಾವತಾರದೊಳಗೆ ಶ್ರೀಷ್ಮವಾದ ಹೊಳೆಯುವ ಕಾರು ಗಳು ಬರುತ್ತಾ ಹೋಗುತ್ತಾ ಇದ್ದುವು. ಆ ಕಾರುಗಳೊಳಗೆ ನಾಗರಿಕ ನಾಜೂಕುಗಳಿಂದೊಪ್ಪುವ ಸ್ತ್ರೀಪುರುಷರು ಕಾಣುತ್ತಿದ್ದರು.

ಮುಖದ್ವಾರದಲ್ಲಿ ಘೂರ್ಕಾ ಸಿಪಾಯಿಗಳಿದ್ದೇ ಇದ್ದರು.

ಇದನ್ನೆಲ್ಲಾ ನೋಡುತ್ತಾ ಕಡೆಗೆ ಗೌರಿಯನ್ನು ಆವರಿಸಿದ್ದು ಭಯವೇ! "ಅಯ್ಯೋ! ನಾನೆಲ್ಲಿಗೆ ಬಂದು ಬಿಟ್ಟೆ! ಇಂತಹ ಸ್ಥಳದಿಂದ ನಾನೆಂತು ಪಾರಾದೇನು? ನನ್ನನ್ನು ಬಲವಂತದಿಂದ ಸಿನಿಮಾದಲ್ಲಿ ತಳ್ಳುವ ಪ್ರಯತ್ನವೇ ಸರಿ! ನಿಃಸಂಶಯ!'' ಎಂದು ಮರುಗಿಕೊಂಡಳು

ಆಗ ಡೈರೆಕ್ಟರ್ ವರದನು, ಆ ಕೋಣೆಯೊಳಗೆ ಪ್ರವೇಶಿಸಿ, ನಗುತ್ತಾ— "ಏನ. ಗೌರೀದೇವಿ! ರಾತ್ರಿ ನೆಮ್ಮದಿಯಾಗಿ ನಿದ್ದೆಬಂತೆ?'' ಎಂದು ಕೇಳುತ್ತ ಅಲ್ಲಿದ್ದೊಂದು ಕುರ್ಚಿಯಲ್ಲಿ ಕುಳಿತು— "ಬಂದಿರಲಿ ಕ್ಕಿಲ್ಲ; ನನಗೆ ಗೊತ್ತು! ಹೊಸ ಸ್ಥಳವಲ್ಲವೆ? ನೀನೇ ನಿನ್ನಷ್ಟಕ್ಕೆ ನೆಮ್ಮದಿ ಯಾಗಿರಬೇಕೆಂದೇ, ನಾನು ನಿನ್ನನ್ನು ಮಾತಾಡಿಸಲಿಕ್ಕೆ ಬರಲಿಲ್ಲ. ಎಲ್ಲಾ ಆ ಶೆಲ್ಲಂಳಿಗೆ ಒಪ್ಪಿಸಿಬಿಟ್ಟಿದ್ದೆ. ನಮ್ಮ ಕನ್ನಡ ಭಾಷೆ ಅವಳಿಗೆ ಬಾರ ದಿದ್ದರೂ, ನಮ್ಮ ಭಾವ ಸನ್ನೆಗಳನ್ನರಿತು, ಕೆಲಸ ಮಾಡುವುದರಲ್ಲಿ ಅವಳು ಗಟ್ಟಿಗಿತ್ತಿ. ನಿನಗೆ ಬೇಕಾದ್ದೆಲ್ಲಾ ಒದಗಿಸಿಕೊಟ್ಟಳಷ್ಟೆ?'' ಎಂದು ಕೇಳಿದನು.

ಗೌರಿ ಹೇಳಿದಳು: ''ನಿಮ್ಮ ದಯದಿಂದ ಅದಕ್ಕೇನೂ ತೊಂದರೆ ಯಾಗಲಿಲ್ಲ ನಾನುಟ್ಟಿರುವ ಈ ಸೀರೆ ರವಕೆಗಳೆಲ್ಲಾ ನಿಮ್ಮದೇ. ಆದರೆ ಇನ್ನೂ ಹೆಚ್ಚು ನಿಮ್ಮ ಋಣಭಾರವನ್ನು ನಾನು ಸಹಿಸಲಾರೆ ಇಂದೇ ನನ್ನನ್ನು ಮಹಿಳಾಭ್ಯುದಯ ಮಂಡಲಿಗೆ ಕಳುಹಿಸಿ ಬಿಡಿ''

''ಖಂಡಿತವಾಗಿ ಕಳುಹಿಸುತ್ತೇನೆ ಏನೂ ಸಂಶಯಬೇಡ ಆದರೆ ನೀನು ಋಣಭಾರ, ಋಣಭಾರ ಎನ್ನುತ್ತೀಯಲ್ಲಾ! ಆ ಋಣಭಾರ ನಿವಾರಣೆಯಾಗದೆಯೇ ಹೋಗಿ ಬಿಡುವಿಯೇನು?" ಎಂದು ವರದನು ತುಟಿಯ ಕೊನೆಗಳಲ್ಲಿ ಮುಗುಳುನಗೆಯನ್ನು ಮೂಡಿಸಿಕೊಂಡೇ ಕೇಳಿ ದನು.

''ಅಂದರೆ................ನಿಮ್ಮ ಅಭಿಪ್ರಾಯವು ನನಗೆ ಸರಿಯಾಗಿ ಹೊಳೆಯಲಿಲ್ಲ. ನೀವು ನನಗೆ ಮಾಡಿದ ಉಪಕಾರವು ಅಮೂಲ್ಯವಾ

ದುದು ಬೇಕಾದರೆ, ಮೇಲಿನಿಂದ ಕೇವಲ ಮೂಲ್ಯವಾಗಿ ಕಾಣಿಸುವ, ನೀವು ನನ್ನನ್ನು ಕಾಪಾಡಲು ಕೊಟ್ಟ ೫೦೦ ರೂಪಾಯಿಯನ್ನು ನಾನು ಎಂದಾದರೂ ನಿಮಗೆ ಕೊಟ್ಟು ತೀರಿಸುವೆನು ಇನ್ನು ನನ್ನ ಶೀರೆ ರವಕೆಗಳು ಒಣಗುತ್ತಲೇ, ನಿಮ್ಮ ಈ ಶೀರೆ ರವಕೆಗಳನ್ನು ನಿಮಗೆ ಕೊಟ್ಟು ಬಿಡುವೆನು................"

ವರದನು ನಗುತ್ತ— "ಇಷ್ಟೇನೆ? ಆಯಿತೆ?''

''ಇನ್ನೇನು ಹೇಳಲಿ? ನಿಮ್ಮ ಮನೆಯಲ್ಲಿ ಉಂಡದ್ದಕ್ಕೂ ನನ್ನ ಲೆಕ್ಕದ ದುಡ್ಡು ಕೊಡುತ್ತೇನೆ ಬೇಕಾದರೆ!"

''ಅಯ್ಯೋ! ಹುಚ್ಚು ಹುಡುಗಿ! ಹೀಗೆಲ್ಲ ದುಡ್ಡು ಲೆಕ್ಕಾಚಾರದ ಋಣಲಾಭಕ್ಕಾಗಿ ನಾನು ನಿನ್ನನ್ನು ಕಾಪಾಡಿ ಕರೆದುಕೊಂಡು ಬಂದದ್ದೇ ಅಲ್ಲ! ನೀನೆ ಹೇಳಿದೆಯಲ್ಲ, ನನ್ನ ಉಪಕಾರವು ಅಮೂಲ್ಯವಾದುದೆಂದು!"

''ಹೌದು. ಅದಕ್ಕಾಗಿ?''

''ಅದಕ್ಕಾಗಿ ನಿನ್ನಿಂದಲೂ ನನಗೆ ಅಮೂಲ್ಯವಾದೊಂದು ಲಾಭವೇ ಆಗಬೇಕು!''

''ಅಂತಹ ಲಾಭವು ನಿಮಗೆ ಖಂಡಿತ ಆಗಿದೆ! ನೀವು ಮಾಡಿದ ಉಪಕಾರದೊಂದಿಗೇ ಅದಾಗಿದೆ!"

'' ಅದಾವುದೊ?— " ವರದನು ಏನೆಂದು ತಿಳಿಯದೆ ಪಿಳಿಪಿಳಿ ನೋಡಿದನು.

''ಸೋದರೀ ಲಾಭ! ಅಣ್ಣಾ! ಸೋದರೀ ಭಾವದಿಂದಲ್ಲವೇ ನೀವು ನನ್ನನ್ನು ಆ ಮಿಲಿಟರೀ ರಾಕ್ಷಸರ ಕೈಯಿಂದ ಪಾರು ಮಾಡಿದಿರಿ?''

''ಓಹೋ! ಹಾಗೆ ಹೇಳುವಿಯಾ? ...............ಬಹಳ ಜಾಣೆಯೇ ಸರಿ ನೀನು! ಮೆಚ್ಚಿದೆ! ಮೆಚ್ಚಿದೆ! ಆದರೆ...............ಗೌರಿ! ಸೋದರೀ ಲಾಭವೆಂಬುದು ಭಾವನಾಪರವಾದುದು. ನನಗೆ ಕೃತಿಮೂಲಕವಾಗಿ ನಿನ್ನಿಂದೊಂದು ಉಪಕಾರವಾಗಲೇಬೇಕು ''

''ನನ್ನಿಂದೇನು ಸಾಧ್ಯವಿದೆ ಅಣ್ಣಾ?''

'' ಕಲಾಕೃತಿ ನಿನ್ನಿಂದ ಸಾಧ್ಯವಿದೆ ಗೌರಿ. ಈ ವಿಷಯವಾಗಿ ಹಂಪೆಯಲ್ಲಿಯೇ ನಾನು ನಿನ್ನನ್ನು ತುಂಬಾ ಒತ್ತಾಯಪಡಿಸಿದೆ ಸಾಧ್ಯ

ವಿಲ್ಲವೆಂದು ಹಟಮಾಡಿದಿ. ಅದೇ ನನ್ನ ಮೊದಲನೆಯ ಕೋರಿಕೆ ...................."

"ಮೊದಲನೆಯದಾದರೆ ಎರಡನೆಯುದೂ ಬೇರಿದೆಯೇ?"

"ಅದು ಮೊದಲನೆಯುದರ ಹಿಂದೆ ತಾನಾಗಿಯೇ ಬರುವಂಥಾದ್ದು! ಅಷ್ಟೇನೂ ಮುಖ್ಯವಲ್ಲ!"

"ಅದೇನೋ............" ಗೌರಿಯ ತಲೆಯಲ್ಲಿ ನಾನಾ ಯೋಚನೆಗಳು ಸುಳಿದಾಡಿದುವು.

"ಅದನ್ನು ಈಗಲೇ ತಿಳಿಯುವ ಅಗತ್ಯವಿಲ್ಲ ಗೌರಿ. ಮೊದಲು ನೀನು, ಒಂದು ಚಿತ್ರದಲ್ಲಿ ನಿನ್ನ ಕಲಾ ಪ್ರದರ್ಶನವನ್ನು ಕೊಡಲೇಬೇಕು."

"ಒತ್ತಾಯಪೂರ್ವಕವಾಗಿ ನನ್ನಿಂದ ನಟನೆ ಮಾಡಿಸುವಿರಾ?"

"ನಿನ್ನನ್ನು ಬಲವಂತಪಡಿಸಿ ಮಾಡಗೊಳಿಸುವ ಇಚ್ಛೆ ನನಗಿಲ್ಲ ಗೌರಿ. ಸಾವಕಾಶವಾಗಿ ಯೋಚನೆ ಮಾಡಿದರೆ ಒಳ್ಳೆಯದರಲ್ಲಿಯೇ ನೀನು ಒಪ್ಪುವಿಯೆಂದು ನಾನು ನಂಬುತ್ತೇನೆ. ಯಾಕೆಂದರೆ............"

"ಯಾಕೆಂದರೆ ನಾನು ಅನಾಥಳಾಗಿ ಸಿಕ್ಕಿದ್ದೇನೆ. ನನ್ನನ್ನು ಯಾರೂ ಕೇಳುವವರಿಲ್ಲ ಎಂದೊ?"

"ನಿನ್ನನ್ನು ಕೇಳುವವರು ಯಾಕಿಲ್ಲ? ಎಷ್ಟೋ ಮಂದಿ ಇದ್ದಾರೆ! ನಿನ್ನ ಇಬ್ಬರು ಸುಪ್ರಸಿದ್ಧ ಅಣ್ಣಂದಿರಿದ್ದಾರೆ. ಪೋಷಕರಾದ ಶ್ಯಾಮಸುಂದರರಿದ್ದಾರೆ ಮದರಾಸಿನಲ್ಲಿಯೂ ಗಜವದನರಾಯರು, ನಿನ್ನ ಅತ್ತಿಗೆ ಸುಂದರಿ ಇದ್ದಾರೆ. ಇನ್ನು ನಿನ್ನ ಕಲಾಲೀಲೆಯನ್ನು ಕಂಡು ಮೆಚ್ಚಿದ ಅನೇಕ ಮಹನೀಯರೂ ಇದ್ದಾರೆ ಕಡೆಗೆ ನೀನು ಅನಾಥಳೇ ಆದರೆ, ಪೋಲೀಸರಿದ್ದಾರೆ! ಈಗ ನೀನು ಹಾ ಎಂದೊಂದು ಆರ್ತನಾದ ಮಾಡಿದಿಯಾದರೆ, ಪೋಲೀಸರು ಬಂದು ನಿನ್ನನ್ನು ರಕ್ಷಿಸುತ್ತಾರೆ ಆದರೆ ಗೌರೀದೇವಿ! ನೀನು ಹಾಗೆಲ್ಲಾ ಒರಟು ಚೇಷ್ಟೆ ಮಾಡಲಾರಿ! ಹಾಗೆ ಮಾಡಿ ನೀನು ಇಲ್ಲಿಂದ ತಪ್ಪಿಸಿಕೊಂಡು ಎಲ್ಲಿಗಾದರೂ ಹೋದೇನೆಂದು ಹೋದರೆ, ಈ ಮದರಾಸಿನಲ್ಲಿ ಒಳ್ಳೆಯವರೆಷ್ಟೋ ಅದಕ್ಕಿಂತ ಇಮ್ಮಡಿಯಾಗಿ ಕಾಡಿಗಳೂ ಇದ್ದಾರೆ................"

“ಹೀಗೆ ಉದ್ದಕ್ಕೆ ಹೇಳುತ್ತಾ ಹೋಗುವಿರಲ್ಲ ! ಯಾಕೆ ಅದೆಲ್ಲ ? ನನ್ನ ಉದ್ದೇಶವೇ ಬೇರೆ. ಅದನ್ನು ನಿಮಗೆ ಹಂಪೆಯಲ್ಲಿಯೇ ಸ್ಪಷ್ಟವಾಗಿ ತಿಳಿಸಿದ್ದೇನೆ ”

“ಹಾಳು ಹಂಪೆಯ ಮಾತು ಹಾಳಾಯಿತು. ಫಿಲಿಂನಲ್ಲಿ ನಟಿಸಲಾರೆನೆಂದು ಪ್ರತಿಜ್ಞೆ ಮಾಡಿರುವಿಯಾ?”

“ಫಿಲಿಂ ನ ಯೋಚನೆಯೇ ಇಲ್ಲೆಂದೆನಲ್ಲ! ಪ್ರತಿಜ್ಞೆ ಎಲ್ಲಿ ಬಂತು? ಬೇಕಾದರೆ ಈಗಲೇ ಪ್ರತಿಜ್ಞೆ ಮಾಡಿಬಿಡುತ್ತೇನೆ. ಕೇಳಿರಿ ನಾನು........ ................”

ವರದನು ಆತುರದಿಂದೆದ್ದು ಅವಳನ್ನು ತಡೆಯುತ್ತ “ಹಾ ! ಬೆಡ ಬೇಡ! ತಡೆ ಫಿಲಿಂನಲ್ಲಿ ನಟಿಸಲೇ ಕೂಡದೆಂದು ಇಷ್ಟು ಖಂಡಿತವಾಗಿ ಹೇಳುವಿಯೇಕೆ? ಅದನ್ನು ಕೇಳಬೇಕು ನನಗೆ.”

“ಮುಖ್ಯವಾಗಿ ನನಗೆ ಅಷ್ಟು ಶಿಕ್ಷಣವಿಲ್ಲ...............”

“ನಿನಗಿರುವ ಶಿಕ್ಷಣವೇ ಈಗ ಸಾಕು ಕೇಳು ಗೌರಿ ! ನಿನ್ನನ್ನು ನಾನು ಹಂಪೆಯಲ್ಲಿಯೇ ತಿಳಿದುಕೊಂಡೆನೆಂದು ತಿಳಿಯಬೇಡ. ನಿನ್ನ ವಿಷಯ ಒಂದು ವರ್ಷದ ಕೆಳಗೇ ನಾನು ಅರಿತಿದ್ದೆ. ಮಂಗಳೂರಿನ ಮಂಜುಳಕಳಾನಿಲಯದ ವಿದ್ಯಾರ್ಥಿನಿಯರ ನಾಟ್ಯ ಪ್ರದರ್ಶನವೊಂದು ಜರುಗಿತಷ್ಟೆ? ಆಗಲೇ ಅಪೂರ್ವವಾಗಿ ನರ್ತಿಸಿದ ನಿನ್ನ ನಾಟ್ಯ ಭಂಗಿಯ ಫೋಟೋ ‘ಜನವದನೀ’ ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿತ್ತಲ್ಲವೆ ? ಇಕೋ ನೋಡು, ಅದನ್ನು ನಾನು ಕತ್ತರಿಸಿ ಇಟ್ಟುಕೊಂಡಿದ್ದೇನೆ........” ಎಂದೆಂದು ವರದನು, ಅಲ್ಲಿಯೇ ಗೋಡೆಯಲ್ಲಿದ್ದೊಂದು ಪುಸ್ತಕ ಶೆಲ್ಫಿನಿಂದ ಒಂದು ‘ಅಲ್ಬಂ’ ಕೈಗೆತ್ತಿಕೊಂಡು, ಅದರೊಳಗೆ ಅಂಟಿಸಿದ್ದ ಎರಡು ಫೋಟೋಗಳನ್ನು ಅವಳಿಗೆ ತೋರಿಸುತ್ತ, “ಇಕೋ ! ಇದು ನಿನ್ನದು. ಇನ್ನೊಂದು ವಸಂತಿಯದು. ನಿನಗೂ ವಸಂತಿಗೂ ಇರುವ ವ್ಯತ್ಯಾಸವನ್ನು ನಾನು ಆಗಲೇ ಕಂಡು ಹಿಡಿದಿದ್ದೇನೆ ಗೌರೀದೇವಿ ! ನಿನ್ನ ಈ ನರ್ತನಭ್ಯಾಸವೂ ಅದಕ್ಕೊಪ್ಪುವ ಪ್ರಕೃತಿದತ್ತವಾದ ಮೈಮಾಟಗಳೂ ಎಲ್ಲಕ್ಕೂ ಮಿರುಗಿಡುವ ನಿನ್ನ ಈ ಸಮಂಜಸವಾದ ಫೇಸ್ ಕಟ್ಟೂ, ನಾನು ಎಲ್ಲಿಯೂ ನೋಡಿಲ್ಲ ! ಜಗತ್ಪ್ರಖ್ಯಾತಳಾದ ನೃತ್ಯರಾಣಿ ಶೈವಲಾದೇವಿಗೆ ಕೂಡ ಈ ಬಗೆಯ ಫೇಸ್‌ಕಟ್ಟೂ, ಮೈಮಾಟವೂ ಇಲ್ಲ! ಗೌರೀ

ಕಲೆಯ ಸೂಕ್ಷ್ಮಗಳನ್ನು ಎಲ್ಲರಿಗೂ ತಿಳಿಯಲು ಸಾಧ್ಯವಿಲ್ಲ ನಾನು ಸ್ವಲ್ಪ ನೃತ್ಯಕಲೆಯನ್ನು ಕಲಿತಿದ್ದೇನೆ. ಅಂತೆಯೇ ನಿನ್ನ ಮಹತ್ವ ಗಳನ್ನು ಅರಿತುಕೊಂಡೆ ಮಂಗಳೂರಿಗೇ ಬಂದು ನಿನ್ನನ್ನು ನೋಡ ಬೇಕೆಂಬ ಆತುರವೇ ನನಗಿತ್ತು. ಮತ್ತೆ ಮೊನ್ನೆ ಮೊನ್ನೆ ನೀನು ಮೈಸೂರಿನಲ್ಲಿ ನಟನಮಾಡಿದಿಯಷ್ಟೆ? ಆಗ ಪತ್ರಿಕೆಯ ಮೂಲವಾಗಿ ಆ ಸಮಾಚಾರವನ್ನು ನಾನು ತಿಳಿದೆ ನೀನೂ, ಶೀನುವೂ ಪಯಣ ಹೊರ ಟಿರುವುದೂ, ಹೊಸಪೇಟೆ ಹಂಪೆಗಳಿಗೆ ಸುತ್ತಿಕೊಂಡು ಮದರಾಸಿಗೆ ಬರು ವುದೂ, ಎಲ್ಲವೂ ಆ ಪತ್ರಿಕೆಯ ಮೂಲಕ ನನಗೆ ಗೊತ್ತಾಯಿತು. ದೈವ ಯೋಗದಿಂದ ಇದೇ ಸಮಯದಲ್ಲಿ ನನಗೂ ಹಂಪೆಯಲ್ಲಿ ಒಂದು ಫಿಲಿಂ ಚಿತ್ರ ಹಿಡಿಯುವ ಕೆಲಸವಿತ್ತು ನನ್ನ ಪುಣ್ಯದಿಂದ ನಿನ್ನ ದರ್ಶನವು ನನಗಾಯಿತು ಆಗ ನೀನು ಒಪ್ಪದಿದ್ದರೂ, ಸಿನೆಮಾದಲ್ಲಿ ನಿನ್ನ ಕಲಾ ಲೀಲೆ ಪ್ರಕಟವಾಗಬೇಕೆಂದು ದೇವರ ಮನಸ್ಸಿಗೆ ಬಂದುದರಿಂದಲೇ, ಪುನಃ ನೀನು ನನ್ನ ಕೈಗೇ ಸಿಕ್ಕಿರುವಿ ದೇವರ ಕಟಾಕ್ಷದಿಂದ ನಾನು ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬರದಿದ್ದರೆ, ನಿನ್ನ ಗತಿ ಏನಾಗುತ್ತಿತ್ತೋ! ಇದಕ್ಕಾದರೂ ನೀನು ಕೃತಜ್ಞಳಾಗಿರಬೇಕಲ್ಲವೇ ? ಆ ಕಮಾಂಡರನು ಇಂದು ಬೆಳಗ್ಗೆಯೇ ನನಗೆ ಭೇಟಿಯಾಗಿ, ಬಾಕಿ ಇನ್ನೂರು ರೂಪಾಯಿ ಯನ್ನು ಕಸಿದುಕೊಂಡೂ ಹೋದನು. ರೂಪಾಯಿಯ ಲಕ್ಷ್ಯವಿಲ್ಲ ನನಗೆ. ಇದನ್ನೆಲ್ಲ ಯೋಚನೆ ಮಾಡಿ ನೋಡು ಗೌರಿ ನಿನ್ನನ್ನು ನಂಬಿಕೊಂಡಲ್ಲವೇ ನಾನು ಇಷ್ಟು ದೂರ ನಿನ್ನನ್ನು ಕರಕೊಂಡು ಬಂದೆ? ಬರೀ ನಿನ್ನ ಹೃತ್ಪೂರ್ವಕ ಕೃತಜ್ಞತೆಯಾಗಲೀ ಮುಂದೆಂದೋ ಕೊಡುವೆ ನೆಂಬ ಹಣವಾಗಲೀ ನನಗೇಕೆ?''

ಗೌರಿ ಏನೂ ಹೇಳದೆ ಮೌನವಾಗಿದ್ದಳು ಸ್ವಲ್ಪ ನಿಲ್ಲಿಸಿ ವರದ ನೆಂದ:— ''ಗೌರಿ! ಅರ್ಥವಾಯಿತೇ ನಾನು ಹೇಳಿದ್ದು?............... ಒಂದು ವೇಳೆ ಸಿನಿಮಾದಲ್ಲಿ ನಟಿಸುವುದರಿಂದ ಕೆಟ್ಟ ಹೆಸರು ಬರುತ್ತದೆಂಬ ಅಳುಕೆ?''

ಗೌರಿ ಈಗ ಬಾಯಿಬಿಟ್ಟಳು:— "ಹೌದು. ಸಿನಿಮಾದಲ್ಲಿ ನಟಿ ಸುವವರೆಲ್ಲ ಕೆಟ್ಟ ಹೆಸರಿಗೆ ಆಳಾದವರೇ! ಅವರು ಸಿನಿಮಾ ನಟನೆಯಲ್ಲಿ

ಎಷ್ಟು ವಿಖ್ಯಾತರಾಗಿದರೂ, ಸರ್ವಸಾಧಾರಣವಾಗಿ ಜನರಿಗೆಲ್ಲಾ ಅವರ ಮೇಲೊಂದು ಕೀಳುಭಾವನೆ ಇದ್ದೇ ಇದೆ ”

‘‘ಅದೇನೋ ಮುಕ್ಕಾಲು ಭಾಗ ನಿಜವೆನ್ನಬಹುದು. ಹಾಗೆಂದು ಅಂಜಿ ಕುಳಿತರೆ ಆದೀತೆ? ಫಿಲಿಂ ಎಂಬುದು ಎಲ್ಲಾ ಕಲೆಗಳಿಗೂ ಬೊಕ್ಕಸ ವಿದ್ದಂತೆ. ನಿನ್ನಂತಹ ಉತ್ತಮ ಸ್ತ್ರೀಯರು ಹೆಚ್ಚುಹೆಚ್ಚಾಗಿ ಸೇರುವುದ ರಿಂದಲೇ ಆ ಬೊಕ್ಕಸಕ್ಕೆ ಹತ್ತಿಕೊಂಡ ಕಳಂಕವು ನೀಗಬೇಕಾಗಿದೆ. ಈ ಕಾರ್ಯಕ್ಕೆ ನಿನ್ನ ಗೆಳತಿ ವಸಂತಿ ತಾನಾಗಿಯೇ ಮುಂದಡಿಯಿಡುವ ಮನೋಭಾವವುಳ್ಳವಳಾಗಿರುವುದು ಬಹಳ ಸಂತೋಷ. ಆದರೆ ಗೌರಿ! ಕಲೆಗೇ ಮೀಸಲಾಗಿರುವ ನಿನ್ನಂತಹಳು ಬಂದರಲ್ಲವೇ ಸಾರ್ಥಕ?’’

“ವಸಂತಿಯನ್ನು ಕೂಡಾ ಸೇರಿಸಿಕೊಳ್ಳುವಿರಾ?’’

‘‘ಕೊಂಡರೂ ಕೊಂಡೇನು, ಬಿಟ್ಟರೂ ಬಿಟ್ಟೇನು. ಅವಳಂತಹರು ನೂರಾರು ಮಂದಿ ಇದ್ದಾರೆ ಈಗ ನಿನ್ನ ವಿಷಯುವೇ ಮುಖ್ಯ.”

‘‘ಅಣ್ಣಾ! ನೀವು ಏನೇನೋ ಹೇಳಿ ನನ್ನನ್ನು ಬಿಗಿಯಲೆತ್ನಿಸು ತ್ತೀರಿ. ಏನಾದರೂ ನನಗೆ ಸಿನಿಮಾದಲ್ಲಿ ಮೆರೆಯುವ ಇಚ್ಛೆಯಿಲ್ಲ ಮೊದಲು ನನ್ನನ್ನು ಮಹಿಳಾಭ್ಯುದಯ ಮಂಡಲಿಗೆ ಸೇರಿಸಿ ಬಿಡಿ. ನಿಮ್ಮ ಸಿನಿಮಾದಲ್ಲಿ ನಟಿಸುವ ವಿಚಾರ ಆಲ್ಲೇ ಯೋಚಿಸುತ್ತೇನೆ ”

‘‘ಅದು ಮಾತ್ರ ಆಗುವುದಿಲ್ಲ. ಅಲ್ಲಿ ಸೇರಿದ ಮೇಲೆ ಅಲ್ಲಿ ಕಲಿ ಯುವ ಅವಧಿ ಮುಗಿಯುವವರೆಗೂ ಸಿನಿಮಾದಲ್ಲಿ ನಟಿಸಲಿಕ್ಕೆ ಕೂಡ ದೆಂಬ ನಿಯುಮವೇ ಇದೆ ಅಲ್ಲಿ.’’

‘‘ಸರಿ. ಆ ಮೇಲೆಯೇ ನಟಿಸಿದರಾಯಿತಲ್ಲ?”

‘‘ಮತ್ತೆ ನಿನ್ನ ಮೊದಲಿನ ಪಲ್ಲವಿಯೆ? ಆ ಮೇಲಿನ ನಟನೆಗೆ ಮೊದಲೊಂದು ಸ್ವಸ್ತಿವಾಚನವಾಗಿ ಬಿಡಲಿ. ಅನಂತರ ಮಹಿಳಾಭ್ಯು ದಯ ಮಂಡಲಿಯುಲ್ಲಿ ನಿನ್ನ ಇಷ್ಟ ಪೂರ್ತಿಯಾಗುವವರೆಗೂ ಕಲಿ. ಮುಂದಿನ ನಿನ್ನ ಕೀರ್ತಿಯ ಪ್ರಚಾರಕ್ಕೆ ಇದೊಂದು ಮುಂಬೆಳಕಾಗು ವುದು. ಅಲ್ಲದೆ ಮಹಿಳಾಭ್ಯುದಯು ಮಂಡಲಿಯುಲ್ಲಿ ಕಲಿತು ಮುಗಿಸ ಬೇಕಾದರೆ ಒಂದೆರಡು ಸಾವಿರ ರೂಪಾಯಿ ಖರ್ಚೂ ಉಂಟು........”

‘‘ಆ ಖರ್ಚಿನ ವಿಷಯುವೆಲ್ಲ ಯೋಚನೆ ಮಾಡಿಕೊಂಡೇ ನಾವು ಹೊರಟದ್ದೇವೆ ಅಣ್ಣಾ!’’

"ಅಂದರೆ ಬಹುಶಃ ನಿನ್ನ ಪೋಷಕರಾದ ಆ ಶ್ಯಾಮಸುಂದರರೇ ಕೊಡುತ್ತಿದ್ದಾರು! ಗೌರಿ! ಇನ್ನೊಬ್ಬರ ಧರ್ಮಕ್ಕೆ ಕೈಯೊಡ್ಡಿ ಕಲಿಯುವುದಕ್ಕಿಂತಲೂ, ಸ್ವಂತ ಸಂಪಾದನೆಯ ಬಲದಿಂದ ಕಲಿಯುವುದು ಇನ್ನೂ ಮೇಲಲ್ಲವೆ?"

"ಇದ್ದೀತು. ಆದರೂ ನಾನು ಅಸ್ವತಂತ್ರಳು! ಅವರನ್ನು ಕೇಳದೆ................"

"ಯಾರನ್ನು ಶ್ಯಾಮಸುಂದರರನ್ನೆ?"

"ಹೌದು ಮತ್ತು ನನ್ನಣ್ಣ................"

"ನಿನ್ನಣ್ಣ! ಪಾಪ! ಅವನು ಎಲ್ಲಿದ್ದಾನೋ ಏನೋ! ದೇಶಸೇವೆಗೆ ಇಳಿದವರನ್ನೆಲ್ಲ ನಂಬಿ ಒಂದು ಕೆಲಸ ಮಾಡಲು ಸಾಧ್ಯವೇ ಗೌರಿ? ನೀನು ನಿನ್ನ ಸ್ವಂತ ಸಂಪಾದನೆಯಿಂದ ಕಲಿಯುತ್ತೇನೆಂದು ಹೇಳಿದರೆ ಶ್ಯಾಮಸುಂದರರು ತುಂಬ ಸಂತೋಷ ಪಟ್ಟಾರು. ಶ್ಯಾಮಸುಂದರರೇನು?— ಯಾರೂ ಸಂತೋಷ ಪಟ್ಟಾರು ಆದರೆ ಅವರಿಗೆಲ್ಲ ತಿಳಿಸುವ ಅಗತ್ಯವೇನಿದೆ? ನಿನ್ನನ್ನು ಯಾರೋ ಮಿಲಿಟರಿಯವರು ಹೊತ್ತುಕೊಂಡು ಹೋದರೆಂದು ತಿಳಿದು ಅವರು ಸುಮ್ಮನಾಗಿ ಬಿಡುತ್ತಾರೆ. ನಾನೀಗ ಹೇಳುವಂತೆ ನೀನು ಪ್ರಸಿದ್ಧಳಾಗಿ ಕಲಾಜ್ಯೋತಿಯಾಗಿ ಪ್ರಕಾಶಮಾನಳಾದ ನಿನ್ನನ್ನು ಕಂಡು ನಿನ್ನವರೆಲ್ಲ ಎಷ್ಟು ಆಶ್ಚರ್ಯಪಟ್ಟಾರು? ಎಷ್ಟು ಆನಂದಪಟ್ಟಾರು!"

ಗೌರಿ ಮತ್ತೆ ಮೌನ ತಾಳಿದಳು.

ವರದನು ಎದ್ದು, ಯಾವುದೋ ಇನ್ನೊಂದು ಕೋಣೆಗೆ ಹೋಗಿ, ಕೆಂಬಣ್ಣದ್ದೊಂದು ಕಾಗದದೊಂದಿಗೆ ಅವಳ ಬಳಿಗೆ ಬಂದನು. ಆ ಕಾಗದದಲ್ಲಿ ಬಿಟ್ಟು ಬಿಟ್ಟು ಇಂಗ್ಲಿಷ್ ಅಕ್ಷರಗಳು ಪ್ರಿಂಟಾಗಿದ್ದುವು. ವರದನು 'ಪಾರ್ಕರ್' ಪೇನಾದಿಂದ ಅದನ್ನು 'ಪಿಲ್‌ಅಪ್' ಮಾಡಿ, ಆ ಕಾಗದವನ್ನು ಗೌರಿಯ ಕೈಗಿತ್ತು— "ಇದನ್ನು ಓದಿ ನೋಡಿ ನಿನ್ನ ದಸ್ಕತ್ತು ಹಾಕಿಕೊಡು" ಎಂದು, ಆ ಶ್ರೇಷ್ಠವಾದ ಪೇನಾವನ್ನು ಅವಳ ಕಡೆಗೆ ನೀಡಿದನು.

ಗೌರಿ ಅದನ್ನು ಓದಿ ನೋಡಿದಳು. ಅದು ಫಿಲಿಂನಲ್ಲಿ ನಿಯಮಿತವಾದೊಂದು ಚಿತ್ರ ವಿಭಾಗದಲ್ಲಿ ನಟಿಸಲಿಕ್ಕಿರುವ ಒಪ್ಪಂದ ಪತ್ರ ಚಿತ್ರದ

ಹೆಸರು— "ಮಾನವತಿ". ಗೌರಿಗೆ ಒಪ್ಪಿಸುವ ವಿಭಾಗವು ನಾಟ್ಯಭಾಗ; ಅದಕ್ಕೆ ಅವಳಿಗೆ ಸಿಕ್ಕುವ ಪ್ರತಿಫಲ ೫೦೦೦; ೫೦೦ ರೂ. ಅಡ್ವಾನ್ಸು. ಗೌರಿ, ಆ ಕೆಂಪು ಕಾಗದವನ್ನು ವರದನ ಕೈಗೆ ಕೊಡುತ್ತ— "ಬೇಡ ಅಣ್ಣಾ! ಅವಸರಪಡಿಸಿ ನನ್ನನ್ನು ಒತ್ತಾಯಿಸಬೇಡಿ. ಪುನರಾಲೋಚನೆ ಮಾಡಿ ತಿಳಿಸುತ್ತೇನೆ ಈ 'ಮಾನವತಿ' ಮುಗಿಯಲು ಎಷ್ಟು ಸಮಯ ಬೇಕಾದೀತು? ಅಷ್ಟರ ವರೆಗೂ ನಾನು ಇಲ್ಲಿಯೇ ಇರಬೇಕೆ? ಆ ಚಿತ್ರವು ಯುದ್ಧಸಹಾಯಕವಾದುದೆ? ಯುದ್ಧಕ್ಕೆ ಸಹಾಯ ಮಾಡುವಂತಹ ಚಿತ್ರ ಕಥೆಯಾಗಿದ್ದರೆ, ನಾನು ನನ್ನ ಪ್ರಾಣ ಹೋದರೂ ನಟಿಸಲಿಕ್ಕಿಲ್ಲ. ಇದು ನನ್ನ ಪ್ರತಿಜ್ಞೆ! ಮೊದಲು 'ಮಾನವತಿ' ಸ್ಕ್ರಿಪ್ಟನ್ನು ನನಗೆ ಕೊಡಿರಿ. ಆ ವೇಳೆ ನೋಡುವ"

ಅವಳು ಹೀಗೆಂದುದನ್ನು ಕೇಳಿ ವರದನಿಗೆ ಬಹಳ ಸಂತೋಷವಾಯಿತು. "ನೀನು ಒಳ್ಳೇ ಜಾಣೆಯಾಗಿರುವಿ ಗೌರಿ ಮಾನವತಿ ಎಂಬುದು ಸಾಮಾಜಿಕ ಚಿತ್ರ. ಯುದ್ಧಕ್ಕೂ ಅದಕ್ಕೂ ಯಾವ ಸಂಬಂಧವೂ ಇಲ್ಲ ನಿನಗೆ ಸ್ಕ್ರಿಪ್ಟನ್ನು ಕೊಡುವೆನು. ಓದಿ ನೋಡಿದರೆ ನಿನಗೇ ತಿಳಿದೀತು ಉತ್ತಮ ಕಲಾಪ್ರದರ್ಶನವೇ ಚಿತ್ರದ ಗುರಿಯಾಗಿದೆ. ಸರಿ. ಮತ್ತೇನೂ ಅಭ್ಯಂತರವಿಲ್ಲವಷ್ಟೆ?" ಎನ್ನುತ್ತಾ ಅವಳ ಕೈಯಿಂದ ಆ ಕಾಗದವನ್ನು ತೆಗೆದುಕೊಂಡನು.

"ಚಿತ್ರ ಮುಗಿಯುವವರೆಗೂ ನಾನಿಲ್ಲಿಯೇ ಇರಲಾರೆ. ಗಜವದನರಾಯರ ಮನೆಯಲ್ಲಿ ವಸಂತಿಯೊಂದಿಗೆ ಇರುತ್ತೇನೆ........"

"ಏಕೆ? ಇಲ್ಲಿಯೇ ಇದ್ದರೇನು? ಅಲ್ಲಿದ್ದರೆ ನೀನು ಸಿನಿಮಾದಲ್ಲಿ ನಟಿಸಲಿಕ್ಕೆ ತೊಡಗಿರುವ ಸುದ್ದಿ, ನಿನ್ನ ಊರಿನವರಿಗೂ ಡಾಣಾಡಂಗುರವಾಗಿ ಹೋಗುತ್ತದೆ. ಅದರಿಂದ ನಿನ್ನ ಮನಸ್ಸಿಗೆ ನೋವಾಗುವ ಸಮಾಚಾರಗಳು ನಿನಗೆ ಕೇಳಿಸೀತು! ಹಾಗಾಗುವುದು ಒಳ್ಳೆಯದೇ? ನಿನ್ನ ನಟನವು ಜನ ಮೆಚ್ಚುಗೆಗೆ ಗುರಿಯಾದಮೇಲೆ, ನೀನು ಬಹಿರಂಗಳಾದರೆ, ಅದು ಒಳ್ಳೆಯದಲ್ಲವೆ? ಇಲ್ಲಿ ನೀನು ಯಾವ ತೊಂದರೆಯೂ ಇಲ್ಲದೆ, ನೆಮ್ಮದಿಯಾಗಿ ಇರಬಹುದು ಗೌರಿ."

ಪುನಃ ಗೌರಿಗೆ ಏನು ಹೇಳಬೇಕೆಂದು ತೋರಲಿಲ್ಲ. ವರದನ ಮಾತೇನೋ ಸಮಂಜಸವೇ ಆಗಿತ್ತು. ಆದರೆ ಅವಳು ಸಿನಿಮಾದಲ್ಲಿ

ನಟಿಸಲು ಇನ್ನೂ ಒಪ್ಪಿಲ್ಲವಷ್ಟೆ? ಗೌರಿ ತುಸು ತಡೆದು— "ನೀವು ಹೇಳು ವುದು ನೋಡಿದರೆ, ನಾನು ನಿಮ್ಮ ಕೋರಿಕೆಗೆ ಒಪ್ಪಿಯೇ ಬಿಟ್ಟೆನೆಂದು ನೀವು ನಂಬಿರುವ ಹಾಗಿದೆಯಲ್ಲ!'' ಎಂದಳು.

''ನಂಬಿಯೇ ಇದ್ದೇನೆ! ಹಾಗೇನಾದರೂ ನೀನು ನನ್ನ ನಂಬುಗೆಗೆ ಇಂಬೇ ಇಲ್ಲದಂತೆ ಮಾಡುವುದಾದರೆ. ನಾನು ನಿನ್ನ ವಿಷಯದಲ್ಲಿ ತುಂಬಾ ಕಠಿನನಾಗಲೂ ಬೇಕಾದೀತು!''

''ಹಾ! ಅಷ್ಟರವರೆಗೂ ಇದ್ದೀರಾ?''

''ಹಂಪೆಯಿಂದ ಇಲ್ಲಿಯವರೆಗೂ ನಡೆದ ನನ್ನ ಸಾಧನೆಯನ್ನು ಸ್ವಲ್ಪ ಯೋಚಿಸಿ ನೋಡು. ಆಗ ನನ್ನ ನಂಬುಗೆ ಎಷ್ಟರವರೆಗಿದೆ ಯೆಂದು ನಿನಗೇ ತಿಳಿದೀತು ! ಯೋಚನೆ ಮಾಡಿಯೇ ಹೇಳು ಗೌರಿ. ಇಂದು ಸಂಜೆಗೆ ನಿನ್ನನ್ನು ಸ್ಟೂಡಿಯೋ ಕಂಪೌಂಡಿನೊಳಗೆಲ್ಲ ಸುತ್ತಾಡಿ ಸಲು ಕರೆದೊಯ್ಯುತ್ತೇನೆ. ನಿನ್ನಂತಹ ಕಲಾವಿದೆಗೆ ಉಲ್ಲಾಸದಾಯಕ ವಾದ ಸ್ಥಳವಾಗಿದೆ ಇದು!" ಎಂದೆಂದು ವರದನು ಎದ್ದು ಮಾಳಿಗೆ ಯಿಂದಿಳಿದು ಹೋದನು.

ಗೌರಿಯ ಮುಖವು ಮೌನದಿಂದ ಬಾಡಿ ಮೊಗ್ಗೆಯಾಗಿತ್ತು

## ೩೦

ಯೋಚನೆ ಮಾಡುತ್ತಿದ್ದಳು ಗೌರಿ. ವರದನು ಇದ್ದುದಿದ್ದ ಹಾಗೆಯೇ ಹಸಿಹಸಿಯಾಗಿ ಹೇಗೆ ಹೇಳಿಬಿಟ್ಟ ! ಹಂಪೆಯಿಂದ ಇಲ್ಲಿಯ ವರೆಗೂ ನಡೆದ ಅವನ ಸಾಧನೆಯಂತೆ ! ಅಬ್ಬಾ ! ಒಪ್ಪಿಕೊಳ್ಳದಿದ್ದರೆ ನಿಜವಾಗಿಯೂ ಅವನು ಬಿಡಲಿಕ್ಕಿಲ್ಲ. ತಪ್ಪಿಸಿಕೊಂಡು ಹೋಗಲಿಕ್ಕೂ, ಉಪಾಯವಿಲ್ಲದ ಸ್ಥಳವದು. ಮುಖದ್ವಾರದಲ್ಲಿ ನಿಂತಿರುವ ಆ ಘೂರ್ಕಾ ಸಿಪಾಯಿಗಳನ್ನು ನೆನೆದರೆ ಭಯವಾಗುತ್ತಿತ್ತು. ವರದನು ಕೇಳುವಂತೆ ಒಮ್ಮೆ ಸಿನೆಮಾದಲ್ಲಿ ನಟಿಸಿದರೆ ಏನು ಕೆಟ್ಟು ಹೋದೀತು ? ಇದನ್ನು ಅವಳೊಬ್ಬಳೇ ಹೇಗೆ ತೀರ್ಮಾನಿಸಿಯಾಳು ? ಅವಳ ಭಾವೀ ಪತಿ ಗೋಪಾಲನು ಬೇಸರಿಸಲಾರನೆ ? ಗೋಪಾಲನೊಬ್ಬ ''ನೀನು ನಟಿಸು" ಎಂದರೆ ಅವಳು ನಟಿಸುತ್ತಿದ್ದಳು. ಗೋಪಾಲನ ಉತ್ತರವನ್ನು ತರಿಸಿ

ಕೊಳ್ಳುವುದು ಹೇಗೆ? ಗೋಪಾಲನಿಗೆ ಪತ್ರ ಬರೆಯಬಹುದು ಅವನು ಹೇಳಿದ ಅದೊಂದು ವಿಳಾಸವು ಅವಳಿಗೆ ನೆನಪಿದೆ. ಅವನಿಗೆ ಪತ್ರವನ್ನು ಬರೆಯುವುದು ಹೇಗೆ? ಒಂದು ತುಂಟು ಕಾಗದ ಪೆನ್ಸಿಲು ಬೇಕಾದರೂ ವರದನನ್ನೇ ಕೇಳಬೇಕು. ಅಥವಾ ಶೆಲ್ಲಂ—ಯಾರಾದರೂ ಸಹಕರಿಸಿದರೆ ಸಿಕ್ಕೀತು. ಕಾಗದ ಬರೆದರೂ ಟಪ್ಪಾಲಿಗೆ ಹಾಕುವುದು ಹೇಗೆ? ಶೆಲ್ಲಂ—ವೆಂಕೂ ಮುಂತಾದ ಆಳುಗಳ ಮೇಲೆ ಅವಳಿಗೆ ನಂಬುಗೆಯಿರಲಿಲ್ಲ

ಶೀನಣ್ಣನು ಎಲ್ಲಿದ್ದಾನೊ! ಅವನ ವಿಳಾಸವೂ ಅವಳಿಗೆ ಗೊತ್ತಿಲ್ಲ. ಇನ್ನು ಕೃಷ್ಣ ಕೃಷ್ಣನಿಗೂ ಅವಳು ತನ್ನ ಸ್ಥಿತಿಗತಿಗಳನ್ನು ತಿಳಿಸಿ ಪತ್ರ ಬರೆಯಬಹುದು. ಅವನ ಮಾತು ಮೀರಿ ಬಂದ ಗೌರಿಯ ಮೇಲೆ ಕೃಷ್ಣನಿಗೆ ತುಂಬ ಸಿಟ್ಟು ಬಂದೀತು. ಆ ಸಿಟ್ಟು ಸಾಧು ಶೀನಣ್ಣನ ಮೇಲೆ ತಿರುಗೀತು. ಆದುದರಿಂದ ಕೃಷ್ಣನಿಗೆ ಪತ್ರ ಬರೆಯಲೇ ಬಾರದು. ಆದರೆ ಇದೆಲ್ಲಾ ಬರೀ ಯೋಚನೆಯೆ! ಅನ್ಯರ ವಠಾರದೊಳಗೆ ಸಿಕ್ಕಿಬಿದ್ದ ದನವು ಅಲ್ಲಿಂದ ತಪ್ಪಿಸಿಕೊಳ್ಳಲು ದಾರಿ ಕಾಣದೆ ಆ ವಠಾರದ ಆವರಣದ ಸುತ್ತೂ ಅಲೆದಾಡುತ್ತಿರುವಂತೆ, ಅವಳ ಮನಸ್ಸು ಅಲೆದಾಡುತ್ತಿತು.

ಸ್ವಲ್ಪ ಹೊತ್ತಿನ ಮೇಲೆ ವರದನು ಫಿಲಿಂ ಕಥೆಯ 'ಸ್ಕ್ರಿಪ್ಟ'ನ್ನು ತಂದು ಅವಳಿಗೆ ಕೊಟ್ಟು— "ಇಗೋ ಕಥೆಯ ಸ್ಕ್ರಿಪ್ಟು ಓದಿ ನೋಡು. ಇಂದು ಸಂಜೆಗೆ ನಿನಗೆ ಸ್ಟುಡಿಯೋ ಸಂದರ್ಶನ ಮಾಡಿಸುವೆನು. ಸಿದ್ಧಳಾಗಿರುವಿಯಷ್ಟೆ?" ಎಂದನು.

"ಬೇಡ. ನನಗೇನೂ ನೋಡುವ ಕುತೂಹಲವಿಲ್ಲ"

"ಇಲ್ಲವೆಂದರೆ ಹೇಗೆ? ಫಿಲಿಂನಲ್ಲಿ ನಟಿಸಲು ಉತ್ಸಾಹವು ಬರಬೇಕಾದರೆ ಅಗತ್ಯವಾಗಿ ನೋಡಬೇಕು."

"ಅದಿರಲಿ ನಾನೆರಡು ಪತ್ರಗಳನ್ನು ಬರೆಯಬೇಕಾಗಿದೆ. ಟಪ್ಪಾಲಿಗೆ ಸೇರಿಸುವಿರಾ?'' ಎಂದು ಕೇಳಿದಳು.

"ಪತ್ರಗಳೆ? ಯಾರಿಗೆ?"

"ಊರಲ್ಲಿ ನನಗೊಬ್ಬ ಅಣ್ಣನಿದ್ದಾನೆ. ಅವನಿಗೆ"— ಗೌರಿ ಸುಳ್ಳು ಹೇಳಿದಳು.

"ನಾನು ಮೊದಲು ಅಷ್ಟು ಹೊತ್ತು ಹೇಳಿದ್ದೂ, "ಫೋರ್ಕಲ್ಲ ಮೇಲೆ ಮಳೆಗರೆದರಾಕಲ್ಲು—" ಎಂಬ ಹಾಗಾಯಿತಲ್ಲ! ಕೂಡದು, ಗೌರೀ! ಯಾರಿಗೂ ಪತ್ರ ಬರೆಯಲಿಕ್ಕೆ ಕೂಡದು!" ಎಂದಂದು ವರದನು ಹೊರಟುಹೋದನು.

ಮಧ್ಯಾಹ್ನದ ಊಟವು ಬಂದಿತು ಅಡುಗೇ ಅಯ್ಯರು ಪಕ್ಕದ ಕೋಣೆಯಲ್ಲಿ ಊಟದ ಪದಾರ್ಥಗಳನ್ನೆಲ್ಲ ಇಟ್ಟು ಹೊರಟುಹೋದನು. ಗೌರಿ ತಾನೇ ಬಡಿಸಿಕೊಂಡು ಉಣ್ಣುವೆನೆಂದುದರಿಂದ, ಈ ಏರ್ಪಾಡಾಗಿತ್ತು. ಅವಳ ಊಟ ಮುಗಿದು, ಸ್ವಲ್ಪಹೊತ್ತಿನಮೇಲೆ ಪುನಃ ವರದನು, ಆ ಕೆಂಪು ಕಾಗದದೊಂದಿಗೆ ಅವಳ ಕೋಣೆಗೆ ಬಂದು,— "ಸ್ಕ್ರಿಪ್ಟ ಓದಿ ನೋಡಿದಿಯಷ್ಟೆ? ಇನ್ನು ಈ ಕಾಗದಕ್ಕೆ ನಿನ್ನ ರುಜು ಮಾಡಲು ಅಭ್ಯಂತರವಿಲ್ಲವಷ್ಟೆ? ಇದನ್ನು ಇಂದೇ ನಾನು ಪ್ರೊಪ್ರೈಟರ ಕಡೆಗೆ ಕಳಿಸಬೇಕಾಗಿದೆ ನೀನು ಇಂದೇ ಸಹಿ ಹಾಕಿ ಒಪ್ಪಿಗೆ ಕೊಟ್ಟುಬಿಟ್ಟರೆ ಇನ್ನೊಂದು ವಾರದೊಳಗೆ ಷೂಟಿಂಗು ಪ್ರಾರಂಭವಾಗುತ್ತದೆ. ಸುಮಾರು ಮೂರು ತಿಂಗಳೊಳಗೆ ಫಿಲಿಂ ಮುಗಿದು, ನಿನಗೆ ಎಲ್ಲಿಗೆ ಬೇಕಾದರೂ ಹೋಗಬಹುದು."

"ನಾನು ಇಲ್ಲಿಯೇ ಇದ್ದು ನಟಿಸಲಾರೆ. ನನ್ನನ್ನು ಗಜವದನರಾಯರಲ್ಲಿರುವ ವಸಂತಿಯ ಜತೆಗೆ ಬಿಡಿರಿ ಅಂದರೆ ನಾನು ಇಲ್ಲಿಗೆ ಬಂದು ನಟನೆಕೊಟ್ಟು ಹೋಗುತ್ತೇನೆ."

"ನಿನ್ನನ್ನು ಹೊರಗೆ ಬಿಟ್ಟರೆ, ನೀನು ತಪ್ಪಿಸಿಕೊಂಡರೆ ನಾನೇನು ಮಾಡಲಿ?"

"ನಿಮ್ಮ ಒಪ್ಪಂದ ಪತ್ರಕ್ಕೆ ದಸ್ಕತ್ತು ಹಾಕಿಯೇ ನಾನು ಹೋಗುತ್ತೇನೆ. ಆಗ ನಾನು ತಪ್ಪಿಸಿಕೊಳ್ಳಲಿಕ್ಕೆ ಆಗುತ್ತೆಯೆ?"

ವರದನು ಒಂದು ನಿಮಿಷ ಯೋಚಿಸಿ,— "ಹಾಗಾದರೆ ಆಗಬಹುದು. ಸರಿ ದಸ್ಕತ್ತು ಹಾಕಿ ಬಿಡು. ಇಂದು ಸಂಜೆಗೇ ನಿನ್ನನ್ನು ಗಜವದನರಾಯರಲ್ಲಿ ಬಿಟ್ಟುಬರುವೆನು."

"ಒಳ್ಳೇದಣ್ಣ. ಆದರೆ ಅಲ್ಲಿಗೆ ಹೋದಮೇಲೆ ಇದರಲ್ಲಿ ದಸ್ಕತ್ತು ಹಾಕಿದರೆ ಸಾಲದೆ?"

"ನನ್ನ ಮೇಲೆ ನಂಬುಗೆಯೇ ಇಲ್ಲವೆ? ಇದನ್ನು ಈಗಲೇ ಕಳು ಹಿಸಬೇಕೆಂದೆನಲ್ಲಾ!"

"ಕೋಪಿಸಬೇಡಿ ಅಣ್ಣಾ! ಹಾಕುತ್ತೇನೆ. ನಾನು ಭಯಶೀಲೆ ಯಾದ ಅಬಲೆ! ಇದೆಲ್ಲಾ ನನಗೆ ತೀರ ಹೊಸತು ಅಣ್ಣಾ! ಫಿಲಿಂ ಸ್ಟುಡಿಯೋದಲ್ಲಿ ಹೆಂಗುಸರಿಗೆ ಮೇಕಪ್ ಮಾಡಲಿಕ್ಕೆ ಗಂಡುಸರೇ ಇರುವರೆಂದು ಕೇಳಿದ್ದೇನೆ. ಹಾಗೆ ನನ್ನಿಂದ ಮೇಕಪ್ ಮಾಡಿಸಿಕೊಳ್ಳ ಲಿಕ್ಕೆ ಆಗದು."

"ಅದನ್ನು ನಾನು ನೋಡಿಕೊಳ್ಳುವೆನು. ನಮ್ಮ ಕಂಪೆನಿಯಲ್ಲಿ ಅದಕ್ಕೆ ತರಬೇತಾದ ಹೆಂಗುಸರೇ ಇದ್ದಾರೆ ಏನೂ ಚಿಂತಿಬೇಡ—"

ವರದನು ನೀಡಿದ ಪತ್ರದಲ್ಲಿ ಗೌರಿ ದಸ್ಕತ್ತನ್ನು ಹಾಕಿದಳು. ವರದನು ಮುಗುಳು ನಗುತ್ತ ಆ ಪತ್ರವನ್ನು ಪಡೆದುಕೊಂಡು,—— "ತುಂಬಾ ಥ್ಯಾಂಕ್ಸ್ ಗೌರಿ!" ಎಂದನು.

"ಇಂದು ಸಂಜೆಗೆ ನನ್ನನ್ನು ಕರೆದೊಯ್ಯುವಿರಷ್ಟೆ?"

"ಅಗತ್ಯವಾಗಿ ಗಜವದನರಾಯರ ಮನೆ ತಿರುವಲ್ಲಿಕ್ಕೇಣಿಯಲ್ಲಿದೆ ಯೆಂದೆಯಲ್ಲವೆ? ಇಂದು ನಾನು ಹೋಗಿ ಅವರ ಮನೆಯನ್ನು ಕಂಡು ಹಿಡಿದು ಬರುತ್ತೇನೆ." ಎಂದನು

ಇದು ಗೌರಿಗೆ ಸದ್ಯಕ್ಕೆ ಸಮಾಧಾನಕಾರಿಯಾಯಿತು. ಆದರೆ ಸಂಜೆಯಲ್ಲಿ ಮತ್ತೆ ಅವಳ ಬಳಿಗೆ ಬಂದ ವರದನು— "ತಿರುವಲ್ಲಿಕೇಣಿ ಯಲ್ಲೆಲ್ಲಾ ಸುತ್ತಾಡಿದೆ ಅವರ ಮನೆಯೇ ಸಿಕ್ಕಲಿಲ್ಲ." ಎಂದು ಹೇಳಿದ್ದು ಕೇಳಿ, ಗೌರಿ ಮತ್ತೆ ವ್ಯಸನಕ್ಕೀಡಾದಳು

ತಟ್ಟನೆ ಅವಳಿಗೊಂದು ಯೋಚನೆ ಹೊಳೆಯಿತು

"ಅವರ ಮನೆಯಲ್ಲಿ ಟೆಲಿಫೋನ್ ಇದ್ದೀತು. ಟೆಲಿಫೋನ್ ಡೈರೆಕ್ಟರಿ ಯಲ್ಲಿ ಅವರ ವಿಳಾಸವಿದ್ದೀತು. ಈ ಕಂಪೆನಿಯಲ್ಲಿ ಟೆಲಿಫೋನ್ ಇಲ್ಲವೆ?" ಎಂದು ಕೇಳಿದಳು.

"ಇದೆ. ಅದನ್ನೂ ನೋಡಿದೆನು. ಅವರ ಹೆಸರೇ ಟೆಲಿಫೋನ್ ಡೈರಕ್ಟರಿಯಲ್ಲಿಲ್ಲ!"

"ಎಲ್ಲಿ? ಆ ಡೈರೆಕ್ಟರಿಯನ್ನು ಇಲ್ಲಿಗೆ ತನ್ನಿರಿ. ನಾನೇ ಹುಡುಕಿ ನೋಡುತ್ತೇನೆ."

"ಏಕೆ? ಇಷ್ಟು ಹೇಳಿದ್ದರೂ ನಿನಗೆ ನನ್ನ ಮೇಲೆ ಎಳ್ಳಷ್ಟೂ ನಂಬುಗೆಯಿಲ್ಲವೆ? ನಾನೇನು ಕಳ್ಳನೆ? ಸುಳ್ಳನೆ? ಹಾಗಾದರೆ ನನ್ನ ಮೇಲೆ ನಿನಗೆ ನಂಬುಗೆಯಿರುವುದೆಂಬ ಖಾಚಿತ್ಯವು ನನಗಾಗುವವರೆಗೆ ನಿನ್ನನ್ನು ಎಲ್ಲಿಗೂ ಹೋಗಬಿಡುವುದಿಲ್ಲ ನೀನೇನು ಮಾಡುವಿಯೋ ಮಾಡು!"—ವರದನ ಸ್ವರವು ಏರೇರಿಕೊಂಡು ಬರುವುದನ್ನು ನೋಡಿ ಗೌರಿ ಹೆದರಿದಳು

ಕೂಡಲೇ ವರದನು ಸೌಮ್ಯವಾಗಿ - "ಹೆದರಬೇಡ ಗೌರಿ ನಾನು ಹೇಳಿದಂತೆ ಕೇಳು ನಿನಗೆ ಒಳ್ಳೆಯದೇ ಆಗುತ್ತದೆ ಇಲ್ಲಿ ಗಂಡಸರ ಮಧ್ಯದಲ್ಲಿರುವೆನೆಂದು ಅಳುಕಬೇಡ ಇಲ್ಲಿ ಬೇಕಾದಷ್ಟು ಹೆಂಗಸರೂ ಇದ್ದಾರೆ. ಅವರ ಜತೆಯಲ್ಲಿ ನೀನು ಬೇಕಾದ ಹಾಗೆ ಮಾತಾಡಬಹುದು. ಈ ಕಂಪೌಂಡಿನೊಳಗೆ ಬೇಕಾದ ಹಾಗೆ ತಿರುಗಾಡಬಹುದು ನೀನು ಮದರಾಸಿನ 'ಬೀಚ್' ನೋಡಿರುವಿಯಾ? ಇಂದು ಅಲ್ಲಿಗೆ ಹೋಗೋಣ ಆದರೆ, ಗೌರಿ! ನೀನು ಜನರಿಗೆಲ್ಲ ಕೆಟ್ಟ ಸಂದೇಹ ಬರುವ ರೀತಿಯಲ್ಲಿ ನಡೆದುಕೊಳ್ಳಬಾರದು. ನಿನ್ನನ್ನು ಮಿಲಿಟ್ರೀಯವರ ಕೈಯಿಂದ ನಾನು ಬಿಡಿಸಿಕೊಂಡು ಬಂದುದು. ಇಲ್ಲಿ ಎಲ್ಲರಿಗೂ ಗೊತ್ತಿದೆ. ನಿನಗೆ ಒಳ್ಳೆಯ ನೃತ್ಯ, ಸಂಗೀತಗಳು ಬರುತ್ತವೆಂದು ಎಲ್ಲರಿಗೂ ಗೊತ್ತಿದೆ. ಅದಕ್ಕಾಗಿಯೇ ನಿನ್ನನ್ನು ನಾನು ಇಲ್ಲಿ ಇರಿಸಿಕೊಂಡಿರುವೆನೆಂದು ಎಲ್ಲರೂ ತಿಳಿದಿದ್ದಾರೆ ನಾನೂ ಒಳ್ಳೆಯ ನಾಟ್ಯಗಾರನೆಂದು ಹೆಸರು ಪಡೆದಿದ್ದೇನೆ. ನನ್ನ ಜತೆಯಲ್ಲಿ ನಾಟ್ಯವಾಡಲು ತಕ್ಕ ಜತೆಗಾತಿ ಯಾರೂ ಇಲ್ಲ! ಈ ಕೊರತೆ ನಿನ್ನಿಂದ ನಿವಾರಣೆಯಾಗುವಂತಾಯಿತು!"

ಗೌರಿ ಬೆಚ್ಚಿಬಿದ್ದು-- "ಅಯ್ಯೋ! ನಾನೊಲ್ಲೆ! ನಿಮ್ಮೊಂದಿಗೆ ನಾನು ಆಡಲಾರೆ!"

ವರದನು ನಗುತ್ತ— "ಆಡಿದರೆ ತಪ್ಪೇನಮ್ಮ? ಪರಪುರುಷನೊಡನೆ ನಾಟ್ಯವಾಡಿದರೆ ಕಳಂಕವು ಅಂಟಿಕೊಳ್ಳುವುದೆಂದು ಗೊಡ್ಡುವಾದ ಮಾಡುವಿಯಾ? ನೀನಂತೂ ನನ್ನನ್ನು ಅಣ್ಣನೆಂದು ಭಾವಿಸುವುದಾಗಿ ಹೇಳಿದಿ. ಮತ್ತೇನಂಜಿಕೆ? ಮನಸ್ಸಿನಲ್ಲಿ ಮಾತ್ರ ಕಳಂಕವಿರದಿದ್ದರಾಯಿತು."

ಗೌರಿ ಸ್ವಲ್ಪ ತಡೆದು— 'ಆದರೂ ನೋಡಿದವರೆಲ್ಲ ಏನಂದಾರು? ನಾನೋ ಕನ್ಯೆ. ನಿಮ್ಮೊಡನೆ ನಾನು ನಾಟ್ಯವಾಡಿದರೆ ಜನರು ಏನೇನೋ ಕತೆ ಕಟ್ಟಿ ಆಡಿಕೊಂಡಾರು!"

"ಅಂದರೆ ಯಾರೂ ನಿನ್ನನ್ನು ವರಿಸಲಿಕ್ಕಿಲ್ಲವೆಂದು ಅಂಜಿಕೆಯೆ ? ಅಂತಹ ಕಲ್ಮಷ ಮನಸ್ಸಿನ ಮೂಢಾತ್ಮನನ್ನು ನೀನು ವರಿಸಿಕೊಳ್ಳುವುದೇ ಬೇಡ!" ಗೌರಿಯು ವ್ಯಂಗ್ಯವಾಗಿ ಮುಗುಳ್ನಕ್ಕಿತು ! ಅವಳ ಭಾವೀ ಪತಿಯಾದ ಗೋಪಾಲನನ್ನೆ ವರದನು ಮೂರ್ಖಮಾಡಿದ ಹಾಗಾಗಿತ್ತು !

ವರದನು ಮತ್ತೂ ಹೇಳಿದ— "ಗೌರಿ! ಮುಂದೆ ನಿನ್ನ ಪತಿಯಾಗಿ ಬರುವವನು ಖಂಡಿತವಾಗಿಯೂ ಅಷ್ಟು ಕೀಳು ಮನಸ್ಸಿನವನಾಗಿರಲಾರ. ನಿನ್ನ ಕಲಾವೈಭವಕ್ಕೆ ಅನುಗುಣನಾದವನೇ ನಿನ್ನ ಪತಿಯಾಗುವನೆಂದು ನಂಬು!"

ಇದನ್ನು ಕೇಳಿ ಗೌರಿಗೆ ಆನಂದವೂ ತುಂಬಿ ಬಂತು. ವರದ ನಂದುದು ಎಷ್ಟು ನಿಜ ! ಅವಳನ್ನೀಗ ಫಿಲಿಂ ಚಕ್ರವು ತನ್ನೊಂದಿಗೆ ಎಳೆದುಕೊಂಡೇ ಹೋಗಲಾರಂಭಿಸಿತ್ತು ಅವಳ ಸ್ವಂತ ಇಚ್ಛೆಯಿಂದಲ್ಲ ಈ ತನ್ನ ಪರಿಸ್ಥಿತಿಗಳನ್ನೆಲ್ಲ ಆ ಗೋಪಾಲನಿಗೆ ಹೇಳಿದರೆ ಅವನಿಗೆ ಗೊತ್ತಾಗಲಾರದೆ? ಗೊತ್ತಾಗದಿದ್ದರೆ ಅವನು ಮೂರ್ಖನಲ್ಲದೆ ಮತ್ತೇನು ? ದೇವರು ಬಿಟ್ಟ ಗತಿಯಾಗುವುದು.

ವರದನು ತುಸು ನಿಲ್ಲಿಸಿ ಮತ್ತೂ ಹೇಳಿದ— " ಅದೇನು ಗೌರಿ ! ಮದುವೆಗೆ ಬಹಳ ಆತುರಳಾಗಿರುವಿಯೇನು? ವರನೇನಾದರೂ ನಿಶ್ಚಯ ನಾಗಿದ್ದಾನೆಯೆ? ಅಥವಾ ಯಾರನ್ನಾದರೂ ಲವ್ ಮಾಡಿದ್ದೀಯಾ?"

ಗೌರಿಯ ಮುಖದಲ್ಲಿ ಸ್ತ್ರೀ ಸಹಜವಾದ ನಾಚುಗೆಯೊಂದು ಪಸರಿ ಸಿತು !

"ಸರಿ ಸರಿ! ಅದು ಹೇಗೂ ಇರಲೀಗ. ಶೆಲ್ಲಂಳನ್ನು ಕಳುಹಿಸು ತ್ತೇನೆ ಚೆಂದಾಗಿ ಡ್ರೆಸ್ ಮಾಡಿಕೊ ಈ ಸ್ಟೂಡಿಯೋವನ್ನೆಲ್ಲ ತಿರು ಗಾಡಿಸುತ್ತೇನೆ. ಹೆಂಗುಸರ ಪರಿಚಯವನ್ನೂ ನಿನಗೆ ಮಾಡಿಸುತ್ತೇನೆ. ನಿನಗೆ ಒಪ್ಪಿತಳಾಗಿರುವ ಕುಲೀನ ಕನ್ನಡ ನಟಿಯೊಬ್ಬಳೂ ಇಲ್ಲಿದ್ದಾಳೆ. ಸುಕುಮಾರಿ ಸುಧಾ—ಎಂದು ಕೇಳಿದ್ದೀಯಾ ? ಸಿನೆಮಾದಲ್ಲಿ ನೋಡಿ ದ್ದಿಯಾ?'' ಎಂದು ಕೇಳಿದನು ವರದ.

ಪ್ರಸಿದ್ಧ ನಟೀಮಣಿಯಾದ ಸುಕುಮಾರಿ ಸುಧಾಳನ್ನು ಸಿನಿಮಾ ಚಿತ್ರದಲ್ಲಿ ಗೌರಿ ನೋಡಿದ್ದಳು. ಕೇಳಿಯೂ ಇದ್ದಳು. ಉಜ್ವಲ ತಾರೆ ಯಾದ ಅವಳ ಪರಿಚಯವು ತನಗಾಗುವುದೆಂದು ತಿಳಿದು ಅವಳ ಹೃದ

ಯವು ಹರ್ಷದಿಂದ ಅರಳಿತು. ಅವಳು ತಲೆಯಾಡಿಸುತ್ತಾ ಎದ್ದಳು. ವರದನೂ ಎದ್ದನು. ಆಗ ಗೌರಿ ಇದ್ದಕ್ಕಿದ್ದಂತೆ:— "ಅಣ್ಣ! ನಾನು ನಿಶ್ಚಯ ಮಾಡಿಬಿಟ್ಟೆ! ಮೂರು ತಿಂಗಳು ಇಲ್ಲಿಯೇ ಅಜ್ಞಾತವಾಸ ಮಾಡುತ್ತೇನೆ. ನೀವು ಹೇಳುವ ಹಾಗೆ ಕೇಳುತ್ತೇನೆ. ನನ್ನನ್ನು ನಿಮ್ಮ ಒಡಹುಟ್ಟಿದ ತಂಗಿಯಂತೆ ಕಾಪಾಡುವ ಭಾರ ನಿಮ್ಮದು!" ಎಂದು ವರದನ ಕಾಲಿಗೆ ಬಿದ್ದಳು.

ವರದನು ನಗುತ್ತ— "ಅರರೆ! ಇದೇನು? ಥಕ್ಕನೆ ಭಾವಾವೇಷ ಬಂದ ಹಾಗಿದೆ! ಹಾಗೆಯೇ ಆಗಲಮ್ಮ. ಸಿದ್ಧಳಾಗುವಿಯಷ್ಟೆ?" ಎಂದು ವರದನು "ಶೆಲ್ಲಂ! ಶೆಲ್ಲಂ" ಎಂದು ಕರೆಯುತ್ತ, ಮಾಳಿಗೆಯಿಂದಿಳಿದನು

## ೩೧

ಶೆಲ್ಲಂ ಬಂದಳು. ಗೌರಿಗೆ ತಲೆ ಬಾಚಿ ಹೂ ಮುಡಿಸಿ ಸಿಂಗಾರ ಮಾಡಿದಳು ರೋಜಾ ಹೂಗಳಿಂದ ರಂಜಿಸುವ ವಾಯಿಲ್ ಸೀರೆಯನ್ನು ಉಡಲಿತ್ತಳು; ಚಲೋದಾದೊಂದು ಜಾಕೇಟನ್ನು ತೊಡಲಿತ್ತಳು. ಗೌರಿ ಈಗ ಚಲಿಸುವೊಂದು ಕಲಾಕೃತಿಯ ಶಿಲಾಮೂರ್ತಿಯಂತೆ ಕಾಣಿಸಿದಳು.

ವರದನೂ ಸಿಲ್ಕುಜಬ್ಬಾ, ಮಲ್ಲು ಬಟ್ಟೆಗಳಿಂದ, ಸೆಂಟು ಪೌಡ್ರುಗಳ ವಾಸನೆಯೊಂದಿಗೆ ಅವಳೆದಿರಿಗೆ ನೋಟಕೊಟ್ಟನು.

ಗೌರಿ ಧೈರ್ಯದಿಂದ ಅವನೊಂದಿಗೆ ಹೊರಟಳು ವರದನು ಅವಳನ್ನು ಆ ಸ್ಟೂಡಿಯೋ ಮಂದಿರಗಳೊಳಗೂ, ತೋಟಗಳೊಳಗೂ, ತಿರುಗಾಡಿಸುತ್ತ, ಅದು ಅಂತಹುದು, ಇದು ಇಂತಹುದು, ಎಂದು, ನಾಗರಿಕ ಇಂಗ್ಲೀಷು ಕನ್ನಡವೆಂಬ ಬೆರಕೆ ಮಾತಿನಿಂದ ವಿವರಿಸುತ್ತ ತೋರಿಸಿದನು. ಗೌರಿಯೂ ಅದೇ ಬೆರಕೆ ಮಾತಿನಲ್ಲಿ ಉತ್ಸಾಹದಿಂದ ಮಾತಾಡುತ್ತಿದ್ದಳು.

ಆ ಮಹಾ ಕಂಪೌಂಡಿನಲ್ಲಿ ಅಲ್ಲಲ್ಲಿ ಅನೇಕ ಬೇರೆ ಬೇರೆ ಬಿಡದಿಗಳಿದ್ದುವು. ಅವುಗಳಲ್ಲಿ ಬೇರೆ ಬೇರೆ ಫಿಲಿಂ ಉದ್ಯೋಗಿಗಳೂ, ನಟ-ನಟಿಯರೂ ತಂಗಿಕೊಂಡಿದ್ದರು. ಒಂದು ಕಡೆ ಬೇರೆ ಫಿಲಿಂ ಕಂಪೆನಿಯವರು, ಈ ಅದ್ಭುತವಾದ ಸ್ಟೂಡಿಯೋದಲ್ಲಿ 'ಶೂಟಿಂಗ್' ಮಾಡುತ್ತಿದ್ದರು. ಆ ಫೋಟೋಗ್ರಾಫೀ ಬೃಹತ್ ಮಿಶ್ಯನ್‌ಗಳು, ಗುಂಡುಗುಂಡಾಗಿ ನಿಂತಿರುವ ಸೌಂಡ್‌ಬಾಕ್ಸ್‌ಗಳು, ದೊಡ್ಡ ಕಲಾವಿದರು ಬರೆದಿಟ್ಟ, ಅದ್ಭುತ ತದ್ರೂಪ ಚಿತ್ರಗಳು, ಕೃತ್ರಿಮವಾದ ಗುಡ್ಡಗಳು, ಬೆಟ್ಟಗಳು, ನದಿಗಳು, ಕೊಳಗಳು, ಭೂತಗನ್ನಡಿಗಳು, ಮುಂತಾದ ವಿಶೇಷ ದೃಶ್ಯಗಳನ್ನೆಲ್ಲ ನೋಡಿ ಗೌರಿ ಬೆರಗಾದಳು.

ಅಲ್ಲಿರುವ ಸಂಗೀತ ಸಾಧನದ ಮೇಳವಾದ್ಯಗಳಾದರೂ ಅದೆಷ್ಟು ವಿಧ! ನೋಡಿದರೇ ಭಯವಾಗುವಂತಹ ಅದ್ಭುತಾಕೃತಿಯ ವಾದ್ಯಗಳು ಅಲ್ಲಿದ್ದುವು ವರದನು ಅವುಗಳ ಹೆಸರುಗಳನ್ನು ಹೇಳಿ ಅವಳನ್ನು ಇನ್ನಷ್ಟು ಬೆರಗುವಡೆಸಿದನು.

ಅಲ್ಲಿರುವ ಸಣ್ಣಸಣ್ಣ ಉಪವನಗಳಿಗೆಲ್ಲಾ ರಾಣಿಯಾಗಿರುವಂತೆ, ದೊಡ್ಡದೊಂದು ಸುಂದರೋಪಸುಂದರವಾದ ಉದ್ಯಾನವು ಕಂಗೊಳಿಸುತ್ತಿತ್ತು. ಅಲ್ಲಿರುವ ನಾನಾ ಜಾತಿಯ ಸುಂದರ ಗಿಡ ಮರ ಬಳ್ಳಿಗಳು ಸುಚಿತ್ರಾಕಾರವಾಗಿ ಕಣ್ಣಿಗೆಸೆಯುತ್ತಿದ್ದುವು ಅದರ ಹಿಂದೆ ಹಿಮುಮುಸುಕಿದ ಪರ್ವತ ಸಾಲಿನಂತೆ ಗೋಚರಿಸುವುದು ಕೃತಕವೆಂದು ವರದನಂದ! ಏನಾಶ್ಚರ್ಯ! ತದ್ರೂಪ ಪರ್ವತವೇ!

ಆ ಉದ್ಯಾನದ ನಟ್ಟನಡುವಿನಲ್ಲಿ ಒಂದು ರಂಗಸ್ಥಳದಂತಹ ಬಯಲೂ ಇತ್ತು. ವರದನು ಆ ಸ್ಥಳವನ್ನು ಗೌರಿಗೆ ತೋರಿಸುತ್ತ—"ನೋಡಿದಿಯಾ! ಈ ಸ್ಥಳದಲ್ಲಿಯೇ ನಮ್ಮ ನಟನಾಭಿನಯಗಳಾಗಬೇಕು." ಎಂದನು.

ಸಿನಿಮಾಭ್ರದಲ್ಲಿ ಶುಕ್ರತಾರೆಯಾಗಿ ಬೆಳಗುತ್ತಿರುವ ಸುಕುಮಾರಿ ಸುಧಾ ಕನ್ನಡದವಳು. ಅವಳನ್ನು ಅಲ್ಲಿ—ನೋಡಿ ಗೌರಿಗೆ ತುಂಬಾ ಕೌತುಕವಾಯಿತು. ವರದನು ಗೌರಿಗೂ ಅವಳಿಗೂ ಪರಸ್ಪರ ಪರಿಚಯ ಮಾಡಿಸಿಟ್ಟನು ಕೊಂಚ ಮಾತ್ರ ಮಾತಿನಿಂದಲೇ ಸುಕುಮಾರಿ ಸುಧಾ ತುಂಬ ಒಳ್ಳೆಯವಳೆಂದು ಗೌರಿಗೆ ತೋರಿದಳು.

ಸುಧಾ ಕುಲೀನ ಸ್ತ್ರೀ. ಅವಳ ಪತಿ ಬೆಂಗಳೂರಿನಲ್ಲಿ ದೊಡ್ಡ ವಕೀಲರಾಗಿದ್ದರು ಆದರೂ ಸುಧಾ ಕಲಾರಾಧನೆ ಮಾಡುತ್ತಿದ್ದಾಳೆ! ಅದಕ್ಕೆ ಅವಳ ಪತಿಯ ಬೆಂಬಲವೂ ಇದೆ.

ಈ ವಿಷಯವಾಗಿ ಸುಧಾ ಹೇಳಿದ ಮಾತುಗಳು ಗೌರಿಗೆ ತುಂಬ ಪಥ್ಯಕರವಾದುವು: "ಕಲಾರಾಧನೆ ಎಂಬುದೊಂದು ಪುನೀತವಾದ ಸೇವೆ. ಆಗ ಪರಪುರುಷರೊಡನೆ ನಟಿಸಿದರೂ, ವ್ಯಕ್ತಿತ್ವಕ್ಕೆ ಏನೂ ಕಳಂಕವಿಲ್ಲ. ಸಣ್ಣ ಮಕ್ಕಳು ಗಂಡಹೆಂಡಿರಾಟವಾಡುವಂತೆ, ಹೃದಯ ಪರಿಶುದ್ಧತೆಯಿಂದ ನಟಿಸಬೇಕು. ಕೆಡುವುದೂ, ಕೆಡದಿರುವುದೂ ಅವರವರ ಕೈಯಲ್ಲಿದೆ; ಕಲೆಯಲ್ಲಿ ಅಲ್ಲ; ಕಲಾರಾಧನೆಯಲ್ಲಿಯೂ ಅಲ್ಲ"

ಮುಂದೆ ಒಂದೆರಡು ದಿನದೊಳಗೆ ಗೌರಿಗೂ ಸುಧಾಳಿಗೂ ಗಾಢ ಮೈತ್ರಿಯೇ ಬಳೆಯಿತು "ಮಾನವತಿ"ಯಲ್ಲಿ ಸುಕುಮಾರಿ ಸುಧಾಳೇ ಕಥಾನಾಯಕಿ ವರದನೇ ನಾಯಕ. ಅದರಲ್ಲಿ ಒಂದು ಜಮೀನುದಾರನ ಟೀ ಪಾರ್ಟಿ ಜರುಗುತ್ತದೆ ಆ ಸಮಯದಲ್ಲಿ ಒಂದು ನೃತ್ಯ. ಆ ನೃತ್ಯದಲ್ಲಿ ಕಥಾನಾಯಕನೂ ಭಾಗವಹಿಸುತ್ತಾನೆ ತಂಗಿ ರಾಧೆಯಾಗಿಯೂ, ಅಣ್ಣನು ಕೃಷ್ಣನಾಗಿಯೂ ನೃತ್ಯಮಾಡುತ್ತಾರೆ. ಕೃಷ್ಣರೂಪದ ನಾಯಕನನ್ನು ಅಲ್ಲಿ ಕಂಡು, ಜಮೀನುದಾರನ ಮಗಳು, ಕಥಾನಾಯಕಿ ಅವನನ್ನು ಪ್ರೇಮಿಸಲಾರಂಭಿಸುತ್ತಾಳೆ ..............." ಹೀಗೆಲ್ಲ ಆ ಚಿತ್ರಕಥೆ ಮುಂದೆ ಹೋಗುತ್ತಿತ್ತು. ಗೌರಿಯದು 'ಅಮೂಲ್ಯ ನರ್ತನ' ವಾದುದರಿಂದ, ಎರಡೇ ಎರಡು ಕಡೆಗಳಲ್ಲಿ ಮಾತ್ರವೇ, ಅವಳ ಪ್ರವೇಶವಿತ್ತು.

ಬರಲಿ! "ಮಾನವತಿ" ನಿರ್ವಿಘ್ನವಾಗಿ ಸಿದ್ಧವಾಗಿ ಬರಲಿ! ಬಿಳಿದೆರೆಯ ಮೇಲೆ ಬಂದಾಗ ನಾವು ಕುತೂಹಲದಿಂದ ನೋಡಬಹುದು!

ಸುಧಾಳೊಡನೆ ಸ್ನೇಹವಾದುದರಿಂದ ಗೌರಿಗೆ ಕಿಂಚಿತ್ ಸ್ವಾತಂತ್ರ್ಯವೂ ಸಿಕ್ಕಿದಂತಾಗಿತ್ತು. ಒಂದು ದಿನ ಸುಧಾಳೊಡನೆ ಉಪಾಯವಾಗಿ ಕೇಳಿ, ಒಂದು ಕಾಗದವನ್ನೂ ಪೆನ್ಸಿಲನ್ನೂ ಸಂಪಾದಿಸಿಕೊಂಡಳು. ಅದನ್ನು ಅಡಗಿಸಿಟ್ಟುಕೊಂಡು ರಾತ್ರಿಯಲ್ಲಿ ಒಬ್ಬಳೇ, ಮಾಳಿಗೆಯ ಕೋಣೆಯೊಳಗೆ ಮಲಗುವ ವೇಳೆಯಲ್ಲಿ ಗೋಪಾಲನಿಗೊಂದು ಪತ್ರವನ್ನು ಬರೆದಳು. ಹಾಗೆಯೇ ಸುಧಾಳನ್ನು ಬೇಡಿ ಒಂದು ಪೋಸ್ಟ್ ಕವರನ್ನೂ

ಪಡೆದುಕೊಂಡು, ವಿಳಾಸ ಬರೆದು ಸುಧಾಳ ಆಳಿನ ಕೈಯಲ್ಲಿಯೇ ಟಪ್ಪಾಲಿಗೆ ಕಳುಹಿಸಿಬಿಟ್ಟಳು.

ಇದು ವರದನಿಗೆ ಗೊತ್ತಾಗದಂತೆಯೇ ನಡೆದು ಹೋಯಿತು.

ಆ ಪತ್ರದಲ್ಲಿ ತನ್ನ ಸ್ಥಿತಿಯನ್ನು ಚೆನ್ನಾಗಿ ಚಿತ್ರಿಸಿ ಬರೆದಿದ್ದಳು. ಮಿಲಿಟರಿಯವರ ಕೈಗೆ ಸಿಕ್ಕಿಬಿದ್ದ ತನ್ನನ್ನು ೫೦೦ ರೂಪಾಯಿತೆತ್ತು ಮೊಂಟಿಸಿ ಕಾಪಾಡಿದ, ಡೈರೆಕ್ಟರ್ ವರದನ ಋಣವಿಮೋಚನೆಗಾಗಿ, ಅವನ ಕೋರಿಕೆಯಂತೆ. ಒಂದು ಫಿಲಿಂನಲ್ಲಿ ನಟಿಸಲು ಒಪ್ಪಬೇಕಾಯಿತೆಂದು ಅವನ ಹೃದಯಕ್ಕೆ ಮುಟ್ಟಿ ಅರ್ಥವಾಗುವಂತೆ ಬರೆದಿದ್ದಳು. ಅದರಲ್ಲಿ ವರದನ್ ತನ್ನನ್ನು ಒಡಹುಟ್ಟಿದ ತಂಗಿಯಂತೆ ಕಾಣುತ್ತಿರುವನೆಂದೂ, ಈಗ ತಯಾರಾಗುವ ಚಿತ್ರದಲ್ಲಿ ತನ್ನ ಭಾಗವು ಮುಗಿದ ಕೂಡಲೇ, ತನ್ನನ್ನು "ಮಹಿಳಾಭ್ಯುದಯ ಮಂಡಲಿ"ಗೆ ಕಳುಹಿಸುತ್ತಾನೆಂತಲೂ, ಹೀಗೆ ಅವನನ್ನು 'ಅಪದ್ಬಾಂಧವ'ನೆಂದು ಹೊಗಳಿ ಗೋಪಾಲನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವಾಗುವಂತೆಯೇ ಬರೆದಿದ್ದಳು

ಅದು ಯಾವಾಗ ಗೋಪಾಲನಿಗೆ ಸಿಕ್ಕುತ್ತದೋ, ಗೋಪಾಲನು ಎಲ್ಲಿದ್ದಾನೋ, ಅದೆಲ್ಲಾ ದೇವರ ಮೇಲೆ ಬಿಟ್ಟ ಭಾರವಾಗಿತ್ತು ಅವಳು ಅಷ್ಟೆಲ್ಲ ಬರೆದರೂ ತನ್ನ ವಿಳಾಸವನ್ನು ಮಾತ್ರ ಬರೆಯದೆ ಮರೆಸಿಟ್ಟುಕೊಂಡಿದ್ದಳು. ಗೋಪಾಲನ ಪ್ರತ್ಯುತ್ತರಕ್ಕಾಗಿ ಅವಳಿಗೆ ತುಂಬಾ ಹಾರೈಕೆ ಇದ್ದರೂ, ಅವನಿಂದೇನಾದರೂ ಕಾಗದವು ಬಂದರೆ, ಗೌರಿ ವರದನ ಕೋಪಕ್ಕೆ ತುತ್ತಾಗಬೇಕಾದೀತು. ಈ ಸ್ಥಳದಿಂದ ಪಾರಾದ ಮೇಲೆ ಬರೆಯುವ ಕಾಗದದಲ್ಲಿ, ಮೊದಲಿನ ಕಾಗದದಲ್ಲಿ ವಿಳಾಸ ಬರೆಯಲು ಮರೆತುಹೋಯಿತೆಂದು ತಪ್ಪಿಸಿಕೊಂಡರಾಯಿತು.

ವರದನು ಗೌರಿಯನ್ನು ಬಹಳ ಎಚ್ಚರಿಕೆಯಿಂದಲೇ ಕಾಪಾಡುತ್ತಿದ್ದನು. ಅವಳ ಮನೋಲ್ಲಾಸಕ್ಕಾಗಿ ಆಗಾಗ ಕನ್ನಡ—ಇಂಗ್ಲಿಷು ಪತ್ರಿಕೆಗಳನ್ನು ತಂದು ಕೊಡುತ್ತಿದ್ದನು. ಪತ್ರಿಕೆಯಲ್ಲಿ ಮುಖ್ಯವಾಗಿ ಗೌರಿ ಹುಡುಕುವುದು ಶೀನಣ್ಣ-ಗೋಪಾಲರ ಸುದ್ದಿಗಿದ್ದಿ ಅದರಲ್ಲಿದ್ದೀತೇ ಎಂದು, ನೋಡಿ ನಿರಾಶಳಾಗುತ್ತಿದ್ದಳು. "ದೇಶ ಸಂರಕ್ಷಣೆಯ ಕಾನೂನಿ

ಗನುಸಾರವಾಗಿ ಅವರನ್ನು ಕೈದು ಮಾಡಿದರು, ಇವರನ್ನು ಕೈದು ಮಾಡಿದರು," ಎಂದು ಪತ್ರಿಕೆಯ ತುಂಬ ಸುದ್ದಿ ಬರುತ್ತಿತ್ತು. ಉಳಿದುದೆಲ್ಲಾ ಜಾಪಾನ್ ಜರ್ಮನ್ ಯುದ್ಧದ ಸುದ್ದಿಗಳು. ಮಿತ್ರ ಪಕ್ಷದವರ 'ಗೆಲುವಿನ ಹಿಂದೋಟ'ದ ಸಮಾಚಾರಗಳು!............

ಶೀನಣ್ಣನು ಸಂದರ್ಭ ಬಂದರೆ ಪತ್ರ ಬರೆಯುತ್ತೇನೆಂದಿದ್ದಾನಲ್ಲವೆ? ಪರಂತು ಬರೆದಿದ್ದರೆ ಗಜವದನರಾಯರಲ್ಲಿಗೆ ಬರೆದಿದ್ದಾನು. ಬರೆದಿದ್ದರೆ ಗೌರಿಯ ಪ್ರತ್ಯುತ್ತರವನ್ನು ಕಾಣದೆ ಅವನೆಷ್ಟು ಕೊರಗುವನೋ ಏನೋ!

ಅತ್ತಿಗೆ ಸುಂದರಿ ವರದನಿಗೆ ಸ್ವಂತ ತಂಗಿಯಲ್ಲವೆ? ಆದರೂ ಅವಳು ವರದನೊಡನೆ ಮಾತಾಡಲಿಕ್ಕೆ ಕೂಡ ಬಂದಿಲ್ಲ. ಬಂದಿದ್ದರೂ ವರದನ ಇಚ್ಛೆ ಇಲ್ಲದೆ ಗೌರಿಗೆ ಏನು ತಾನೇ ಗೊತ್ತಾದೀತು?

ಎಲ್ಲಿಗಾದರೂ ಟೆಲಿಫೋನ್ ಮಾಡೋಣವೆಂದರೆ, ಆ ಸ್ಟುಡಿಯೋ ವಠಾರದೊಳಗಿರುವ ಟೆಲಿಫೋನ್ ಕಟ್ಟೆಯೊಳಗೆ ಹೋಗಲು ವರದನ ಅಪ್ಪಣೆಯ ಚೀಟಿ ಬೇಕಾಗಿತ್ತು.

ಆದುದರಿಂದ ಎಲ್ಲ ಚಿಂತೆಯನ್ನೂ ಬಿಟ್ಟು, ಅಲ್ಲಿಂದ ಬಿಡುಗಡೆಯಾಗುವ ಅವಧಿಯವರೆಗೆ ಹಲ್ಲು ಕಚ್ಚಿಕೊಂಡಿರುವುದೆಂದು ತೀರ್ಮಾನಿಸಿಬಿಟ್ಟಿದ್ದಳು ಗೌರಿ.

ಸ್ಟುಡಿಯೋದಲ್ಲ ಗೌರೀದೇವಿಯ ರಿಹರ್ಸಲ್‌ಗಳು ನಡೆದುವು. 'ಷೂಟಿಂಗು' ಪ್ರಾರಂಭವಾಯಿತು. ಗೌರಿ ಸ್ಟುಡಿಯೋದ ನರ್ತನೋದ್ಯಾನದಲ್ಲಿ, ಛಾಯಾಗ್ರಾಹೀ ಶಬ್ದಗ್ರಾಹೀ ಯಂತ್ರಗಳ ಇದಿರಿನಲ್ಲಿ, ಇಂಪಾದ ವಿವಿಧನಾದಗಳ ಹಿನ್ನೆಲೆಯ ಮೇಳ ತಾಳಗಳ ಮುಂದೆ ನರ್ತನ ಮಾಡಿದಳು.

ವರದನು ಕೃಷ್ಣನಾಗಿ ಅವಳ ಜತೆಯಲ್ಲಿ ನಾಟ್ಯಾಭಿನಯಗಳನ್ನು ಮಾಡಿದನು. ಆ ಇಬ್ಬರ ಅಭಿನಯ ಪಾಣಿಗಳೂ ಸರಿಜೋಡಿಯಾಗಿ ಮೇಳವಿಸಿಕೊಂಡುವು. ಆ ಸ್ಟುಡಿಯೋದ ಸಹೋದ್ಯೋಗಿಗಳು "ಆಹಾ! ಸರಿಯಾದ ಜತೆ! ಅದ್ಭುತ ನಾಟ್ಯ!" ಎಂದು ಉದ್ಗಾರಗರೆಯುವಂತೆ ಅವರ ನಾಟ್ಯಾಭಿನಯಗಳು ಫಿಲಿಂನಲ್ಲಿ ಸೇರಿದುವು

"ಮಾನವತಿ" ಚಿತ್ರದಲ್ಲಿ ಅವಳ ಭಾಗದ ಷೂಟಿಂಗು ಮುಗಿಯಿತು. ಇನ್ನೂ ಹಲವು ಭಾಗಗಳು ಷೂಟಿಂಗು ಆಗಲಿಕ್ಕಿವೆ. ಇನ್ನು ಅವುಗಳಲ್ಲಿ ಗೌರಿಗೆ ಕೆಲಸವಿಲ್ಲ. ಅವುಗಳನ್ನು ನೋಡಬೇಕೆಂಬ ಕುತೂಹಲವೂ ಅವಳಿಗಿಲ್ಲ. ಅವಳು ಅಲ್ಲಿಗೆ ಬಂದು ಮೂರು ತಿಂಗಳು ಹತ್ತಿರ ಹತ್ತಿರ ವಾಗುತ್ತಿದ್ದಿತು. ವರವಸಿಗೆ ಅವಳ ಋಣವಿಮೋಚನೆಯಾಗಿ ಬಿಟ್ಟಿತು. ಇನ್ನು ಅಲ್ಲಿಂದ ಹೊರಡಬಹುದಲ್ಲವೆ?

ಮೇಲೆ ಎರಡು ಮೂರು ದಿನಗಳಾದರೂ ವರದನು ಅವಳನ್ನು ಕಳುಹಿಸಿ ಕೊಡುವ ಪ್ರಸ್ತಾಪವನ್ನೇ ಎತ್ತದಿರುವುದನ್ನು ನೋಡಿ ಅವಳಿಗೆ ಸಂದೇಹವುಂಟಾಯಿತು ಮಾಳಿಗೆ ಏರಿ ವರದನು ಅವಳ ಬಳಿಗೆ ಮಾತಾಡಲಿಕ್ಕೆ ಬರುವುದೂ ಕಡಮೆಯಾಯಿತು. ಒಮ್ಮೆ ಬಂದಲ್ಲಿ ಗೌರಿಯೇ ಇನ್ನು ತಾನು ಹೊರಡುವ ಪ್ರಸ್ತಾವವನ್ನು ಮಾಡಿದಳು. "ತಡಿ ಹೋಗುವಿಯಂತೆ" ಎಂದು ಹಾರಿಸಿ ಹೋಗಲಾರಂಭಿಸಿದ್ದನು ವರದ.

ಗೌರಿಗೆ ಮತ್ತಷ್ಟು ಸಂದೇಹವಾಯಿತು. ಹಿಂದೊಮ್ಮೆ ಅವನು ತನ್ನದು ಇನ್ನೊಂದು ಕೋರಿಕೆಯಿದೆ ಎಂದಿದ್ದನಲ್ಲವೆ? ಏನಾಗಿರಬಹುದು ಅದು?

ಈ ಪರಿಸ್ಥಿತಿಯಲ್ಲಿ, ಒಮ್ಮೆ ಸಂಜೆಯ ವೇಳೆಯಲ್ಲಿ ಸುಕುಮಾರಿ ಸುಧಾ, ಒಂದು ಪತ್ರಿಕೆಯೊಂದಿಗೆ ಗೌರಿಯ ಕೋಣೆಯೊಳಗೆ ಬಂದಳು. ಇತ್ತೀಚೆಗೆ ಸುಧಾ ಆಗಾಗ ಗೌರಿಯ ಕೋಣೆಗೆ ಬಂದು ಮಾತಾಡಿ ಹೋಗಲು ವರದನ ಅನುಮತಿಯಾಗಿತ್ತು.

ಬರುತ್ತಲೇ ಸುಧಾ ಹೇಳಿದಳು:— "ಗೌರಿ! ನಿನ್ನ ಭರತನಾಟ್ಯವು ಅಮೋಘವಾಯಿತು! ವರದನ್‌ರಿಗಲ್ಲಿ ನಿನಗೂ ಸರಿಯಾದ ಜತೆಯಮ್ಮ! ಯಾವಾಗ ನಿಮ್ಮ ಮದುವೆ? ನಾನು ನನ್ನ ಭಾಗದ ಕೆಲಸ ಮುಗಿಸಿ ಹೋಗುವುದರೊಳಗೆ, ನಿಮ್ಮ ಮದುವೆಯ ಟೀ ಪಾರ್ಟಿ ನಮಗೆ ಸಿಕ್ಕೀತಲ್ಲವೆ?................"

ಗೌರಿಯ ಮುಖವು ವಿಕಾರ ಛಾಯೆಯಿಂದಾ ವೃತವಾದುದನ್ನು ಕಂಡು ಸುಧಾ ಆ ಮಾತಿನ ಸರಣಿಯನ್ನು ನಿಲ್ಲಿಸಿ "ಏನು ಏನು ಗೌರಿ? ಏನಾಯಿತು?"

ಗೌರಿಯು ತಲೆ ಗಿರ್ರನೆ ತಿರುಗುತ್ತಿತ್ತು ಮೆಲ್ಲನೆ ಸಾಂಬಾಳಿಸಿ ಕೊಂಡು— "ಯಾರ ಮದುವೆ ಸುಧಾ?" ಎಂದು ಕೇಳಿದಳು.

"ನಿನಗೆ ಗೊತ್ತಿಲ್ಲವೆ?"

"ಇಲ್ಲವಲ್ಲಾ!"

"ನಿನ್ನ ಹಾಗು ವರದರಾಯರ ಮದುವೆ!"

"ಯಾರು ಹೇಳಿದ್ದು ನಿನಗೆ?"

"ಇಲ್ಲಿರುವ ಕೆಲವರು ಮಾತಾಡುತ್ತಿದ್ದರು!"

"ಸುಳ್ಳು! ಸುಧಾ! ಇದು ಯಾರೋ ಪೋಲೀ ಜನರ ಸುಳ್ಳಿನ ತಿರಿಕೆ!"

"ಸುಳ್ಳೆ! ಪತ್ರಿಕೆಯಲ್ಲಿ ಕೂಡಾ ಈ ಸುದ್ದಿ ಬಂದಿದೆ!"

"ಅಯ್ಯೋ!—"

ಸುಧಾ ತನ್ನ ಕೈಯಲ್ಲಿರುವ "ಸಿನಿಮಾ ವೃತ್ತ" ಎಂಬ ಆ ವಾರದ ಪತ್ರಿಕೆಯನ್ನು ಗೌರಿಗೆ ಕೊಟ್ಟಳು- ಕೊಟ್ಟು ತಾನೇ ಬಿಡಿಸಿ ತೋರಿಸ ಲಾರಂಭಿಸಿದಳು.

ಅದರಲ್ಲಿ ಒಂದೆಡೆ ಗೌರೀ—ವರದರ "ರಾಧಾಕೃಷ್ಣ" ನೃತ್ಯದ ಒಂದು ಭಾವ ಮುದ್ರಾಭಂಗಿಯ ಭಾವಚಿತ್ರವು, ಸುಂದರವಾಗಿ ಮುದ್ರಿತ ವಾಗಿತ್ತು. ಅದರ ಬುಡದಲ್ಲಿ "ಮಾನವತಿ" ಚಿತ್ರದಲ್ಲಿ ಹೊಸ ನೃತ್ಯ ತಾರೆ ಗೌರಿ; ನೃತ್ಯಪಟು ಡೈರೆಕ್ಟರ್ ವರದನ್." ಎಂದು ಬರೆದಿತ್ತು. ಅದರ ಅಕ್ಕ-ಪಕ್ಕಗಳಲ್ಲಿ ಕಥಾನಾಯಕಿಯಾಗಿ ಅಭಿನಯಿಸಿದ ಸುಧಾಳ ಭಾವಚಿತ್ರವೂ, ಅವಳ ಗೆಳತಿಯಾಗಿ ನಟಿಸಿದ ಇನ್ನೊಬ್ಬಳು ಹೊಸ ತಾರೆಯ ಚಿತ್ರವೂ ಇದ್ದುವು. ಆ ಹೊಸ ತಾರೆಯ ಮುಖವು ಗೌರಿಗೆ ಪರಿಚಿತವಾದುದಾಗಿರುವಂತೆ ತೋರಿತು. ಅದರ ಬುಡದಲ್ಲಿರುವ ಹೆಸರು ಕಣ್ಣಿಗೆ ಬಿದ್ದುದೇ ತಡ! ಗೌರಿ ಅಚ್ಚರಿಯಿಂದ ಬೆಚ್ಚಿಬಿದ್ದಳು

"ಹೊಸ ತಾರೆ—ವಸಂತಿ"

"ವಸಂತಿ!" ಎಂದು ಬಾಯ್ದೆರೆದೇ ಹೇಳಿಕೊಂಡಳು ಗೌರಿ! ಹೌದು! ಶ್ಯಾಮಸುಂದರರ ಮಗಳು ವಸಂತಿಯೇ! ತನಗೆ ಗೊತ್ತೇ ಇಲ್ಲದೆ ವಸಂತಿಯೂ ಈ ಚಿತ್ರದಲ್ಲಿ ನಟಿಸಿದ್ದಾಳೆ!

ಮತ್ತೂ ಸುಧಾ ಇನ್ನೊಂದು ಪುಟವನ್ನು ತಿರುಗಿಸಿ ತೋರಿಸಿದಳು. ಅಲ್ಲಿ ಹೀಗಿತ್ತು:

" 'ಮಾನವತಿ'— ಸಾಮಾಜಿಕ ಚಿತ್ರದ ಷೂಟಿಂಗು ಸರಭಸವಾಗಿ ನಡೆಯುತ್ತದೆ ಪ್ರಖ್ಯಾತ ನಾಟ್ಯಪಟುಗಳೂ, ವಿಖ್ಯಾತ ಡೈರೆಕ್ಟರೂ ಆದ ವರದನ್ ಅವರೇ ಇದರ ಡೈರೆಕ್ಟರ್. ಮತ್ತು ಪ್ರಧಾನ ಪಾತ್ರವನ್ನು ಅವರೇ ನಿರ್ವಹಿಸುತ್ತಾರೆ ಆದುದರಿಂದ ಈ ಚಿತ್ರಪಟವು ಅಮೋಘವಾಗಿ ಹೊರಗೆ ಬರುಬಹುದೆಂದು ನಂಬಲಾಗಿದೆ. ಅಲ್ಲದೆ ಇದರಲ್ಲಿ ಇನ್ನೊಂದು ಮುಖ್ಯ ವೈಶಿಷ್ಟ್ಯವೇನಂದರೆ, ಪ್ರಧಾನ ನಾಯಕಿ ಸುಕುಮಾರಿ ಸುಧಾ ಮತ್ತು ನೃತ್ಯಕಲಾಜ್ಯೋತಿ ಕುಮಾರಿ ಗೌರೀದೇವಿಯ ನಾಟ್ಯವೈಭವದಿಂದ ಕಳೆಯೇರಿದೆ..............."

ಇನ್ನೊಂಪೆಡೆ ಚುಟುಕದಲ್ಲಿ— "ನೃತ್ಯಕಲಾಜ್ಯೋತಿ ಕುಮಾರಿ ಗೌರೀದೇವಿಯನ್ನು, ನೃತ್ಯಕಲಾಪಟು ಡೈರೆಕ್ಟರ್ ವರದನ್ನರು ವಿವಾಹ ಮಾಡಿಕೊಳ್ಳುವರಾಗಿ ನಿಶ್ಚಯವಾಗಿದೆಯಂತೆ ಹೀಗಾದರೆ ಸಿನಿಮಾ ಲೋಕಕ್ಕೊಂದು ನೂತನ ಕಲ್ಯಾಣ ಯೋಗವೇ ಪ್ರಾಪ್ತವಾದಂತಾದೀತು!"

ಗೌರಿ ಪತ್ರಿಕೆಯನ್ನು ಧೊಪ್ಪನೆ ಕೆಳಕ್ಕೆಸೆದು 'ಸುಳ್ಳು! ಸುಳ್ಳು!"

## ೩೨

"ಸುಳ್ಳು! ಮೋಸ! ತುಂಟ ವಂಚಕರ ಆಟ!—" ಚೀರುತ್ತಾ ನಡುಗುತ್ತಾ ಎದ್ದಳು—ಗೌರಿ.

ಸುಧಾ ಅವಳನ್ನು ಸೋಫಾದ ಮೇಲೆ ಹಿಡಿದು ಕುಳ್ಳಿರಿಸಿ,— "ಹಾಗೇನಾಯಿತು ಗೌರಿ! ಈ ವಿವಾಹ ನಿನಗಿಷ್ಟವಿಲ್ಲವೆ? ಯಾಕೆ? ಏನು ಕೆಡುಕು? ನಿನಗೆ ಒಂದೂ ಗೊತ್ತಿಲ್ಲವೆಂದು ಕಾಣುತ್ತದಲ್ಲಾ?"

"ಕನಸಿನಲ್ಲಿಯೂ ನೆನೆಯದ ವಿಚಾರವಿದು! ವರದರಾಯರನ್ನು ನಾನು ಅಣ್ಣನೆಂದೇ ತಿಳಿದಿದ್ದೇನೆ. ಅವರು ಅದಕ್ಕೆ ವ್ಯತಿರಿಕ್ತವಾಗಿ ನನ್ನ ಮುಂದೆ ನಡೆದಿಲ್ಲ. ಇದೆಲ್ಲ ಎಂತಹ ಸುಳ್ಳು ವಾರ್ತೆ!"

ಸ್ವಲ್ಪಹೊತ್ತು ಅವಳನ್ನೆ ನೋಡುತ್ತಿದ್ದ ಸುಧಾ, ಒಮ್ಮೆಲೆ ನಗುತ್ತ — "ಆಹ! ನನ್ನೊಡನೆ ಬುರುಡೆ ಬಿಡುತ್ತಿಯಾ ಗೌರಿ? ವರದನ್ ಎಂಥವನೆಂದು ನನಗೆ ಚೆನ್ನಾಗಿ ಗೊತ್ತಿದೆ. ಈ ಸ್ಟುಡಿಯೋದಲ್ಲಿರುವ ಕೊಂಚ ಲಕ್ಷಣವುಳ್ಳ ಹೆಂಗುಸರಿಗೆಲ್ಲಾ ಗೊತ್ತಿದೆ ನನ್ನ ಮುಂದೆಯೂ ಅವನ ಬೇಳೆಬೇಯಿಸಬೇಕೆಂದು ನೋಡಿದ; ಸಾಧ್ಯವಾಗಲಿಲ್ಲ ಆದರೆ ನನಗೇನೂ ವರದನ್‌ಮೇಲೆ ಸಿಟ್ಟಿಲ್ಲ. ಈ ಸ್ಟುಡಿಯೊ ಗಾಳಿಯೇ ಅಂಥಾದ್ದು. ಇಲ್ಲಿಗೆ ಬರುವ ನಟನಟಿಯರೂ ಅಂತಃರೇ. ಈಗ ವಸಂತಿ ಎಂಬ ಹೊಸ ಜಿಂಕೆಯೊಂದನ್ನು ಕೈಯೊಳಗೆ ಹಾಕಿಕೊಂಡಿದ್ದಾನೆ..........."

"ಏನೇನು? ವಸಂತಿಯನ್ನೆ?"

"ಹೌದಮ್ಮಾ ನಿನಗೆ ಗೊತ್ತೇ ಆ ವಸಂತಿ?"

ಗೌರಿ ಏನೂ ಹೇಳಲಿಲ್ಲ

"ಬಹಳ ಒಯ್ಯಾರ! ಯಾವಾಗಲೂ ವರದನೊಂದಿಗೆ ತಿರುಗಾಡುತ್ತಿರುತ್ತಾಳೆ! ಕುಲುಕಾಡುತ್ತಿರುತ್ತಾಳೆ. ಹೆಸರಿಗೆ ನಾವು ನಟಿಸಿದ ಚಿತ್ರದಲ್ಲಿಯೇ ಅವಳಿಗೂ ಒಂದು ಆಕ್ಟು. ನಿನ್ನೆ ತಾನೇ ನಾನು ಅವಳೊಡನೆ ಕೊಂಚ ಮಾತಾಡಿದೆ ಒಳ್ಳೇ ಕುಲೀನ ಹುಡುಗಿಯಂತೆ ಅವಳು! ಇಲ್ಲಿ ಹೀಗೆ ಸುಮ್ಮನೆ ಕೆಟ್ಟು ಹೋಗುತ್ತಾಳಲ್ಲಾ ಅಂತ ನಾನು ಸೂಕ್ಷ್ಮವಾಗಿ ಅವಳಿಗೆ ನಾಲ್ಕು ಬುದ್ಧೀ ಮಾತು ಹೇಳಿ ಕಳುಹಿದ್ದೇನೆ ನನ್ನ ಮೇಲೆ ಅವಳಿಗೆ ಕೋಪ ಬಂದ ಹಾಗಿತ್ತು. ಇದೆಲ್ಲಾ ಯಾಕೆ ಹೇಳುತ್ತೇನೆಂದರೆ, ಗೌರೀ! ನೀನು ಹೇಗೂ ಯಾರೂ ದಿಕ್ಕಿಲ್ಲದವಳಾಗಿರುವಿ ಅನಾಥಳಾಗಿರುವಿ. ವರದನ್ ನಿನ್ನನ್ನು ಕಾಪಾಡಿ ಕರಕೊಂಡು ಬಂದಿದ್ದಾನೆ. ಅವನು ಎಷ್ಟೇ ಸ್ತ್ರೀಲೋಲನಾದರೂ ಒಳ್ಳೆಯ ಕಲಾವಿದ. ನಾಟ್ಯಪಟು. ಅವನಿಗೆ ತಕ್ಕ ಜತೆಯಾಗುವಂತೆ ನೀನೂ ಕಲಾವಿದೆಯಾಗಿರುತ್ತೀ. ಅವನು ಇದನ್ನು ಮನವರಿಕೆ ಮಾಡಿಕೊಂಡೇ ಈ ಮದುವೇ ಪ್ರಸ್ತಾವ ಹುಟ್ಟಿಸಿರಬೇಕು ನೀನು ಅವನಿಗೆ ಒಪ್ಪಿತದವಳಾದುದರಿಂದ, ಅವನನ್ನು ನೀನು ಹೇಳಿದಂತೆ ಕೇಳಿಸಬಹುದು ನೀನು ಅವನ ಸ್ತ್ರೀಲೌಲುಪ್ಯತೆಯನ್ನೂ ಕಡಮೆ ಮಾಡಿಸಿ, ತಕ್ಕ ಹದ್ದಿನಲ್ಲಿಟ್ಟುಕೊಳ್ಳಬಹುದು ಅವನ ಮೇಲೆ ಅಷ್ಟು ಶಕ್ತಿಯ ಪ್ರಯೋಗಮಾಡಲು ನಿನ್ನಿಂದ ಮಾತ್ರ ಸಾಧ್ಯವಿದೆ ಗೌರಿ. ನಿನ್ನ ಮುಂದೆ ಅವನು ಏನೂ

ವ್ಯತಿರಿಕ್ತವಾಗಿ ನಡೆದಿಲ್ಲವೆಂಬುದನ್ನು ಕೇಳಿ ನನಗೆ ತುಂಬಾ ಆಶ್ಚರ್ಯ ವಾಗುತ್ತದೆ ಆದರೆ ಇದ್ದೀತು! ಅವನಿಗೆ ನಿನ್ನ ಮೇಲೆ ಪತ್ನಿಯ ಮೇಲಿರುವಂತಹ ಅಭಿಮಾನವೂ, ಪ್ರೇಮವೂ ಮೂಡಿರುವುದರಿಂದಲೇ, ಅವನು ನಿನ್ನ ಮುಂದೆ ವ್ಯತಿರಿಕ್ತವಾಗಿ ನಡದಿರಲಿಕ್ಕಿಲ್ಲ. ಬೇಗನೇ ನಿಮ್ಮ ವಿವಾಹವಾಗಿ ಕಲೆಗೆ ಕಲ್ಯಾಣವಾಗಲಿ''

ಸುಧಾಳ ಈ ದೀರ್ಘ ಭಾಷಣವನ್ನು ಬೆಪ್ಪಾಗಿ ಬೆರಗಾಗಿ ಗೌರಿ ಕೇಳಿದಳು. ಸುಧಾಳಿಗಿಂತ ಒಂದು ಪಟ್ಟು ಹೆಚ್ಚಿನ ಸತ್ಯಾಂಶವೇ ಅವಳಿಗೆ ತಿಳದಂತಾಯಿತು. ವರದನು ಮಹಾವಂಚಕನೆಂದು ಸುಧಾಳಿಗಿಂತ ಸ್ಪಷ್ಟವಾಗಿ ಗೌರಿಗೇ ತಿಳಿಯಿತು ಅಹಾ! ಅವನು ಅವಳಿಗೆ ಎಷ್ಟು ಸುಳ್ಳು ಹೇಳಿದ್ದ? ಎಷ್ಟು ಮೋಸ! ಎಷ್ಟು ಮರೆ! ವಸಂತಿಯನ್ನು ಅವ ಳಿಗೆ ತಿಳಿಯದಂತೆಯೋ, ಅವಳು ನಟನೆ ಕೊಟ್ಟ ಚಿತ್ರದಲ್ಲಿಯೋ, ಪ್ರವೇಶ ಗೊಳಿಸಿದ್ದಾನೆ! ಗೋಮುಖವ್ಯಾಘ್ರ ವರದ!

''ಸರಿ. ಇನ್ನು ವರದನು ನನ್ನನ್ನು ಇಲ್ಲಿಂದ ಹೋಗಗೊಡುವನೆ? ಅವನ ಇನ್ನೊಂದು ಕೋರಿಕೆ ಇದೇ ಏನು?....... .... ಅಯ್ಯೋ! ಇನ್ನು ಏನಾದರೂ ಯುಕ್ತಿಯಿಂದಲೇ ಪಾರಾಗಬೇಕಾಗಿದೆ." ಎಂದು ಯೋಚಿಸಿ ಕೊಂಡು ಗೌರಿ— ''ಸುಧಾ! ಹೊಸ ಹೊಸ ಸಮಾಚಾರಗಳನ್ನು ತಿಳಿಸಿ ದ್ದಕ್ಕಾಗಿ ತುಂಬಾ ಥ್ಯಾಂಕ್ಸ್! ಆದರೆ ನನ್ನನ್ನು ವರದರಾಯರು ಮದುವೆ ಮಾಡಿಕೊಳ್ಳುತ್ತಾರೆಂಬ ಮಾತು ಮಾತ್ರ ಸುಳ್ಳು!" ಎಂದಳು.

ಆಗ ಎಲ್ಲಿಗೋ ಹೋಗಿದ್ದ ವರದನು ಮನೆಗೆ ಬಂದು, ಕೆಳಗೆ ವೆಂಕೂನೊಡನೆ ಮಾತಾಡುತ್ತಿರುವ ಶಬ್ದವು ಕೇಳಿಸಿತು ಕೂಡಲೇ ಸುಧಾ--- ''ನಾನು ಬರುತ್ತೇನೆ ಗೌರಿ ನೀನು ಹಾಗೆಲ್ಲ ಹೇಳಬೇಡ ವರದರಾಯರನ್ನು ನೀನು ವಿವಾಹಮಾಡಿಕೊಳ್ಳಲೇಬೇಕೆಂದು ನನ್ನ ಒತ್ತಾಯವಿದೆ" ಎಂದಂದು ಹೊರಟು, ಮಾಳಿಗೆಯಿಂದ ಕೆಳಗಿಳಿದಳು.

ಕೆಳಗೆ ಸುಧಾ ವರದರು ಏನೋ ಮಾತಾಡಿಕೊಂಡರು ಅನಂತರ ವರದನು ಮೇಲೇರಿ ಬಂದು, ಗೌರಿಯ ಇದಿರು ಸೋಫಾದ ಮೇಲೆ ಕುಳಿ ತನು. ಅವನ ಮುಖದಲ್ಲಿ ಮುಗುಳುನಗೆ ಲಾಸ್ಯವಾಡುತ್ತಿದ್ದಿತು.

ಗೌರಿಯ ಮುಖದಲ್ಲಿ ಯೋಚನೆಯ ಭಾರವು ತುಂಬಿತ್ತು.

"ಏನು ಗೌರಿ! ಏನೋ ಗಾಢಾಲೋಚನೆ ಮಾಡುವಂತಿದೆ? ಸುಧಾ ಏನಾದರೂ ಕಹಿಯಾಗಿ ಮಾತಾಡಿದಳೆ?" ವರದನು ಕೇಳಿದ.

'ಹೌದು. ನೀವೇ ಹಾಗೆ ಹೇಳುವಂತೆ ಪ್ರೇರೇಪಿಸಿ ಕಳುಹಿಸಿದ್ದೀರಿ; ಅಲ್ಲವೆ?"

"ಹೌದು. ಸುಳ್ಳೇಕೆ? ಸಿನಿಮಾ ವೃತ್ತಪತ್ರಿಕೆಯನ್ನು ನೋಡಿದಿಯಷ್ಟೆ? ಎಲ್ಲರೂ ಹಾಗೆಂದೇ ಊಹೆ ಕಟ್ಟಿಬಿಟ್ಟಿದ್ದಾರೆ. ಹಾಗಾಗುವುದು ಒಳ್ಳೆಯದೆಂದೂ ಹೇಳುತ್ತಿದ್ದಾರೆ"

"ಹೇಗಾಗುವುದು?"

"ನಿನ್ನೊಡನೆ ನನ್ನ ವಿವಾಹ?"

"ಸಾಧ್ಯವಿಲ್ಲ! ಸಾಧ್ಯವೇ ಇಲ್ಲ!"

"ನನಗೂ ವಿವಾಹಕ್ಕೆ ಇಷ್ಟವಿಲ್ಲ—ಇರಲಿಲ್ಲ ಆದರೆ ಈಗ ನಾನು ನಿನ್ನನ್ನು ವಿವಾಹಮಾಡಿಕೊಳ್ಳಬೇಕೆಂದೂ, ನನಗೂ ನಿನಗೂ ಸರಿಮೇಳವಿದೆಯೆಂದೂ ಎಲ್ಲರೂ ಒತ್ತಾಯಿಸುತ್ತಿದ್ದಾರೆ. ನನ್ನ—ನಿನ್ನ ವಿವಾಹ ನಿಶ್ಚಯವೂ ಆಯಿತೆಂದು ಜನಜನಿತವಾಗಿ ಹೋಗಿದೆ! ಇನ್ನೂ ನಿನ್ನ ಒಪ್ಪಿಗೆ ಸರಿಯಾಗಿ ಸಿಕ್ಕಿಲ್ಲವೆಂದು ನಾನು ಸುಧಾಳೊಡನೆ ಹೇಳಿದೆ ಈ ವಿಷಯ ತಾನೇ ಪ್ರಸ್ತಾವಿಸಿ ನೋಡುತ್ತೇನೆಂದಳು. ಎಲ್ಲಾ ಗೊತ್ತಾಯಿತಷ್ಟೆ?"

"ಎಲ್ಲಾ ಗೊತ್ತಾಯಿತು! ಹೆಚ್ಚೇ ಗೊತ್ತಾಯಿತು! ನಾನು ಮೊದಲೇ ನಿಮಗೆ ಹೇಳಿದ್ದೇನೆ ನಿಮ್ಮನ್ನು ಅಣ್ಣನಂತೆ ಭಾವಿಸಿದ್ದೇನೆ. ಎಂದೆಂದೂ ಭಾವಿಸುತ್ತೇನೆ. ಅಣ್ಣಾ! ಇನ್ನು ನನ್ನನ್ನು ಕಳುಹಿಸಿಬಿಡಿ!"

"ಎಲ್ಲಿಗೆ?"

"ಎಲ್ಲಿಗೂ ಬೇಡ! ಈ ಕಂಪೌಂಡಿನ ಹೊರಗೆ ಬಿಟ್ಟರೆ ಸಾಕು"

"ಹೌದು. ಕೋಳಿಮರಿಯನ್ನು ಹದ್ದು ಎತ್ತಿಕೊಂಡು ಹೋಗುವಂತೆ, ಮಿಲಿಟ್ರೀಯವರು ನಿನ್ನನ್ನು ಹೊತ್ತುಕೊಂಡು ಹೋಗುತ್ತಾರೆ!"

"ಹಾಗಾದರೆ ನೀವು ನನ್ನನ್ನು ಏನು ಮಾಡಬೇಕೆಂದಿದ್ದೀರಿ?"

"ನನ್ನದಿನ್ನೊಂದು ಕೋರಿಕೆಯುಂಟೆಂದು ನಾನು ಮೊದಲೇ ಸೂಚಿಸಿದ್ದೇನಲ್ಲವೆ? ಅದೇನೆಂದು ನಾನು ಈ ವರೆಗೂ ನಿನಗೆ ಸ್ಪಷ್ಟವಾಗಿ

ಹೇಳಲಿಲ್ಲ. ಸ್ವಲ್ಪ ಪಳಗಿದನಂತರ ಹೇಳೋಣವೆಂದೇ ಹೇಳಲಿಲ್ಲ. ಈಗ ನೀನು ಇಲ್ಲಿಗೆ ಬಂದು ಎರಡು ಮೂರು ತಿಂಗಳಾಯಿತು. ಗೌರಿ! ಸುತ್ತಿ ಬಳಸಿ ಹೇಳಲೇಕೆ? ನನಗೆ ತಕ್ಕ ಮಡದಿಯಾಗತಕ್ಕವಳು ನೀನೇ ಒಪ್ಪಿರುವೆನೆಂದು ಬಾಯಿತೆರೆದು ಹೇಳಿಬಿಡು. ಮದುವೆಯಾದ ಕೂಡಲೇ ನೀನು ಹೀಗೆ ನಿರ್ಬಂಧದಲ್ಲಿರಲಾರಿ ನಿನ್ನ ಇಚ್ಛಾನುಸಾರವಾಗಿ ಹೋಗಗೊಡುವೆನು "

"ಏನಿದು? ಸಣ್ಣ ಮಗುವನ್ನು ಮಂಗಾಡಿಸುವಂತೆ?"

"ಅಂದರೆ ನಿನಗೆ ಸಂಪೂರ್ಣ ಸ್ವಾತಂತ್ರ್ಯ ಕೊಡುವೆನೆಂದು ಅರ್ಥ!"

ಇಲ್ಲ. ಇನ್ನು ಇವನೊಡನೆ ಮಾತಾಡಿ ಪ್ರಯೋಜನವಿಲ್ಲ. ವರದನು ನಯವಾಗಿ ತುಂಬಾ ಉಪದೇಶ ಮಾಡುತ್ತಿದ್ದಾನೆ ಅವಳು ಬಾಯಿಮುಚ್ಚಿ ಗಂಭೀರಳಾಗಿ ಕುಳಿತಿದ್ದಾಳೆ ಕಡೆಗೆ ವರದನು ಕೋಪದಿಂದ— "ಇಷ್ಟು ನಯವಾಗಿ ನಾನು ಹೇಳಿದರೂ ನೀನು ಕೇಳುವುದಿಲ್ಲ ಅಲ್ಲವೆ? ಹುಚ್ಚೀ! ನಾವಿಬ್ಬರೂ ಗಂಡ-ಹೆಂಡಿರಾಗಿರುವೆವೆಂದು ಊರು ಪೂರಾ ಗೊತ್ತಾಗಿಹೋಗಿದೆ ಸರಿ ಕಡೆಯ ಔಷಧವನ್ನು ಪ್ರಯೋಗಿಸಿದ ಮೇಲೆಯೇ ನೀನು ದಾರಿಗೆ ಬರುವಂತಿದೆ!— ಏ ಶೆಲ್ಲಂ!" ಎಂದು ಗಟ್ಟಿಯಾಗಿ ಕರೆದನು.

ಶೆಲ್ಲಂ ಓಡಿ ಬರುತ್ತಲೇ ಅವಳನ್ನು ಕುರಿತು,— "ಈ ದಿನ ನನ್ನ ಹಾಸಿಗೆಯನ್ನು ಈ ಕೋಣೆಯೊಳಗೇ ಹಾಕು!" ಎಂದು ಭಯಂಕರ ಆಜ್ಞೆಯನ್ನು ಹೊರಡಿಸಿ, ವರದನು ಎದ್ದು ಕೆಳಗಿಳಿದು ಹೋಗಿಬಿಟ್ಟನು.

ಆ ಆಜ್ಞೆ ಗೌರಿಯ ತಲೆಗೆ ಸಿಡಿಲು ಬಡೆದಂತಾಯಿತು!

ಓಡಿಹೋಗೋಣವೆಂದರೆ ಆ ಮಾಳಿಗೆಯ ಮೆಟ್ಟಲಿನ ಬಾಗಿಲು, ಯಾವಾಗಲೂ ಹೊರಗಿನಿಂದ ಚಿಲುಕ ಹಾಕಿರುತ್ತಿತ್ತು! ಏನೇ ಆಗಲಿ. ಇಂದು ರಾತ್ರಿ ಆ ಧೂರ್ತನು ಒಳಗೆ ಬರದಂತೆ ಬಾಗಿಲು ತಾಳ ಹಾಕಿ ಭದ್ರವಾಗಿರುವುದೆಂದು ನಿಶ್ಚಯ ಮಾಡಿಕೊಂಡಳು.

ಅವಳ ದುಃಖವನ್ನು ಅವಳು ಯಾರೊಡನೆ ಹೇಳಿಕೊಳ್ಳುವುದು? ಸೇವಕರಾದ ಶೆಲ್ಲಂ-ವೆಂಕರು ಅವಳ ಮೇಲೆ ಸಹಾನುತಾಪಿಗಳಲ್ಲ! ಗೌರಿ

ಆ ಮನೆಯಿಂದ ಹೊರಡಬೇಕಾದರೆ ಶೆಲ್ಲಂ-ವೆಂಕರೇ ಬಾಗಿಲು ತೆರೆದು ಕೊಡಬೇಕು. ಎಲ್ಲಿ ತಿರುಗಾಡಿದರೂ ವೆಂಕೂ ಅವಳ ಹಿಂದೆಯೇ ಇರು ವನು. ಅವಳ ವಿಶ್ವಾಸಕ್ಕೆ ಪಾತ್ರಳಾಗಿ ಅಲ್ಲಿದ್ದವಳು ಒಬ್ಬಳೇ ಒಬ್ಬಳು— ಸುಧಾ. ಈಗ ಅವಳು ಕೂಡಾ ವರದನನ್ನೆ ಮದುವೆ ಮಾಡಿಕೊಳ್ಳು ವಂತೆ ಒತ್ತಾಯಸುತ್ತಾಳಲ್ಲ!

ಏನು ಮಾಡುವುದೆಂದು ಚಿಂತಿಸುತ್ತಾ ಕುಳಿತಿದ್ದಾಗ, ಆ ಮನೆಯ ಮುಂದೊಂದು ಕಾರು ಬಂದು ನಿಂತ ಶದ್ದಾಯಿತು. ಯಾರದೋ ಏನೋ ಎಷ್ಟೋ ಕಾರು ಬರುತ್ತೆ ಹೋಗುತ್ತೆ ಎಂದುಕೊಂಡು ಅವಳು ಅಲಕ್ಷ್ಯವಾಗಿದ್ದಾಗ,— "ಡೈರೆಕ್ಟರ್ ವರದನ್ ಇಲ್ಲವೆ?" ಎಂದು ಪರಿ ಚಿತ ಸ್ತ್ರೀಕಂಠವು ಅವಳ ಲಕ್ಷ್ಯವನ್ನೆಳೆಯಿತು.

ಗೌರಿ ಚಟ್ಟನೆದ್ದು ಮಾಳಿಗೆ ಮೆಟ್ಟಲಿನ ಬಳಿಗೆ ಓಡಿಬಂದು ನಿಂತಳು. ಮೆಟ್ಟಲಿಳಿದರೆ ಕೆಳಗೊಂದು ಬಾಗಿಲು. ಆ ಬಾಗಿಲು ಯಾವಾಗಲೂ ಹೊರಗಿನಿಂದ ಚಿಲಕ ಹಾಕಿರುತ್ತಿತ್ತು

ಆ ಪ್ರಶ್ನೆಗೆ ವೆಂಕೂನ ಉತ್ತರ ಕೇಳಿಸಿತು— "ಅವರಿಲ್ಲ ಹೊರಗೆ ಹೋಗಿದ್ದಾರೆ"

"ಯಾವಾಗ ಬಂದಾರು?"— ಅದೇ ಸ್ತ್ರೀಕಂಠ

ಗೌರಿ ಕೌತುಕಾನಂದದಿಂದ ಮೆಟ್ಟಲಿಳಿದು, ಬಾಗಿಲ ಬದಿಯ ಲ್ಲಿಯೇ ನಿಂತಳು.

ವೆಂಕೂನ ಪ್ರತ್ಯುತ್ತರ: — "ಗೊತ್ತಿಲ್ಲ. ನಿಮಗೆ ಅವರನ್ನು ನೋಡಬೇಕಾದರೆ ನಾಳೆ ಆಫೀಸಿನಲ್ಲಿ ನೋಡಿ. ಇದು ಅವರ ಪ್ರೈವೇಟು ಬಂಗಲೆ."

"ಪ್ರೈವೇಟು ಬಂಗಲೆಯಲ್ಲಿಯೇ ಅವರನ್ನು ಕಾಣಬೇಕಾಗಿದೆ. ಹೇಗೂ ಒಂಭತ್ತು ಗಂಟೆಯೊಳಗೆ ಬಂದಾರಲ್ಲವೆ? ನಾನು ಕಾದಿರುತ್ತೇನೆ"

"ಅವರು ಬರುವಾಗ ಹತ್ತಾದರೂ ಆದೀತು, ಹನ್ನೆರಡಾದರೂ ಆದೀತು. ನೀವು ನಾಳೆ ಬೆಳಿಗ್ಗೆ ಬಂದು ನೋಡುವುದೊಳ್ಳೇದಮ್ಮ"

ಇನ್ನು ತಾಳಲಾರದೆ ಗೌರಿ, ಬಾಗಿಲ ಹಿಂದಿನಿಂದಲೇ ಕೂಗಿದಳು! "ವಸಂತೀ! ವಸಂತೀ!..........."

೩೩

" ಗೌರಿ ! ಗೌರೀ ! ಇಲ್ಲಿಯೇ ಇದ್ದಿಯಾ ನೀನು ? " ವಸಂತಿ ಹೊರಗಿನಿಂದಲೇ ಕೂಗಿದಳು

" ಹೌದು ವಸಂತೀ ! ಸ್ವಲ್ಪ ನನ್ನೊಡನೆ ಮಾತಾಡಿ ಹೋಗೇ ! ಅಮ್ಮಾ ! ಶೆಲ್ಲಂ ! ನನ್ನ ಗೆಳತಿ ಅವಳು ಅವಳನ್ನು ಕೊಂಚ ಒಳಗೆ ಬಿಡು. ಬಾಗಿಲು ತೆಗಿ ! "

ಶೆಲ್ಲಂ ಹೊರಗಿನಿಂದ – " ಅಯ್ಯೊ ! ಅದೆಲ್ಲ ನಮಗೆ ಗೊತ್ತಿಲ್ಲಮ್ಮಾ! ಯಜಮಾನರ ಅಪ್ಪಣೆಯಿಲ್ಲದೆ ನಿಮ್ಮೊಡನೆ ಮಾತಾಡಲು ಯಾರನ್ನೂ ಬಿಡುವಹಾಗಿಲ್ಲಮ್ಮ ! " ಎಂದಳು.

ಕೂಡಲೇ ವಸಂತಿ ಶೆಲ್ಲಂಳನ್ನೂ ಕುರಿತು ಅರೆಮರೆಯಾದ ತಮಿಳು ಭಾಷೆಯಲ್ಲಿ —" ಅದೇಕೆ ? ಏನಾದರೂ ಮೋಸವಿದೆಯೆ ? "

" ಅದೊಂದೂ ನಮಗೆ ಗೊತ್ತಿಲ್ಲ "—ಎಂದು ವೆಂಕುವಿನ ದನಿ ಕೇಳಿಸಿತು

ವಸಂತಿಯೆಂದಳು:—" ಎಲ್ಲಾ ಗೊತ್ತಾಯಿತು ನನಗೆ. ನಾನೇನೂ ನಿಮ್ಮ ಗೌರೀದೇವಿಯನ್ನು ತಿಂದುಬಿಡುವದಿಲ್ಲ. ವರದನ್ ಬರುವದ ರೊಳಗೆ ನಾನು ಅವಳೊಡನೆ ನಾಲ್ಕು ಮಾತಾಡಿ ಬಂದುಬಿಡುತ್ತೇನೆ. "

" ಆಗುವುದಿಲ್ಲವಮ್ಮಾ ! " ವೆಂಕು ನಿರ್ಧಾರದಿಂದ ಹೇಳಿದ.

" ವಸಂತೀ ! ನಾನಿಲ್ಲಿ ಸಿಕ್ಕಿಬಿದ್ದೇನೆ. ಹೇಗಾದರೂ ನನ್ನನ್ನೀ ಬಂಧನದಿಂದ ಪಾರುಮಾಡು ! " ಎಂದಳು. ಸುಸ್ಪಷ್ಟವಾದ ಕನ್ನಡ ದಲ್ಲಿ ಹೇಳುವ ಮಾತು, ಆ ಶೆಲ್ಲಂ ವೆಂಕೂಳಿಗೆ ಅರ್ಥವೇ ಆಗುತ್ತಿದ್ದಿಲ್ಲ.

ಆಗ ವಸಂತಿ—" ಆಗುವುದಿಲ್ಲವೆ ? ಒಳ್ಳೆಯದರಲ್ಲಿ ನೀವು ಬಿಡ ದಿದ್ದರೆ ನಾನೀಗಲೇ ಪೋಲೀಸರನ್ನು ಕರೆಯುತ್ತೇನೆ. ಒಬ್ಬಳು ಹೆಂಗು-ಸನ್ನು ಮಾಳಿಗೆಯ ಮೇಲೆ ಹಾಕಿ ಬಾಗಿಲು ಭದ್ರ ಪಡಿಸುವುದೆಂದರೆ ಏನರ್ಥ ? "

ವೆಂಕು ಕೂಡಲೆ ಹೆದರಿದಂತೆ ತೋರಿತು.

ಶೆಲ್ಲಂ ಅಂದಳು:—" ಬೇಗನೇ ಮಾತಾಡಿ ಹೋಗುತ್ತೀರಾ ? "

" ಆಗತ್ಯವಾಗಿ ಬೇಗನೇ ಹೋಗುತ್ತೇನೆ. "

ವರದರಾಯರು ಬರುವುದರೊಳಗೆ, ನೀವು ಕೆಳಗೆ ಬಂದುಬಿಡಿ" ಎನ್ನುತ್ತಾ ವೆಂಕು, ಮಾಳಿಗೆಯ ಮೆಟ್ಟಿಲ ಬಾಗಿಲಚಿಲಕ ತೆಗೆದನು.

ಆ ಬಾಗಿಲಲ್ಲಿಯೇ ಗೌರೀ ವಸಂತಿಯರು ಪರಸ್ಪರ ಗಾಢಾಲಿಂಗನ ಮಾಡಿಕೊಂಡರು.

ಆಗ ಹೆದರಿಕೊಂಡಿದ್ದ ಶೆಲ್ಲಂ, ವೆಂಕೂನ ಕುರಿತು—"ವೆಂಕಾ! ನೀನು ಮುಂದೆ ಹೋಗಿ ಗೇಟಿನ ಬಳಿ ನೋಡುತ್ತಾ ನಿಲ್ಲು ರಾಯರ ಕಾರು ದೂರದಲ್ಲಿ ಬರುವಾಗಲೇ ಓಡಿಬಂದು ನನಗೆ ತಿಳಿಸು ನಾವು ಅಪ್ಪಣೆಗೆ ವಿರೋಧವಾಗಿ ನಡೆದದ್ದು ಅವರಿಗೆ ಗೊತ್ತಾದರೆ, ನಮ್ಮ ತಲೆ ತೆಗೆದುಬಿಟ್ಟಾರು!" ಎಂದಳು.

"ಅದೇ ಸರಿ" ಎಂದು ವೆಂಕು ಗೇಟಿನ ಕಡೆಗೆ ಓಡಿದ

ಗೌರಿ ವಸಂತಿಯ ಕೈಯನ್ನು ಹಿಡಿದುಕೊಂಡು ಮಾಳಿಗೆಯ ಮೇಲೆ ಅವಳದೆನಿಸುವ ಆ ಕೋಣೆಗೆ ಕರೆದೊಯ್ದಳು—"ವಸಂತೀ! ನಾನಿಲ್ಲಿ ನರಕಯಾತನೆಯಲ್ಲಿದ್ದೇನೆ. ಈ ವರದನ್, ನನ್ನನ್ನಿಲ್ಲಿ ಸೆರೆಹಾಕಿ, ಅವನನ್ನು ಮದುವೆ ಮಾಡಿಕೊಳ್ಳುವಂತೆ ನಿರ್ಬಂಧಿಸುತ್ತಾನೆ ಹೆಚ್ಚು ಮಾತಾಡಲೂ ಈಗ ಸಮಯವಿಲ್ಲವಲ್ಲಾ! ನಾನಿಲ್ಲಿಂದ ಹೇಗೆ ಪಾರಾಗಲಿ ಹೇಳು ವಸಂತೀ!.... ......."

"ನಾನಿದ್ದೇನೆ. ನೀನೇನೂ ಹೆದರಬೇಡ ಗೌರಿ!—" ಎಂದು ವಸಂತಿಯಿಂದ ಧೈರ್ಯವಾದವನ್ನು ಕೇಳಿ ಗೌರಿಗೆ ಬಹಳ ಆಶ್ಚರ್ಯವಾಯಿತು

ಹಿಂದೆ ಮಿಲಟರಿಯವರು ಆಕ್ರಮಿಸಿಕೊಂಡಾಗ ಭಯದಿಂದ ತರಗೆಲೆಯಂತೆ ನಡುಗಿದ್ದ ವಸಂತಿ, ಎಷ್ಟು ಧೈರ್ಯಶಾಲಿನಿಯಾಗಿದ್ದಾಳೆ!

"—ಅದಿರಲಿ ಗೌರಿ, ಅಂದು ನಿನ್ನನ್ನೂ ಮಿಲಿಟ್ರೀಯವರು ಎಳೆದೊಯ್ದರಲ್ಲಾ! ಇವನ ಕೈಗೆ ಹೇಗೆ ಸಿಕ್ಕಿಬಿದ್ದಿ?" ಎಂದು ವಸಂತಿ ಕೇಳಿದಳು.

"ಅವರ ಕೈಯಿಂದ ಈ ವರದನು ಅವರು ಕೇಳಿದಷ್ಟು ರೂಪಾಯಿ ಕೊಟ್ಟು, ಅಂದೇ ನನ್ನನ್ನು ಬಿಡಿಸಿಕೊಂಡನಂತೆ. ಆಗ ನನಗೆ ಬೋಧವಿರಲಿಲ್ಲ. ಕರಕೊಂಡು ಬಂದು ಇಲ್ಲಿ ಸೆರೆಹಾಕಿ, ಸಿನಿಮಾದಲ್ಲಿ ನಟಿಸು

ವಂತೆ ಮಾಡಿದ. ಈಗ ತನ್ನನ್ನು ಮದುವೆ ಮಾಡಿಕೊಳ್ಳುವಂತೆ ಒತ್ತಾಯ ಮಾಡುತ್ತಿದ್ದಾನೆ! ''

'' ಓಹೊ! ನೀನು ನಟಿಸಿದ ಚಿತ್ರದಲ್ಲಿಯೇ ನಾನೂ ನಟಿಸಿದ್ದೇನೆ ನೀನು ಇಲ್ಲಿರುವುದೊಂದೂ ನನಗೆ ಗೊತ್ತೇ ಆಗಲಿಲ್ಲ. ಈ ದಿನ ಸಿನಿಮಾ ವೃತ್ತವೆಂಬ ಪತ್ರಿಕೆಯನ್ನು ನೋಡಿಯೇ ನನಗೆಲ್ಲಾ ಗೊತ್ತಾಯಿತು. ಗೌರೀ! ಆ ವರದನು ನನಗೂ ದೊಡ್ಡ ಮೋಸ ಮಾಡಿದ್ದಾನೆ. ಎಲ್ಲವನ್ನೂ ಸ್ಪಷ್ಟವಾಗಿ ತಿಳಿಯಬೇಕಂತಲೇ ನಾನೀಗ ಬಂದದ್ದು. ಓಹ್ಹೊ! ಹೀಗೋ ಸಂಗತಿ? ಗೌರಿ! ನೀನು ಅವನನ್ನು ಮದುವೆ ಮಾಡಿಕೊಳ್ಳಲು ಒಪ್ಪಲಿಲ್ಲ ನಾನೆ? ಒಪ್ಪಿದ್ದರೆ ಹೇಳು ನನ್ನ ಮುಂದೆ! "

'' ಇಲ್ಲವೇ ಇಲ್ಲ! ದೇವರ ಸಾಕ್ಷಿ! ನನ್ನ ವಿಷಯ ನಿನಗೆ ಗೊತ್ತಿಲ್ಲವೆ? ವರದನನ್ನು ನನ್ನ ಆಪದ್ಬಾಂಧವನಾದ ಅಣ್ಣನೆಂದೇ ತಿಳಿದಿದ್ದೆ. ಇತ್ತೀಚೆಗೇ ಅವನ ಈ ಹೃದ್ಗತವು ಬಯಲಾಯಿತು! "

ಆಗ ಶೆಲ್ಲಂ ಉಪ್ಪರಿಗೆಯ ಮೆಟ್ಟಿಲಮೇಲೆ ಬಂದು, '' ಓ ಅಮ್ಮ! ಬೇಗನೇ ಬಂದು ಬಿಡಿ! ಅವರು ಬಂದಿರುವರು! '' ಎಂದು ಅವಸರ ಪಡಿಸಿದಳು

ಗೌರಿಯೆಂದಳು:—'' ನೋಡಿದಿಯಾ? ಹೆಚ್ಚು ಮಾತಿಗೂ ಈ ಮಾರಿಗಳ ಬಿಡುವುದಿಲ್ಲ ವಸಂತಿ! ನನ್ನನ್ನು ಇಲ್ಲಿಂದ ಪಾರು ಮಾಡುವ ಭಾರ ನಿನ್ನದು. ಫಿಲಿಂನಲ್ಲಿ ನನ್ನ ಭಾಗದ ನಟನೆಯೂ ಮುಗಿಯಿತು. ನೀನು ಹೋಗಿ ಗಜವದನರಾಯರನ್ನು ಇಲ್ಲಿಗೆ ಕರೆದುಕೊಂಡು ಬಂದು, ನನ್ನನ್ನು ಕರೆದೊಯ್ಯಿಸು. " ಎಂದಳು

'' ಅಷ್ಟು ತಡವೇಕೆ ಗೌರಿ? ಈಗಲೇ ನೀನು ಇಲ್ಲಿಂದ ಹೋಗುವಿಯಾ ಹೇಳು? "

ಗೌರಿ ಆಶ್ಚರ್ಯದಿಂದ ಕಣ್ಣರಳಿಸಿ—'' ಹೇಗೆ? "

ವಸಂತಿಗೆ ಮಿಂಚಿನಂತೆ ಏನೋ ಒಂದು ಯುಕ್ತಿ ಹೊಳೆದಿತ್ತು. ಒಮ್ಮೆ ಕತ್ತು ತಿರುಗಿಸಿ ಹಿಂದೆ ನೋಡಿದಳು. ಶೆಲ್ಲಂ ಮೆಟ್ಟಿಲಲ್ಲೇ ನಿಂತು ಅವರನ್ನು ನೋಡುತ್ತಿದ್ದಳು ''ಇದೋ ಬಂದೆ! ಏನೂ ಹೆದರಬೇಡ" ಎಂದು ಶೆಲ್ಲಂಳಿಗೆ ಧೈರ್ಯ ಹೇಳಿದಳು ವಸಂತಿ.

ಭಯ ಶೀಲೆಯಾದ ಶೆಲ್ಲಂ ಪುನಃ ಕೆಳಗೆ ಹೋದಳು.

ಕೂಡಲೆ ವಸಂತಿ, ಗುಸುಗುಸನೆ ಗೌರಿಗೆ ಏನೇನೋ ಹೇಳಿದಳು.

"ಅಯ್ಯೋ! ಹಾಗೆ ಮಾಡಿದರೆ ನೀನು ಆ ದುರುಳನ ಕೈಗೆ ಸಿಕ್ಕಿ ಬೀಳುವಿಯಲ್ಲಾ!" ಎಂದಳು ಗೌರಿ

ವಸಂತಿ ಒಮ್ಮೆಲೆ ದುಃಖ ಸದ್ಗದಿತೆಯಾಗಿ,—"ಅಯ್ಯೋ! ಅದೇನು ಕೇಳುತ್ತಿ? ಇನ್ನು ನಾನು ಸಿಕ್ಕಿಬೀಳುವುದೇನಿದೆ ಮಣ್ಣು? ಮೊತ್ತ ಮೊದಲು ನಾನು ಫಿಲಿಂನಲ್ಲಿ ನಟಿಸಬೇಕೆಂಬ ಆತುರಕ್ಕೆ ಬಿದ್ದೆ. ಹಂಪೆಯಲ್ಲಿಯೇ ಅವನಿಗೆ ನಾನು ವಿಳಾಸ ಕೊಟ್ಟಿದ್ದೆ. ನಾನು ಮದರಾಸಿಗೆ ಬಂದ ಮರುದಿನವೇ ಅವನು ನಮ್ಮಲ್ಲಿಗೆ ಬಂದು, ನನ್ನನ್ನು "ಮಾನವತಿ" ಯಲ್ಲಿ ನಟಿಸಲು ಒಪ್ಪಂದ ಮಾಡಿಸಿಕೊಂಡುಬಿಟ್ಟ. ನನ್ನ ತಂದೆಯಿಂದ ಅನುಜ್ಞೆಯ ಕಾಗದವೂ ನನಗೆ ಬಂದಿತ್ತು ನನ್ನ ಮಾವನೂ ಸಂತೋಷದಿಂದ ಅನುಮತಿಯಿತ್ತರು ನಾನು ಆಗಾಗ ಷೂಟಿಂಗಿಗೆ ಇಲ್ಲಿಗೆ ಬರುತ್ತಾ ಹೋಗುತ್ತಾ ಇದ್ದರೂ, ನೀನು ಇಲ್ಲಿಯೇ ಇರುವುದು ನನಗೆ ಗೊತ್ತೇ ಆಗಲಿಲ್ಲ. ಏನು ಗೌರಿ? ವರದನು ನನ್ನನ್ನು ತನ್ನ ಮೋಹದ ಬಲೆಯಲ್ಲಿಯೂ ಸಿಕಿಸಿ ಹಾಕಿದ. ನನ್ನನ್ನೇ ವಿವಾಹ ಮಾಡಿಕೊಳ್ಳುವೆನೆಂದು ಮಾತು ಕೊಟ್ಟ. ನಂಬಿದೆ ನಾನು ಈಗ ಇಗೋ ಈ ಪತ್ರಿಕೆಯಲ್ಲಿ ಬಂದ ವಿಪರೀತ ವಾರ್ತೆ ನೋಡಿದೆಯಾ? ಇದರ ಸತ್ಯಾಸತ್ಯತೆಯನ್ನು ಪ್ರತ್ಯಕ್ಷ ಕೇಳಿ ನೋಡಬೇಕೆಂತಲೇ ನಾನಿಂದು ಬಂದೆ ಯಾವಾಗಲೂ ನನಗೆ ವರದನ ಭೆಟ್ಟಿ ಆಫೀಸಿನಲ್ಲಿಯೇ ಆಗುತ್ತಿತ್ತು ಅಲ್ಲಿ ಅವನಿರಲಿಲ್ಲ ಸುಧಾನೊಡನೆ ವಿಚಾರಿಸಲಾಗಿ ಅವನ ಪ್ರೈವೇಟು ಬಂಗಲೆಯಲ್ಲಿದ್ದಾನು ಎಂದಳು ಆಗ ತಾನೇ ನನಗೆ ಗೊತ್ತಾಯಿತು. ಇಲ್ಲಿ ಅವನಿಗೊಂದು ಪ್ರತ್ಯೇಕ ಮನೆಯು ಉಂಟೆಂದು. ನಿನ್ನ ವಿಷಯ ಕೂಡಾ ನಾನು ಸುಧಾನೊಡನೆ ಕೇಳಿದೆ. ಅದು ಯಾವಗೌರಿಯೋ ಗೊತ್ತಿಲ್ಲವೆಂದಳು ಆಹಾ! ಎಲ್ಲರೂ ವರದನ ಕೈಯಾಳುಗಳೇ! ನನಗೆ ಈಗೆಲ್ಲಾ ಗೊತ್ತಾಯಿತು. ಇಂದು ಎರಡರಲ್ಲೊಂದು ಇತ್ಯರ್ಥ ಮಾಡಿಕೊಂಡೇ ನಾನು ಬರುವೆನು. ಬಾ ಹೋಗೋಣ. ನನ್ನ ಮಾವ ಗಜವದನರಾಯರಲ್ಲಿಗೇ ಸದ್ಯ ಹೋಗಿರು ಅವರು ತುಂಬಾ ಒಳ್ಳೆಯವರು. ನಿನ್ನನ್ನು ಬಿಟ್ಟು ಕಾರು ತೆಗೆದುಕೊಂಡು ಬರುವಂತೆ ನಾನ ಡ್ರೈವರಿಗೆ ಹೇಳುತ್ತೇನೆ. ಸರಿ ಇಲ್ಲಿ ನಿನ್ನದೇನೂ ಸಾಮಾನಿಲ್ಲವಷ್ಟೆ?"

" ಅದೇನೂ ಇಲ್ಲ. ಪುಣ್ಯಕ್ಕೆ ನಾನೀಗ ಉಟ್ಟುಕೊಂಡಿರುವುದು ನನ್ನದೇ ಆಗಿದೆ....ಆದರೆ........"

" ಬಾ. ಬಾ.--ತಡಮಾಡಬೇಡ ನಿನ್ನ ಬಟ್ಟೆ ಬರೆಗಳ ಟ್ರಂಕು ಮಾವನಲ್ಲಿದೆ " ಎನ್ನುತ್ತಾ ವಸಂತಿ ಗೌರಿಯ ಕೈ ಹಿಡಿದು ಹೊರಟಳು. ಇಬ್ಬರೂ ಮೆಟ್ಟಿಲಿಳಿಯಲಾರಂಭಿಸಿದರು.

ಆಗ ಗೌರಿ- " ವಸಂತಿ ! ಗೇಟಿನಲ್ಲಿರುವ ಘೂರ್ಕರು ಬಿಡುವರೆ?"

" ಬಿಡುವರು. ನಾನು ಆಗಾಗ ಈ ಸ್ಟುಡಿಯೋಗೆ ಬರುತ್ತಾ ಹೋಗುತ್ತಾ ಇರುವುದರಿಂದ ನನ್ನ ಕಾರಿಗೆ ಅನುಮತಿಯಿದೆ" ಇಬ್ಬರೂ ಕೆಳಗಿಳಿದು, ಕಾರಿನ ಬಳಿಗೆ ಬಂದರು.

ಒಳಗೆ ಹಾಲಿನಲ್ಲಿ ಎಲೆಕ್ಟ್ರಿಕ್ ದೀಪವು ಉರಿಯುತ್ತಿತ್ತು ಶೆಲ್ಲಂ ಜಗುಲಿಯಲ್ಲಿ ನಿಂತು ನೋಡುತ್ತಿದ್ದಳು. ಒಳಗಿನ ಬೆಳಕು ಬ್ಲ್ಯಾಕ್ ಔಟ್ ಸೂತ್ರದಂತೆ, ಒಳಗೇ ಅಡಗಿ ಕೊಂಡಿದ್ದುದರಿಂದ, ಕಾರಿನ ಮೇಲೂ ಅದರ ಬಳಿಯಲ್ಲಿ ನಿಂತವರ ಮೇಲೂ ಕತ್ತಲೆ ಕವಿದಿತ್ತು.

ವಸಂತಿ ಆ ಕಾರಿನಲ್ಲಿ ಆರೋಹಿಸುವವಳಂತೆಯೂ ಗೌರಿ ಅವಳನ್ನು ಕಳುಹಿಸಿ ಕೊಡುವವಳಂತೆಯೂ ಶೆಲ್ಲಂಳಿಗೆ ತೋರುವಂತೆ ಅವರ ನಟನೆಯಿತ್ತು.

ಕಾರಿನೊಳಗೆ ಅರ್ಧ ಏರಿದ ವಸಂತಿ ಡ್ರೈವರನ ಕಿವಿಯಲ್ಲಿ— " ಇಕೋ- ಈ ನನ್ನ ಗೆಳತಿ ಕಾರಲ್ಲಿ ಕೂಡುತ್ತಾಳೆ. ಇವಳನ್ನು ಮನೆಯಲ್ಲಿಳಿಸಿ ಪುನಃ ಇಲ್ಲಿಗೆ ಬಾ ಅವಳು ಏರಿದ ಕೂಡಲೇ ಹೊರಡು. ಏನೂ ಕೇಳಬೇಡ " ಎಂದಂದು ಕಾರಿನಲ್ಲಿ ಬರುವವಳಂತೆ ನಟಿಸಿ, ಥಕ್ಕನೆ ಹೊರಗೆಬಂದು—" ಗೌರಿ ! ನನ್ನ ಪುಸ್ತಕ ಉಪ್ಪರಿಗೆಯಲ್ಲಿಯೇ ಮರೆತು ಹೋಯಿತು.! " ಎಂದಳು.

ಕೂಡಲೇ ಗೌರಿ ಶೆಲ್ಲಂಳನ್ನು ನೋಡಿ,—" ಇವಳ ಕೈಯಲ್ಲೆಂದು ಪುಸ್ತಕವಿತ್ತಲ್ಲಾ ಅದು ಮಾಳಿಗೆಯ ಮೇಲಿದೆ· ಕೊಂಚ ತಾರೇ." ಎಂದು ತಮಿಳಿನಿಂದಲೇ ಹೇಳಿದಳು.

" ತೆರಿಯುಂ, ತೆರಿಯುಂ ! ಇದೋ ಕೊಂಡುವರೇಂ" ಎನ್ನುತ್ತ ಶೆಲ್ಲಂ ಮಾಳಿಗಿಯ ಮೇಲೇರಿದಳು.

ಅದೇ ಸಮಯದಲ್ಲಿ ವಸಂತಿಗೆ ಬದಲು ಗೌರಿ ಕಾರಿನೊಳಗೇರಿ ಕುಳಿತು ಬಿಟ್ಟಳು. ಕಾರೂ ಕೂಡಲೇ 'ಸ್ಟಾರ್ಟ್'ಗಿ ಸರ್ರನೆ ಹೊರಟು ಹೋಯಿತು.

ವಸಂತಿ ಹಿಂದಿರುಗಿ ಮಾಳಿಗಿಯ ಮೆಟ್ಟಿಲನ್ನು ಏರಲಾರಂಭಿಸಿದಳು. ಏರುತ್ತಿದ್ದಾಗ ಶೆಲ್ಲಂ ಪುಸ್ತಕದೊಂದಿಗೆ ಇಳಿದುಬರುತ್ತ— "ಪೋಯಿಟ್ ವಿಟ್ಯಾಂಗಳೇ !" ಎಂದಳು.

ಏರಿಬರುತ್ತಿರುವುದು ಗೌರಿ ಎಂದೇ ಅವಳ ಭಾವನೆ ವಸಂತಿ ಸಣ್ಣದನಿಯಲ್ಲಿ— "ಹುಂ. ಪೋಯಿಟ್ ವಿಟ್ಟಂಗ ವರದನ್ ವರ್‍ರಾ ಸಲೇ ಇರುಂದದು" ಎನ್ನುತ್ತಾ ಪುಸ್ತಕವನ್ನು ಅವಳ ಕೈಯಿಂದ ಕಿತ್ತುಕೊಂಡು ಮೇಲೆ ಹೋದಳು ಕತ್ತಲೇಕವಿದಿರುವ ಆ ಮೆಟ್ಟಲಿನ ಭಾಗದಲ್ಲಿ. ಏನೂ ಸಂಶಯುಬಾರದೆ ಶೆಲ್ಲಂ ಅವಳ ಪಾಡಿಗೆ ಮೆಟ್ಟಿಳಿದು, ಅವಸರವಸರವಾಗಿ ಬಾಗಿಲು ಚಿಲಕ ಹಾಕಿಕೊಂಡಳು.

"ವರದನ್ ಬರುವಂತಿದೆ" ಎಂದು ವಸಂತಿ ಅವಳನ್ನು ಹೆದರಿಸಿಬಿಟ್ಟಿದ್ದಳು ಎಲ್ಲಿ ಬಂದನೋ ಎಂದು ಶೆಲ್ಲಂ ಜಗಲಿಯಲ್ಲಿ ನಿಂತು ಹೊರಗೆ ನೋಡುತ್ತಿದ್ದಳು. ಆಗ ಗೇಟಿನಲ್ಲಿ ನೋಡುತ್ತಾನಿಂತಿದ್ದ ವೆಂಕೂ, ವಸಂತಿಯ ಕಾರು ಹೊರಟು ಹೋದುದನ್ನು ನೋಡಿ, ಭಯವುನೀಗಿ ಮನೆಗೆ ಹೊರಟುಬಂದನು. ಬಂದವನು ಶೆಲ್ಲಂಳನ್ನು ಕುರಿತು,— "ಶೆಲ್ಲಂ ! ಈಗ ಬಂದಳಲ್ಲಾ ವಸಂತೀ ಅಂತ ಇವಳು ಈ ಮನೆಗೆ ಎಲ್ಲಿಯಾದರೂ ಬಂದರೆ, ಗೌರಮ್ಮನ ಕಣ್ಣಿಗೆ ಬೀಳಿಸದಂತೆ ಜಾಗ್ರತೆಯಿಂದಿರಬೇಕು ಎಂದು ರಾಯರು ಪ್ರತ್ಯೇಕವಾಗಿಯೇ ಹೇಳಿದ್ದಾರೆ ನನಗೆ ಇದರಲ್ಲಿ ಏನೋ ಗುಟ್ಟಿದ್ದೀತು ಇಲ್ಲದಿದ್ದರೆ ಅವಳು ಬರುತ್ತಲೇ ಇವಳು ಅಷ್ಟು ಆತುರ ಪಡುತ್ತಿದ್ದಳೆ ? ಏನೇನು ಮಾತಾಡಕೊಂಡಿರೋ ಏನು ಕರ್ಮವೋ ! ಅವರ ಭಾಷೆ ಒಂದು ಗೊತ್ತಾಗೋದಿಲ್ಲ ನನಗೆ ! ಪುಣ್ಯಕಾಲ ! ರಾಯರಿಲ್ಲದ ವೇಳೆಯಲ್ಲಿಯೇ ಬಂದಳಲ್ಲ ! —ಬಂದು ನೋಡಿದರೆ ರಾಯರಿರುವ ವೇಳೆಯಲ್ಲಿ ಹೀಗಾಗಿದ್ದರೆ ಅವರ ಪಾಡು ! ಏನೂ ಮಾಡಿಕೊಳ್ಳುತ್ತಿದ್ದರು ! ದೇವರೆ ! ಇಂದಿನ ಈ ಸಂಗತಿ ಅವರಿಗೆ ಗೊತ್ತಾಗದ ಹಾಗಿರಲಿ !" ಎಂದು ಹಳಹಳಿಸಿ ಕೊಂಡನು

ಶೆಲ್ಲಂ ಹೇಳಿದಳು—"ಏನು ಕರ್ಮವೋ! ಈ ರಾಯರು ಬೇಡದ ಕಿತಾಪತಿಯನ್ನೆಲ್ಲ ಹಚ್ಚಿಕೊಳ್ಳುತ್ತಾರೆ! ಇಷ್ಟವಿಲ್ಲದವಳನ್ನು ಮದುವೆ ಮಾಡಿಕೋ ಅಂತ ಯಾಕೆ ಒತ್ತಾಯ ಮಾಡಬೇಕು? ಪಾಪ! ಒಳ್ಳೆಯವಳಾಗಿ ಕಾಣುತ್ತಾಳೆ ಗೌರಮ್ಮ! ಇವತ್ತು ರಾತ್ರಿ ರಾಯರು ಗೌರಮ್ಮನ ಕೋಣೆಯೊಳಗೇ ಮಲಗುತ್ತಾರೆ! ದೇವರೆಗತಿ"

ವೆಂಕೂ ನಗುತ್ತ "ಸರಿ! ಅಷ್ಟಾದ ಮೇಲೆ ಇವರನ್ನೆ ಮದುವೆ ಮಾಡಿಕೊಳ್ಳಲೇಬೇಕು ಮತ್ತೆ! ಭಲೆ! ಒಳ್ಳೆಯ ಉಪಾಯವಿದು! ಭಲೇ ಮಝಾ!"

"ಅವರು ಬರುವುದರೊಳಗೆ ಗೌರಮ್ಮನ ಊಟವಾಗಿ ಹೋಗಲಿ!" ಎಂದು ಶೆಲ್ಲಂ ಅಡುಗೆ ಮನೆಯ ಕಡೆಗೆ ಹೋಗಿ, ಮಾಳಿಗೆಯ ಮೇಲೆ ಗೌರಮ್ಮನಿಗೆ ಊಟ ಒಯ್ದಿಡುವಂತೆ ಅಯ್ಯರ್‍ರಿಗೆ ಹೇಳಿದಳು.

ಅಡುಗೇ ಅಯ್ಯರು ಊಟದ ಪದಾರ್ಥಗಳನ್ನೆಲ್ಲ ಎತ್ತಿಕೊಂಡು ಮಾಳಿಗೆಯ ಮೇಲೆ ಹೋಗಿ, ವಾಡಿಕೆಯ ಕೋಣೆಯೊಳಗೆ, ವಾಡಿಕೆಯಂತೆ ಮುಚ್ಚಿಟ್ಟು ಕೆಳಗೆ ನಡೆದನು. ಹೀಗೆ ಮುಚ್ಚಿಟ್ಟಿದ್ದನ್ನು ಗೌರಿಯೇ ಬಡಿಸಿಕೊಂಡು ಉಂಡು ಕೈತೊಳೆದ ಮೇಲೆ, ಶೆಲ್ಲಂ ಎಲ್ಲವನ್ನು ಎತ್ತಿಕೊಂಡು ಹೋಗಿ ಶುದ್ಧಿಮಾಡುವುದು ಕ್ರಮ ಸುಮಾರು ಅರ್ಧ ಗಂಟೆ ತಾಳಿ ಶೆಲ್ಲಂ ಹೋಗಿ ನೋಡಿದಾಗ ಮುಚ್ಚಿಟ್ಟ ಭೋಜನವು ಹಾಗೆಯೇ ಇತ್ತು. ಗೌರಿ ಉಂಡಿರಲಿಲ್ಲ. ಮಂಚದ ಮೇಲೆ ಮುಸುಕು ಹಾಕಿಕೊಂಡು ಮಲಗಿದ್ದವಳನ್ನು ಶೆಲ್ಲಂ ಎಷ್ಟೋ ಕರೆದು ನೋಡಿದಳು. ವಸಂತಿ ಮಾತೇ ಆಡಲಿಲ್ಲ.

ಅಷ್ಟರಲ್ಲಿ ಜೀಪ್ ಕಾರು ಆ ಮನೆಯ ಮುಂದೆ ಬಂದು ನಿಂತಸದ್ದಾಯಿತು

## ೩೪

ಕಾರಿನಿಂದಿಳಿದ ವರದನು ಸೀದಾ ಮಾಳಿಗೆಯನ್ನೇರಿದನು ಆಗ ಶೆಲ್ಲಂ ಆವನಿಗಿದಿರಾಗಿ—"ಗೌರಮ್ಮನಿಗೆ ಸೌಖ್ಯವಿಲ್ಲವೋ ಏನೊ. ಮುಸುಕುಹಾಕಿ ಗಮ್ಮಂತ ಮಲಗಿದ್ದಾರೆ. ಊಟಕೊಡ ಮಾಡಿಲ್ಲ" ಎಂದಳು.

ಆ ರೋಗದ ಕಾರಣವು ವರದನಿಗೆ ಗೊತ್ತಾಗಿ—"ಓಹೊ ! ನಾನು ವಿಚಾರಿಸುತ್ತೇನೆ. ನೀನು ಹೋಗು" ಎಂದು ಶೆಲ್ಲಂಳನ್ನು ಕಳುಹಿಸಿ ಬಿಟ್ಟನು.

"ಏನು ಗೌರೀದೇವಿ ! ನಾನೀದಿಃ ಇಲ್ಲಿಯೇ ಮಲಗುವೆನೆಂದು ಹೇಳಿದಕ್ಕೆ ಈ ವೇಷವೆ!" ಎನ್ನುತ್ತ ವರದನು ಮಂಚದ ಬಳಿಗೆ ಬಂದು, ಮಲಗಿದ್ದವಳ ಹೊದೆಯುರುವೆಯನ್ನು ಎತ್ತಿಹಾಕಿ "ಹಾ !" ಎಂದು ಪೆಟ್ಟಬಿದ್ದನು ! ಅವಾಕ್ಕಾದನು !

ವಸಂತಿ ಅವನನ್ನು ಕಣ್ಕುತ್ತಿ ನೋಡುತ್ತಾ ಎದ್ದು ಕುಳಿತಳು.

"ವಸಂತಿ ! ನೀನಿಲ್ಲಿ ಹೇಗೆ ಬಂದಿ ? ಗೌರಿ ಎಲ್ಲಿ ?" ವರದನು ಕಟ್ಟುಚ್ಚಾವಿಟ್ಟು ಕೇಳಿದನು.

"ಗೌರಿ - ಗೌರಿಯೇಕೆ ? ಇನ್ನು ಗೌರಿಗೂ ನಿಮಗೂ ಏನೂ ಸಂಬಂಧವಿಲ್ಲ. ನೀವು ನನಗೆ ಕೊಟ್ಟ ಮಾತೇನು ? ಈಗ ಇಲ್ಲಿ ಮಾಡುತ್ತಿರುವ ಕೆಲಸವೇನು ?". ವಸಂತಿ ಬಿಸಿ ಬಿಸಿಯಾಗಿ ಕೇಳಿದಳು

"ಏನು !" ಎಂದೆಂದು ವರದನು ಕರ್ಕಶಸ್ವರದಿಂದ "ಶೆಲ್ಲಂ ! ಶೆಲ್ಲಂ ! ಏ ವೆಂಕೂ !—" ಎಂದು ಕೂಗಿದನು ಶೆಲ್ಲಂ, ವೆಂಕೂ, ಅಡುಗೆ ಅಯ್ಯರು ಎಲ್ಲರೂ ಧಡಧಡನೆ ಮಾಳಿಗೆಯ ಮೇಲೇರಿ ಬಂದರು. ಬಂದು ಸ್ತಬ್ಧರಾಗಿ ನಿಂತರು.

ಶೆಲ್ಲಂ ವೆಂಕೂಗಳಿಗೆ ಫಕ್ಕನೆ ಉತ್ತರಿಸಲು ನಾಲಗೆಯೇ ಏಳದೆ ಹೋಯಿತು.

"ಗೌರಿ ಎಲ್ಲಿ ?" ವರದನು ಕೂಗಿ ಕೇಳಿದನು

ಹೆದರುತ್ತ ಹೆದರುತ್ತ ವೆಂಕೂ ನಡೆದ ಸಂಗತಿಯನ್ನು ಎಳೆದೆಳೆದು ಹೇಳಿ ಮುಗಿಸಿದನು.

ವರದನು ವಸಂತಿಯ ಕಡೆಗೆ ತಿರುಗಿದನು. ಆಗ ವಸಂತಿ,— "ಸುಮ್ಮನೆ ಕೆಲಸದಾಳುಗಳನ್ನು ಬಯ್ದು ಪ್ರಯೋಜನವಿಲ್ಲ ಗೌರಿ ನನ್ನ ಗೆಳತಿ ಅವಳ ಇಚ್ಛೆಗೆ ವಿರೋಧವಾಗಿ ನೀವು ಅವಳನ್ನು ಇಲ್ಲಿ ಸೆರೆಹಾಕಿದ್ದೀರಿ. ಅದ್ದರಿಂದ ಸಮಯ ನೋಡಿ ನನ್ನ ಮಾವನ ಕಾರಿನಲ್ಲಿಯೇ ಅವಳನ್ನು ಕಳುಹಿಸಿ ಬಿಟ್ಟಿದ್ದೇನೆ. ಅವಳಿಗೂ ನಿಮಗೂ

ವಿವಾಹ ವಾಗುವುದೆಂದು ಈ ಪತ್ರಿಕೆಯಲ್ಲಿ ಬಂದ ಸಮಾಚಾರವು ನಿಜವೆ?'' ಎಂದು ಕೇಳಿದಳು.

''ಹೌದು. ಅದರಿಂದೇನಾಯಿತು?''

''ಏನಾಯಿತೆಂದು ನಾನೇ ಹೇಳಬೇಕೆ?''

''ಹೌದು ನಿನ್ನನ್ನೂ ಮಾಡಿಕೊಳ್ಳುತ್ತೇನೆ! ಅವಳನ್ನೂ ಮಾಡಿಕೊಳ್ಳುತ್ತೇನೆ'' ಎಂದಂದು ವರದನು, ಆಳುಗಳ ಕಡೆಗೆ ತಿರುಗಿ, ''ನಡೆಯಿರಿಲ್ಲಿಂದ! ಕೆಲಸಕ್ಕಾಗದ ಕತ್ತೆಗಳು!'' ಎಂದು ಒದರಿದನು

ಅವರೆಲ್ಲರೂ ಬಾಗಿಬಾಗಿ ಕುಗ್ಗಿಕೊಂಡು ಕೆಳಕ್ಕೆ ಹೋದರು. ವಸಂತೀ—ವರದರಿಬ್ಬರೇ ಉಳಿದರು.

ವಸಂತಿ ವರದನ ಮುಖವನ್ನೇ ಕೂರಿಟ್ಟು ನೋಡುತ್ತಿದ್ದಳು. ವರದನೂ ಹುಬ್ಬು ಗಂಟಿಕ್ಕಿಕೊಂಡು ಅವಳನ್ನೇ ನೋಡುತ್ತ ಕುರ್ಚಿಯಲ್ಲಿ ಕುಳಿತನು

ನೋಡುತ್ತಿದ್ದಂತೆಯೇ ವಸಂತಿಯ ಕಣ್ಣಿನಲ್ಲಿ ನೀರು ತುಂಬಿ, ಮುತ್ತುಮುತ್ತಾಗಿ ಕೆಳಗುರುಳತೊಡಗಿತು. ಅವಳು ಗದ್ಗದ ಸ್ವರದಿಂದ ''ನೀವು—ನೀವು ನನಗೆ ಹೀಗೂ ಮೋಸ ಮಾಡಬಹುದೆ? ನನ್ನನ್ನು ನಂಬಿಸಿ—ಅಯ್ಯೋ! ಇನ್ನು ನನ್ನ ಗತಿ ಏನು?'' ಎಂದು ಅಳಲಾರಂಭಿಸಿದಳು.

ಅವಳು ಅಳುವುದನ್ನು ನೋಡಿ ವರದನ ಮನಸ್ಸು ಕರಗಿತು. ನಿಧಾನ ದನಿಯಿಂದ—''ಅಳುವುದೇಕೆ ವಸಂತಿ? ನೀನು ನನ್ನನ್ನು ಕೇಳದೆ, ನನ್ನ ಮನೆಯೊಳಗೆ ಹೊಕ್ಕು, ಹೀಗೆ ಕಪಟಾಧಿಕಾರವನ್ನು ಚಲಾಯಿಸಿ, ಗೌರಿಯನ್ನು ಕಳುಹಿಸಿದ್ದು ಸರಿಯೆ? ನಾನೇನೂ ಅವಳನ್ನು ಮದುವೆ ಮಾಡಿಕೊಳ್ಳುವುದಿಲ್ಲ ಬಿಡು ಪತ್ರಿಕೆಯಲ್ಲಿ ಬಂದದ್ದು ಪೋಲಿಸುದ್ದಿ, ಅವಳನ್ನು ಫಿಲಿಂನಲ್ಲಿ ನರ್ತಿಸಲಿಕ್ಕಾಗಿಯೇ ನಾನು ಇಟ್ಟುಕೊಂಡದ್ದು. ಅವಳು ಒಪ್ಪದೆ ಓಡಿಹೋಗುವ ಹವಣಿಕೆಯಲ್ಲಿದ್ದುದರಿಂದಲೇ, ಹೀಗೆ ರಹಸ್ಯವಾಗಿ ಬಂಧನದಲ್ಲಿಟ್ಟಿದ್ದೆ. ಸರಿ. ಹಕ್ಕಿ ಹಾರಿ ಹೋಯಿತು ಇನ್ನು ನಿನ್ನನ್ನು ಜಜ್ಜಿ ಏನು ಫಲ? ಹೋದವಳು ಇನ್ನು ಸಿಕ್ಕುವಳೆ?''

"ಸಿಕ್ಕದಿದ್ದರೆ ಬೇಡ. ಒಪ್ಪಿಗೆ ಇಲ್ಲದವಳನ್ನು ಬಲವಂತ ಮಾಡು ವುದೇಕೆ!"

"ಅವಳ ನರ್ತನ ಅಷ್ಟು ಅಪೂರ್ವವಾಗಿದೆ ವಸಂತಿ!"

"ಸ್ವಲ್ಪ ಅಭ್ಯಾಸವಾದರೆ ನಾನೂ ಹಾಗೆಯೇ ನರ್ತಿಸಿಯೇನು!"

"ಸರಿ. ಇನ್ನೇಕೆ ಅವಳ ಮಾತು?"

"ಸರಿ. ನನಗೇನು ಹೇಳುತ್ತೀರಿ?"

"ನಿನಗೆ ಹೊಸತಾಗಿ ಏನೂ ಹೇಳಲಿಕ್ಕಿಲ್ಲವಲ್ಲ?'

"ಹಾಗಾದರೆ, ನಿಮ್ಮ ಮಾತಿನ ಮೇಲೆ ನನಗೆ ನಂಬುಗೆಯಾಗ ಬೇಕಾದರೆ ಇನ್ನು ನಾವು ತಡಮಾಡಬಾರದು ತಂದೆಯನ್ನು ಇಲ್ಲಿಗೆ ಬರಲು ಮಾವನಿಗೆ ಹೇಳಿ ಕಾಗದ ಹಾಕಿಸುತ್ತೇನೆ. ಬೇಗದಲ್ಲಿಯೇ ನಮ್ಮ ಮದುವೆಯಾಗಿ ಹೋಗಬೇಕು"

"ಆಗಲಿ ಆದರೆ ಈಗಲೇ ನೀನು ನಮ್ಮೊಳಗಿನ ಭರವಸೆಗಳನ್ನು ಬಯಲುಪಡಿಸಬೇಡ ಏಕೆಂದರೆ ನನಗೀಗ ತುಂಬಾ ಕೆಲಸವಿದೆ. ಈ ಮಾಸವಷ ಚಿತ್ರ ಪೂರಾ ಮುಗಿಯಲಿ ಆ ಮೇಲೆ ನಾನು ಹೇಳುತ್ತೇನೆ"

"ಹಾಗಾದರೆ, ಈ ಸಿನಿಮಾವೃತ್ತ ಪತ್ರಿಕೆಗೆ ಒಂದು ತಿದ್ದುಪಡಿ ಯನ್ನು ಬರೆದು ಕಳುಹಿಸಬೇಕು ಮದುವೆಯ ಸುದ್ದಿಯಲ್ಲಿ ಗೌರಿ ಎಂದಿದ್ದುದು ತಪ್ಪೆಂದೂ, 'ವಸಂತಿ'ಯೊಂದಿಗೆ ವರದರಾಯರ ವಿವಾಹ ವೆಂದೂ ತಿದ್ದುಪಡಿ ಬರೆದು ಕಳುಹಿಸುವಿರಾ? ಅಲ್ಲದಿದ್ದರೆ ನಾನೇ ಕಳು ಹಿಸಲೆ?"

"ನಾನೇ ಕಳುಹಿಸುತ್ತೇನೆ ನಾಳೆಯೇ ಕಳುಹಿಸುತ್ತೇನೆ"

ಅಷ್ಟರಲ್ಲಿ ವಸಂತಿಯನ್ನು ಕರೆದೊಯ್ಯಲು ಅವಳ ಮಾವನ ಕಾರು ಪುನಃ ಬಂದಿತು. ವರದನು ಬೇಗನೇ ಅವಳನ್ನು ಮದುವೆ ಮಾಡಿ ಕೊಳ್ಳುವ ಏರ್ಪಾಡಿಗೆ ಬರುವೆನೆಂದು ಭರವಸೆಕೊಟ್ಟು, ಸಮಾಧಾನ ಮಾಡಿ ಮೆಲ್ಲನೆ ಕಳುಹಿಸಿಬಿಟ್ಟನು. ಮೋಹಮುಗ್ಧೆ ವಸಂತಿ ನಂಬಿಯೇ ನಂಬಿದಳು.

ಆದರೆ ವರದನಿಗೆ ಅವಳನ್ನು ವಿವಾಹ ಮಾಡಿಕೊಳ್ಳುವ ಯೋಚನೆ ಎಲ್ಲಿಯದು? ವಿವಾಹದ ಗೊಡವೆಯೇ ಇಲ್ಲದೆ, ಬಹಳ ಸ್ತ್ರೀಲೋಲನಾದ

ಅವನಿಗೆ, ಗೌರಿಯನ್ನು ಮಾತ್ರ ವಿವಾಹಮಾಡಿಕೊಂಡು, ನಾಟ್ಯಕಲೆಯಲ್ಲಿ ಹೊಸ ಜ್ಯೋತಿಯನ್ನು ಬೆಳಗಿಸಿಕೊಂಡು, ದೇಶವಿದೇಶಗಳಿಗೆಲ್ಲಾ ವಿಜಯಯಾತ್ರೆ ಹೊರಟು, ಧನವನ್ನೂ ಕೀರ್ತಿಯನ್ನೂ ಗಳಿಸಿಕೊಂಡು ಮೆರೆಯಬೇಕೆಂಬ ಅನಿವಾರ್ಯವಾದೊಂದು ಮಹತ್ವಾಕಾಂಕ್ಷೆ ಮೂಡಿ ಬಿಟ್ಟಿತ್ತು. ಆ ಹೆಬ್ಬಯಕೆಯ ಗಿಡ ಕುಡಿಮೊಳಕೆಯಲ್ಲಿಯೇ ಕಮರಿ ಹೋಗುವಂತಾಯಿತೀಗ ಅಯ್ಯೋ! ಅವನ ಮನಸ್ಸಿನೊಳಗಿನ ವ್ಯಥೆಯನ್ನು ಏನೆಂದು ಹೇಳೋಣ !

ಇನ್ನು ಆ ಗೌರಿಯನ್ನು ಹಿಡಿಯಲಿಕ್ಕಾದೀತೆ ? ಗೌರಿ ಆಗಲೇ ಗಜದದನರಾಯರ ಮನೆಯನ್ನು ಸೇರಿಬಿಟ್ಟಿದ್ದಳು, ಆಗ ರಾತ್ರಿ ಎಂಟು ಗಂಟೆಯಾಗಿತ್ತಷ್ಟೆ. ರಾಯರು ಇನ್ನೂ ಕ್ಲಬ್ಬಿನಿಂದ ಬಂದಿರಲಿಲ್ಲ. ಆ ಮನೆಯೂ, ಮನೆಯ ಜನರೂ ಗೌರಿಗೆ ತೀರ ಅಪರಿಚಿತರು

ಕಾರಿನ ಧ್ವನಿಯನ್ನು ಕೇಳಿ ರಾಯರ ಪತ್ನಿ ಹೊರಗೆ ಬಂದರು. ಡ್ರೈವರು ಮೊದಲು ಕಾರಿನಿಂದಿಳಿದು, ಅವರನ್ನು ಕುರಿತು—"ವಸಂತಮ್ಮನಿಗೆ ಸ್ಟುಡಿಯೋದಲ್ಲಿ ಸ್ವಲ್ಪ ಕೆಲಸವುಂಟಂತೆ ಅಲ್ಲಿದ್ದ ಅವರ ಗೆಳತಿ ಒಬ್ಬರನ್ನು ಕಾರಿನಲ್ಲಿ ಕಳುಹಿಸಿದ್ದಾರೆ. ಪುನಃ ಕಾರು ತಾ ಅಂದಿದ್ದಾರೆ." ಎಂದು ಕಾರಿನ ಬಾಗಿಲು ತೆರೆದನು.

"ಗೆಳತಿಯನ್ನು ಮುಂದಾಗಿ ಕಳುಹಿಸಿದ್ದೇಕೆ ? ಸ್ವಲ್ಪಹೊತ್ತಿದ್ದು ಒಟ್ಟಿಗೇ ಬರಬಹುದಿತ್ತಲ್ಲ?" ಎಂದು ಆ ಅಮ್ಮನವರು ಪ್ರಶ್ನಿಸಿದರು.

"ಏನೋ ನನಗೆ ಗೊತ್ತಿಲ್ಲಮ್ಮ'' ಎಂದನು ಡ್ರೈವರು

ಗೌರಿ ಕಾರಿನಿಂದಿಳಿದು, ಆ ಅಮ್ಮನವರಿಗೆ ಕೈಮುಗಿದು ತಲೆವಾಗಿ— "ನೀವು ಹೇಳುದು ನಿಜವೇ ವಸಂತಿ ತಡವಾಗಿ ಬರುವ ವಿಷಯ ತಿಳಿಯದೆ ನೀವು ಆತಂಕಪಡಬಾರದೆಂದು, ನನ್ನನ್ನು ಮುಂದಾಗಿ ಕಳಿಸಿದರು

"ಒಳ್ಳೇದಾಯಿತು. ಬಾ ಅಮ್ಮ. ನಿನ್ನ ಹೆಸರೇನು?''

"ಗೌರಿ.''

ಅಮ್ಮನವರು ಆಶ್ಚರ್ಯದಿಂದ— "ಗೌರಿಯೆ ! ವಸಂತಿಯೊಂದಿಗೆ ಮಂಗಳೂರಿನಿಂದ ಹೊರಟ ಗೌರಿಯೋ ನೀನು?''

"ಹೌದಮ್ಮಾ ಆ ನಿರ್ಭಾಗ್ಯಳೇ ನಾನು!"

"ಬಾ! ಬಾ! ಬಾ! ಕುತುಕೋಮ್ಮಾ!" ಎಂದು ಅಮ್ಮನವರು ಅತ್ಯಾದರಗಳಿಂದ ಅವಳ ಕೈಹಿಡಿದು ಕೋಣೆಯೊಳಗೆ ಕರೆದೊಯ್ಯುತ್ತ— "ಹೌದು, ನೀನು ದಾರಿಯಲ್ಲಿ ಮಿಲಿಟರೀಯವರ ಕೈಗೆ ಸಿಕ್ಕಿಬಿದ್ದಿಯಂತಲ್ಲಾ.............?"

ಗೌರಿ ಸಂಗ್ರಹವಾಗಿ ತನ್ನ ಸಮಾಚಾರವನ್ನು ಹೇಳಿದಳು ಮಿಲಿಟರೀಯವರ ಕೈಯಿಂದ ಡೈರೆಕ್ಟರ್ ವರದನು ಅವಳನ್ನು ಸಂರಕ್ಷಿಸಿದನೆಂದೂ, ಅವನ ಕೋರಿಕೆಯಂತೆ ಫಿಲಂ ಚಿತ್ರದಲ್ಲಿ ತಾನು ನಟಿಸಬೇಕಾಯಿತೆಂದೂ, ಸಿನಿಮಾದಲ್ಲಿ ನಟಿಸುವುದರಿಂದ ಹೆಸರು ಕೆಡುವುದೆಂಬ ಭೀತಿಯಿಂದ ತಾನು ಅಲ್ಲಿ ರಹಸ್ಯವಾಗಿದ್ದೆನೆಂದೂ, ಇಂದು ವಸಂತಿ ತನ್ನನ್ನು ಕಂಡು ಹಿಡಿದು, ಇಲ್ಲಿಗೆ ಕಳುಹಿಸಿದಳೆಂದೂ, ಚೆಂದಾಗಿ ಹೇಳಿ ಮುಗಿಸಿದಳು. ವರದನಿಗೆ ಒಳ್ಳೆಯ ಗೌರವ ಕೊಟ್ಟು, ಒಳ್ಳೆಯವನಾಗಿ ಕಾಣುವಂತೆಯೇ ಹೇಳಿದಳು.

ಆ ಮನೆಯವರೆಲ್ಲರೂ ಒಳ್ಳೆಯ ಸಿನಿಮಾ ರಸಿಕರಾಗಿದ್ದರು ಆಧುನಿಕ ರೀತಿ–ನೀತಿಗಳಿಗೆ ಚೆನ್ನಾಗಿ ಒಗ್ಗಿಕೊಂಡವರಾಗಿದ್ದರು. ಕುಲೀನ ಸ್ತ್ರೀಯರು ಸಿನಿಮಾದಲ್ಲಿ ನಟಿಸುವುದರಿಂದ ಹೆಸರು ಕೆಡುವುದಿಲ್ಲವೆನ್ನುತ್ತ, ಅದಕ್ಕೆ ಪ್ರೋತ್ಸಾಹವೀಯುವ ಹೊಯ್ಲಿನಲ್ಲಿಯೇ ಅಮ್ಮನವರು ಉತ್ತರಕೊಟ್ಟರು. ಅದೊಂದು ರೀತಿಯಾಗಿ ಗೌರಿಗೆ ಪಥ್ಯವಾಯಿತು.

ಹೀಗೆ ಮಾತು, ಮಾತುಗಳೆಡೆಯಲ್ಲಿ ಆದರೋಪಚಾರಗಳು, ನಡೆಯುತ್ತಿರಲು, ಅಮ್ಮನವರ ೯ ವರ್ಷದ ಮಗಳು ಲೀಲೂ ಗೌರಿಯೊಡನೆ ಗೆಳೆಯಂತೆ ಮಾತಾಡಲಾರಂಭಿಸಿದಳು. ಲೀಲೂಗೆ ಕೂಡ, ಸಿನೆಮಾ ನೋಡುವ ಮತ್ತು ಅದರಲ್ಲಿ ನಟಿಸುವ ಕುತೂಹಲ ತುಂಬಾ ಇರುವಂತೆ ಗೊತ್ತಾಯಿತು. ಆ ಮನೆಯವರು ಪ್ರತಿಯೊಂದು ಸಿನಿಮಾ ಚಿತ್ರಕ್ಕೂ ತಪ್ಪದೆ ಹೋಗಿಬರುತ್ತಿರುವ ಮಹಾರಸಿಕರೆಂದೂ ತಿಳಿದು ಬಂತು. ಲೀಲೂಗೆ ಸಿನಿಮಾ ನಟನಟಿಯರ ಹೆಸರುಗಳೆಲ್ಲ ಬಾಯಿಪಾಠ. ಎಷ್ಟೋ ಸಿನಿಮಾ ಸಂಗೀತಗಳನ್ನು ತನ್ನ ಕೀಚುಗೊರಳಿನಿಂದ ಹಾಡಿ ತೋರಿಸಿಯೂ ಬಿಟ್ಟಳು ಲೀಲೂ!

ಗೌರಿ ಕಡತಂದ ಉಲ್ಲಾಸದಿಂದ ಅವಳೊಡನೆ ಸರಾಗವಾಗಿ ಮಾತಾಡುತ್ತಿದ್ದರೂ, ಒಳಗೊಳಗೆ ವಸಂತಿಯ ಗತಿ ಏನಾಗುವುದೋ ಎಂದು ತಳಮಳಿಸಿಕೊಂಡೇ ಇದ್ದಳು. ಆಗಾಗ ಅವಳ ಕಣ್ನೋಟವು ಬೀದಿಯ ಕಡೆಗೆ ಓಡಿಓಡಿ ಹಿಂದಿರುಗುತ್ತಿದ್ದಿತು.

೩೫

ರಾತ್ರಿ ಸುಮಾರು ೯|| ಗಂಟೆಯ ಸಮಯಕ್ಕೆ ಕಾರು ಹಿಂದಿರುಗಿ ಬಂತು ಕಾರಿಳಿದು ವಸಂತಿ ಮನೆಯೊಳಗೆ ಬಂದಳು ಅವಳ ಮೋರೆಯಲ್ಲಿ ವಿಪರೀತ ಕಳೆಯೇನೂ ಇಲ್ಲದ್ದು ನೋಡಿ ಗೌರಿ ಸಮಾಧಾನ ಸೂಚಕವಾದೊಂದು ದೀರ್ಘಶ್ವಾಸವನ್ನು ಬಿಟ್ಟಳು.

ಗೌರಿ ವಸಂತಿಯನ್ನು ಅರ್ಥ ಪೂರ್ಣವಾಗಿ ನೋಡಿದಳು. ವಸಂತಿಯೂ ಅರ್ಥವತ್ಕಟಾಕ್ಷದಿಂದ ಪ್ರತ್ಯುತ್ತರವಿತ್ತಳು ಅನಂತರ ಮೆಲ್ಲನೆಯಿಂದ ಗೌರಿ— "ಮದನ ನಿನಗೇನೂ ಕೆಡುಕು ಮಾಡಲಿಲ್ಲವೆ ?" ಎಂದು ಸ್ಪಷ್ಟವಾಗಿಯೇ ಕೇಳಿದಳು

"ಇಲ್ಲ ನಾನೆಲ್ಲಾ ಅವನಿಗೆ ತಕ್ಕ ಹಾಗೆಯೇ ಮಾತಾಡಿ ಬಂದಿದ್ದೇನೆ. ಅದಿರಲಿ ನೀನು ಮಹಿಳಾಭ್ಯುದಯ ಮಂಡಲಿಗೆ ಸೇರಿ ಕಲಿಯುತ್ತೀಯಾ ? ಅಲ್ಲ ಫಿಲಿಂನಲ್ಲಿ ಇನ್ನೂ ಇನ್ನೂ ನಟಿಸುವ ಉದ್ಯೋಗಕ್ಕೆ ಇಳಿಯುತ್ತೀಯಾ?" ಎಂದು ವಸಂತಿ ಕೇಳಿದಳು.

"ಫಿಲಿಂಗೂ ನನಗೂ ಬಹು ದೂರವಿದೆ ವಸಂತಿ ಈಗ ನಾನು ಒಂದು ಚಿತ್ರದಲ್ಲಿ ನಟಿಸಿದ್ದು ಕೂಡ ಒಂದು ಒತ್ತಾಯದಿಂದ. ಋಣ ವಿಮುಕ್ತಿಗಾಗಿ. ನಾನು ಯಾವ ಧ್ಯೇಯವನ್ನಿಟ್ಟುಕೊಂಡು ಊರಿನಿಂದ ಹೊರಟಿರುವೆನೋ, ಅದೇ ನಿಶ್ಚಯದಲ್ಲಿರುವೆನು. ಮಹಿಳಾಭ್ಯುದಯ ಮಂಡಲಿಗೇ ಸೇರುವೆನು ಅಲ್ಲಿ ಹೆಂಗುಸರಿಗೆ ಬೇಕಾದ ಎಲ್ಲಾ ಬಂದೋಬಸ್ತುಗಳೂ ಇವೆ ನಿನ್ನ ಉದ್ದೇಶವೇನು ವಸಂತಿ?"

"ನನ್ನ ಉದ್ದೇಶವೇ!................" ಎಂದು ವಸಂತಿ ಕೊಂಚ ಎಳೆದು— "ಹಂಪೆಯಲ್ಲಿಯೇ ನನ್ನ ಮನಸ್ಸು ಚಂಚಲವಾಗಿ

ಹೋಯಿತು. ನಾನು ನನ್ನ ತಂದೆಗೂ ಆ ವಿಷಯವಾಗಿ ಕಾಗದ ಬರೆದೆ. ಅದರಲ್ಲಿ, 'ಅಪ್ಪಾ, ಫಿಲಿಂನಲ್ಲಿ ನಟಿಸುವ ಸಂದರ್ಭವು ನನಗೆ ಬಂದಿದೆ. ನಿಮ್ಮನ್ನು ಕೇಳದೆಯೇ ಹಂಪೆಯಲ್ಲಿ ನಟಿಸಿಯೂ ಬಿಟ್ಟೆ ಪ್ರಸಿದ್ಧ ಡೈರೆಕ್ಟರಾದ ವರದರಾಯರು ನನ್ನನ್ನು ಸಿನಿಮಾ ತಾರೆಯಾಗಿ ಮಾಡುವೆ ನೆಂದು ಹೇಳಿ ಪ್ರೋತ್ಸಾಹಪಡಿಸುತ್ತಿದ್ದಾರೆ ನಿಮ್ಮ ಅನುಜ್ಞೆಯಾದರೆ ಸಿನಿಮಾದಲ್ಲಿ ನಟಿಸಲು ಸೇರಿಬಿಡಬೇಕೆಂದಿದ್ದೇನೆ ಕೈತುಂಬಾ ಪ್ರತಿ ಫಲವೂ ಉಂಟು ಈಗಿನ ಅವಸರ ಸಂದರ್ಭದಲ್ಲಿ ನಿಮ್ಮನ್ನು ಕೇಳ ದಯೇ ನಟಿಸಬೇಕಾಗಿ ಬಂದುದಕ್ಕೆ ಕ್ಷಮಿಸಿರಿ,' ಎಂದು ಮುಂತಾಗಿ ಹಂಪೆಯಲ್ಲಿಯೇ ಬರೆದಿದ್ದೆ. ಅವರ ಉತ್ತರ ಇಲ್ಲಿಗೆ ಬಂದಿತ್ತು. ಅದ ರಲ್ಲಿ—ನೀನು ದೊಡ್ಡವಳಾಗಿದ್ದೀ ಒಳ್ಳೆಯುದು ಕೆಟ್ಟದನ್ನು ವಿಮರ್ಶಿಸಿ ತಿಳಿದುಕೊಳ್ಳಲು ತಕ್ಕಷ್ಟು ವಿದ್ಯಾವತಿಯಾಗಿದ್ದೀ. ಮೇಲೆ ಹಿರಿಯ ರಾದ ನಿನ್ನ ಮಾವನೂ ಅಲ್ಲಿದ್ದಾರೆ. ಅವರೊಡನೆ ಆಲೋಚನೆಮಾಡಿ ಅವರು ಹೇಳುವಂತೆ ನಡೆದುಕೋ. ಅವರೊಡನೆ ಕೇಳದೆ ಏನೂ ಮಾಡ ಬೇಡ, ಎಂದು ಮುಂತಾಗಿ ಬರೆದಿದ್ದರು ಅನಂತರ ವರದರಾಯರು ನನ್ನನ್ನು ವಿಚಾರಿಸಿಕೊಂಡು ಇಲ್ಲಿಗೇ ಬಂದುಬಿಟ್ಟರು ನಮಾವವರೆ ಖುದ್ದು ಅವರೊಡನೆ ಮಾತಾಡಿದರು. ಸಿನಿಮಾ ನಟನೆಗೆ ಕುಲೀನ ಸ್ತ್ರೀಯರು ಸೇರುವುದರಿಂದ, ಕೆಡುಕಿದೆಯೋ ಇಲ್ಲವೋ ಎಂಬ ವಿಷಯ ವಾಗಿ ಚರ್ಚೆ ನಡೆಸಿಕೊಂಡರು ವರದರಾಯರು ಎಷ್ಟೋ ಪ್ರಸಿದ್ಧ ಸಿನಿಮಾ ನಟಿಯರ ಉದಾಹರಣೆ ಕೊಟ್ಟು, ಸರಳವಾಗಿ ಮಾತಾಡಿ ಮಾವ ನನ್ನು ಒಪ್ಪಿಸಿಬಿಟ್ಟರು. ಮಾನವತಿ ಚಿತ್ರದಲ್ಲಿ ನಟಿಸಲು ನನ್ನ ಒಪ್ಪಂದ ವಾಯಿತು. ಇದಕ್ಕಾಗಿ ನನಗೆ ಸಿಕ್ಕಿದ ರೂಪಾಯಿ ಒಂದು ಸಾವಿರ. ಅದನ್ನು ಹಾಗೆಯೇ ನನ್ನ ತಂದೆಗೆ ಕಳುಹಿಸಿ ಬಿಟ್ಟಿದ್ದೇನೆ. ಮೊದಲ ಬಾರಿಗೇ ಅಷ್ಟು ಸಿಕ್ಕಿದ್ದು ನೋಡಿ, ನಾನೊಬ್ಬಳು ಪ್ರಧಾನ ತಾರೆಯೆಂದೇ ಎಲ್ಲರೂ ತಿಳಿಯುವಂತಾಯಿತು. ನನ್ನ ತಂದೆ ಕೂಡಾ ಹಾಗೆಯೇ ಭಾವಿಸಿಕೊಂಡು, ಬಹಳ ಸಂತೋಷಪಟ್ಟು ಕಾಗದ ಬರೆದರು ನಿನ್ನನ್ನು ಮಿಲಿಟರಿಯವರು ಎಳೆದುಕೊಂಡು ಹೋದರೆಂದು ಕೇಳಿ, ನನ್ನ ತಂದೆ ತುಂಬಾ ವ್ಯಸನಪಟ್ಟು ಬರೆದಿದ್ದರು. ಡ್ರೈವರ್ ಸದಾಶಿವನೂ, ತಮ್ಮ ಕೇಶವನೂ ನನ್ನನ್ನು ಇಲ್ಲಿ ಬಿಟ್ಟು ಮಂಗಳೂರಿಗೆ ಹೋಗಿ ಆ ಸಮಾ

ಚಾರವನ್ನು ತಂದೆಗೆ ಮೊದಲೇ ತಿಳಿಸಿದ್ದರು. ನನ್ನ ಜತೆಯಲ್ಲಿ ನೀನೂ ಸಿನಿಮಾ ತಾರೆಯಾಗಿ ಮೆರೆಯಬೇಕೆಂದು ನನ್ನ ತಂದೆಯು ಇಷ್ಟ. ಮೊದಲು ಬರೆದ ಪತ್ರದಲ್ಲಿ ಹಾಗೆ ಸ್ಪಷ್ಟವಾಗಿ ತಿಳಿಸಿದ್ದರು ನಿನ್ನ ಅಣ್ಣನಿಗೆ, ಪಾಪ, ಇದೊಂದೂ ಗೊತ್ತಿಲ್ಲ! ಜೈಲಿನೊಳಗಿದ್ದಾರೆ!....... ....''

ಗೌರಿ ಆತುರದಿಂದ ಕೇಳಿದಳು:— ''ಶೀನಣ್ಣನ ಕಾಗದ ಇಲ್ಲಿಗೇನಾದರೂ ಬಂದಿದೆಯೋ ವಸಂತಿ?"

"ಬಂದಿದೆ ಗೌರಿ. ಸುಮಾರು ಬಂದೂವರೆ ತಿಂಗಳ ಹಿಂದೆ ಶೀನಣ್ಣನ ಕಾಗದವು ನಿನ್ನ ಹೆಸರಿಗೆ ಬಂದಿದೆ ಆ ಕವರನ್ನು ನಾನು ಒಡದೇ ಇಲ್ಲ ಹಾಗೆಯೇ ಇಟ್ಟಿದ್ದೇನೆ ನಿನ್ನ ಕಾಗದ ನಾನೇಕೆ ಒಡೆದು ಓದಲಿ?''

''ಓದಬಹುದಿತ್ತಲ್ಲ ಗೌರಿ? ಅದರಿಂದೇನೂ ತಪ್ಪಿಲ್ಲ!"

''ಆದರೂ ನಾನು ಓದಿಲ್ಲ ಕವರಿನ ಮೇಲೆ ಶೀನಣ್ಣನ ಜೈಲಿನ ವಿಳಾಸವಿದ್ದುದರಿಂದ, ಅವರಿಗೆ ನಾನೇ ಒಂದು ಕಾಗದ ಬರೆದೆ ಅವರು ನಮ್ಮನ್ನು ಅಗಲಿದ ಮೇಲೆ ನಡೆದ ಸಂಭವಗಳನ್ನೆಲ್ಲ ಬರೆದಿದ್ದೆ."

''ಅಣ್ಣನಿಂದ ಮತ್ತೆ ನಿನಗೆ ಉತ್ತರ ಬಂತೆ?''

''ಇಲ್ಲ. ಆದರೆ ಶೀನಣ್ಣ ನಿನ್ನ ಉತ್ತರವನ್ನು ಕಾಣದೆಯೋ ಏನೋ, ಮಹಿಳಾಭ್ಯುದಯ ಮಂಡಲಿಯಲ್ಲಿರುವ ಸುಂದರೀಬಾಯಿ ಎಂಬವಳಿಗೂ ಒಂದು ಕಾಗದ ಬರೆದಿದ್ದನಂತೆ; ಆ ಸುಂದರೀಬಾಯಿ ಕೂಡಾ ಇಲ್ಲಿಗೆ ಬಂದು ನಿನ್ನ ಸಮಾಚಾರವನ್ನು ಕೇಳಿ ಬಹಳ ವ್ಯಸನಪಟ್ಟುಕೊಂಡು ಹೋದಳು ಆ ಸುಂದರೀಬಾಯಿಯೇ ನಿನ್ನ ಅತ್ತಿಗೆ ಗೌರೀ!''

''ಹೌದು ಹೌದು! ಅವಳೂ ಬಂದಿದ್ದಳೆ? ಆಹಾ! ನಾನು ಈಗಲೇ ಅಲ್ಲಿಗೆ ಹೋಗಲಿಕ್ಕಾದೀತೆ?"

''ಈಗಲೇ ಏನು ಅವಸರ! ರಾತ್ರಿ ಗಂಟೆ ಹತ್ತಾಯಿತಲ್ಲ!''

''ಸರಿ; ನನ್ನ ಅಣ್ಣನ ಪತ್ರವನ್ನು ಕೊಡುತ್ತೀಯಾ?''

ವಸಂತಿ ಬೀರುವಿನಿಂದ ಒಂದು ಕವರನ್ನು ಹುಡುಕಿ ತೆಗೆದು ಗೌರಿಗೆ ಕೊಟ್ಟಳು ಆಗ ಕ್ಲಬ್ಬಿನಿಂದ ಶ್ರೀ. ಗಜವದನರಾಯರು ಆಗಮಿಸಿದರು ವಸಂತಿ ಗೌರಿಯ ಪರಿಚಯವನ್ನು ಮಾಡಿ ಕೊಡುತ್ತಿದ್ದಾಗ,

ಗೌರಿ ಅಣ್ಣನ ಆ ಹಳೆಯ ಪತ್ರವನ್ನು ಓದುತ್ತಿದ್ದಳು. ಅದರಲ್ಲಿ ಹೀಗಿತ್ತು —

ಸ್ಪೆಶಲ್ ಜೇಲು
ವಾರ್ಡ ನಂಬರ - ೮
ಬಳ್ಳಾರಿ.

"ಪ್ರಿಯ ತಂಗಿ ಗೌರಿಗೆ ಆಶೀರ್ವಾದ

ನಾನು ಇಲ್ಲಿಗೆ ಬಂದು ಒಂದು ತಿಂಗಳಾದರೂ ಕಾಗದ ಬರೆಯಲು ಈಗ ತಾನೇ ಅನುಮತಿ ಸಿಕ್ಕಿತು ಮೊತ್ತಮೊದಲು ನಿನಗೇ ಬರೆಯುತ್ತಿದ್ದೇನೆ ದೈವಾನುಗ್ರಹದಿಂದ ನಾನು ಕ್ಷೇಮ ನೀನು ಈಗ ಶ್ರೀ. ಗಜವದನರಾಯರಲ್ಲಿರ.ವಿ ಎಂಬ ನಂಬುಗೆಯಿಂದಿದ್ದೇನೆ ನೀನೂ ಸೌ. ವಸಂತಿ ಮುಂತಾದವರೂ ಕ್ಷೇಮವೆ? ಶ್ರೀ ಗಜವದನರಾಯರನ್ನು ನಿನ್ನ ತಂದೆ ಎಂದು ಭಾವಿಸಿಕೊಂಡು ಅವರಿಗೆ ವಿಧೇಯಳಾಗಿ ನಡೆಯುವಿಯಷ್ಟೆ? ನೀನೂ—ವಸಂತಿಯೂ ಮಹಿಳಾಭ್ಯುದಯ ಮಂಡಲಿಯ ಸಂಗೀತ ನೃತ್ಯ ಶಾಲೆಗೆ ಸೇರಿ ಅಭ್ಯಾಸ ಮಾಡುತ್ತಿರುವಿರಲ್ಲವೆ? ಅಲ್ಲಿ ಸೌ. ಸುಂದರಿ ನಿನಗೆ ಸಿಕ್ಕಿರುತ್ತಾಳೆಯೆ ? ನಿನ್ನನ್ನು ನೋಡಿಕೊಳ್ಳುವಂತೆ ಅವಳಿಗೂ ಒಂದು ಕಾಗದ ಬರೆಯುತ್ತೇನೆ. ಗೌರೀ ! ಸುಂದರಿಯನ್ನು ಈ ವರೆಗೆ ನಾವೆಲ್ಲಾ ಏನೋ ತಿಳಿದಿದ್ದೇವೆ. ಆದರೆ ಅವಳ ಸೌಜನ್ಯತೆಗಳು ಇತ್ತೀಚೆಗೆ ತಾನೇ ನನಗೆ ಗೊತ್ತಾಗಲಾರಂಭಿಸಿವೆ ಆದುದರಿಂದ ನೀನು ಅಗತ್ಯವಾಗಿ ಅವಳನ್ನು ನೋಡಬೇಕು. ಮತ್ತು ಎಲ್ಲಾ ವಿವರಗಳಿಗೂ ನನಗೆ ಕಾಗದವನ್ನು ಬರಿ — ಇತಿ ಆಶೀರ್ವಾದ —

"ಶೀನು"

ಪತ್ರವನ್ನು ಓದಿ ಮುಗಿಸಿದಾಗ, ಅಣ್ಣನಿಗೆ ತನ್ನ ಮೇಲಿರುವ ಪ್ರೀತಿಯ ನೆನಪು ಬಂದು ಅವಳಿಗೆ ಕಂಬನಿದುಂಬಿತು. ಕಂಬನಿಯನ್ನು ಆರಿಸಿಕೊಂಡು ಅವಳು ಮುಖವನ್ನು ಈಚೆಗೆ ತಿರುಗಿಸುತ್ತಲೇ, ಗಜವದನರಾಯರು ಆವಳನ್ನು ಕಂಡು, ಆದರಪೂರ್ವಕವಾಗಿ ನಗುತ್ತ "ಓಹೊ ! ಮಿಸ್ ಗೌರೀದೇವಿಗೆ ಸುಸ್ವಾಗತ ! ನಿನ್ನಂತಹ ಸ್ತ್ರೀ ರತ್ನವು ಮಿಲ್ಟ್ರೀ ರಾಕ್ಷಸರ ಕೈಯಲ್ಲಿ ಪುಡಿಯಾಗದೆ, ಡೈರೆಕ್ಟರ್ ವರದರಾಯರಂತಹ,

ವಿಖ್ಯಾತ ಕಲಾಭಿಜ್ಞರ ಕೈಗೆ ಸೇರಿದ್ದು ದೊಡ್ಡ ದೇವರ ದಯೆ! ಯಾವಾಗ ನಿನ್ನ ಹಾಗೂ ವರದರಾಯರ ಮದುವೆ?................"

ಕೂಡಲೇ ವಸಂತಿ ಹುಬ್ಬು ಸುರುಗಿಸಿಕೊಂಡು,— "ಛೀ ಛೀ! ಸುಮ್ಮನಿರಿ ಮಾವಾ! ಅದೆಲ್ಲಾ ಸುಳ್ಳು ವಾರ್ತೆ!"

"ಏನು—ಸುಳ್ಳೆ? ಸಿನಿಮಾವೃತ್ತ ಎಂಬ ಪತ್ರಿಕೆಯಲ್ಲಿ ಬಂದ ದಲ್ಲಾ!" ಎಂದು ರಾಯರು ಹುಬ್ಬೆತ್ತಿ ಕೇಳಿದರು.

"ಅದು ಯಾರೋ ಹುಟ್ಟಿಸಿದ ಸುಳ್ಳು ವಾರ್ತೆಯಂತೆ! ವರದ ರಾಯರೇ ಅಂದರು ಆ ಪತ್ರಿಕೆಯ ಅಧಿಕಾರಿಗಳು ಕೂಡಾ, ಇಂತಹ ಸುಳ್ಳು ವಾರ್ತೆ ತಮ್ಮ ಪತ್ರಿಕೆಯಲ್ಲಿ ಪ್ರಕಟವಾದುದಕ್ಕೆ ತುಂಬಾ ವ್ಯಸನ ಪಡುತ್ತೇವೆಂದು ಕಾಗದ ಬರೆದಿದ್ದಾರೆ ಪಾಪ! ಈ ವಿಷಯ ಗೌರಿಗೆ ಒಂದೂ ತಿಳಿಯದು ವರದರಾಯರನ್ನು ಅಣ್ಣನಂತೆ ಕಾಣುತ್ತಿದ್ದಾಳೆ! ಇವಳನ್ನು ಇವಳ ಪಾಡಿಗೆ ಮಹಿಳಾಭ್ಯುದಯ ಮಂಡಲಿಗೆ ಸೇರಿ ಕಲಿಯ ಲಿಕ್ಕೇ ಬಂದಿದ್ದಾಳೆ ಮಾವಾ!" ಎಂದಳು

ಗೌರಿಯ ಮುಖದಲ್ಲಿದ್ದ ಅಸಮಾಧಾನದ ಲಹರಿಗಳು, ವಸಂತಿಯ ಮಾತಿನಿಂದ ಅಡಗಿಯೂ ಹೋದವು ಹೀಗೆ ತನ್ನ ಮರ್ಯಾದೆಯುಳಿ ಸಿದ ವಸಂತಿಗೆ ಮನಸಾರೆ ಕೃತಜ್ಞತೆಯನ್ನೊಪ್ಪಿಸಿದಳು

ರಾಯರು ಗೌರಿಯನ್ನು ಕಂಡು— "ಆಯ್‌ ಅಂ ಸಾರೀ! ಗೌರೀದೇವೀ!" ಎಂದರು.

ಕೂಡಲೇ ಗೌರಿ--- "ನೆವರ್ ಮೈಂಡ್ ಮಾವಾ!"

ರಾಯರು ಒಂದು ಸಿಗರೇಟಿಗೆ ಬೆಂಕಿ ಹಚ್ಚಿಕೊಂಡು, ವಿಷಯ ವನ್ನು ಬದಲಿಸಲಿಕ್ಕಾಗಿ— "ಹಾಗಾದರೆ ಗೌರಿ! ನೀನಿನ್ನು ಮಹಿಳಾ ಭ್ಯುದಯ ಮಂಡಲಿಗೆ ಸೇರುತ್ತೀಯಾ?"

"ಹೌದು ಮಾವಾ"— ಗೌರಿಯೆಂದಳು.

"ಯಾಕೆ? ನಮ್ಮ ವಸಂತಿಯೊಂದಿಗೆ ನೀನೂ ಸಿನಿಮಾದಲ್ಲಿ ಬೆಳಗ ಬಾರದೆ?"— ಎಂದು ರಾಯರು ಕೇಳಿದರು.

ಗೌರಿಗೆ ಉತ್ತರ ಕೊಡುವ ಕಷ್ಟವೇ ಇಲ್ಲದೆ ವಸಂತಿಯೇ ಹೇಳಿ ದಳು:— "ಏನೋ ಅವರವರ ಇಷ್ಟ ಮಾವ ಇವಳ ಅಣ್ಣನೂ

ಇವಳೂ ಒಂದೇ ಹಿಡಿದ ಹಟ ಬಿಡದವರು. ಇವರ ಧ್ಯೇಯಗಳಿಗೂ ನನ್ನ ಧ್ಯೇಯಗಳಿಗೂ ತುಂಬಾ ವ್ಯತ್ಯಾಸ! ಹೀಗೆ ಇಷ್ಟವಿಲ್ಲದವರನ್ನು ಒತ್ತಾಯಪಡಿಸುವುದು ಸರಿಯೇ ಮಾವಾ?''

''ಹೌದು ನೀನನ್ನುವುದು ನಿಜವೇ'' ಎಂದು ರಾಯರು, ಗೌರಿಯೊಡನೆ ವಿನೋದವಾಗಿ ಮತ್ತೇನೇನೋ ಮಾತಾಡುತ್ತಿದ್ದರು.

ವಸಂತಿಯ ನುಡಿನಡೆಗಳು ಈಗ ಗೌರಿಗೆ ಉಪಕಾರವೇನೋ ಆಗಿದ್ದವು. ಆದರೆ ಗೌರಿಗೆ ಒಳ್ಳೆಯದಾಗಬೇಕೆಂಬ ಪರಾರ್ಥ ಬುದ್ಧಿಯಿಂದ ವಸಂತಿ ಹಾಗೇನೂ ಮಾಡಿಬಿಡಲಿಲ್ಲ. ಗೌರಿಯ ಮೇಲೆ ವಸಂತಿಗೆ ಒಂದು ಬಗೆಯ ಅಸೂಯೆ ಇದ್ದೇ ಇದ್ದುದನ್ನು ನಾವು ಒಲ್ಲೆವು. ಗೌರಿ ಫಿಲಿಂಗೆ ಸೇರಿದರೆ ವಸಂತಿಗಿಂತ ಹೆಚ್ಚಿನ ಹೆಸರು ಗೌರಿಗೇ ಸರಿಯೆಂದು ವಸಂತಿಗೆ ಗೊತ್ತು. ಗೌರಿಯ ಬೆಳಕಿನಲ್ಲಿ ತನ್ನ ಬೆಳಕು ಮಂಗುವುದೆಂದು ಅವಳು ಬಲ್ಲಳು. ಗೌರಿ ಮಿಲಿಟರಿಯವರ ಕೈಸೇರಿ, ಹಾಳಾಗಿ ಹೋಗಿರುತ್ತಿದ್ದರೆ ಅವಳು ಹೃತ್ಪೂರ್ವಕವಾಗಿ ಗೌರಿಯನ್ನೆ ನೆನೆದು ದುಃಖಿಸುವವಳಾಗಿರಲಿಲ್ಲ. ಗೌರಿ ಕೆಟ್ಟು ಮಣ್ಣುಗೂಡಿ ಹೋದಳೆಂದೇ ಅವಳು ನಂಬಿದ್ದಳು. ವರದನೂ ಗೌರಿಯ ಗಂಧವನ್ನು ಕೂಡ ವಸಂತಿಗೆ ತಿಳಿಸದೆ, ತನ್ನ ''ಮಾನವತಿ'' ಚಿತ್ರಕ್ಕೆ ವಸಂತಿಯನ್ನು ಕಥಾನಾಯಕಿಯ ಗೆಳತಿಯಾಗಿ ಸೇರಿಸಿಕೊಂಡಿದ್ದನು. ಸಿನೆಮಾ ಚಿತ್ರದಲ್ಲಿ ಹೊಸ ಹೊಸ ನಕ್ಷತ್ರಗಳನ್ನು ಸೃಷ್ಟಿಸುವುದೆಂದರೆ ವರದನಿಗೊಂದು ಉತ್ಸಾಹ. ವಸಂತಿಯಾದರೋ, ಒಮ್ಮೆಗೇ ಉಜ್ವಲ ತಾರೆಯಾಗಬೇಕೆಂಬ ಮಹತ್ವಾಕಾಂಕ್ಷೆಯುಳ್ಳವಳು. ತನಗೆ ಕಥಾನಾಯಕಿಯ ಪಾತ್ರ ಕೊಡಬಾರದೆ?— ಎಂದು ವರದನನ್ನು ತುಂಬಾ ಕೇಳಿ ನೋಡಿದಳು. ಸುಧಾಳಿಗೆ ನಾಯಕಿಯ ಪಾತ್ರವು ಮೀಸಲಾಗಿರುವುದೆಂದು ಮೂರು ತಿಂಗಳ ಹಿಂದೆಯೇ ಒಪ್ಪಂದವಾಯಿತೆಂದೂ, ಇನ್ನೊಂದು ಚಿತ್ರದಲ್ಲಿ ಹಾಗೆಯೇ ಮಾಡೋಣವೆಂದೂ ವರದನು ಅವಳಿಗೆ ಸಮಾಧಾನ ಹೇಳಿ ಭರವಸೆ ಕೊಟ್ಟಿದ್ದನು. ವರದನ ಮಾತುಗಳ ಮಾಧುರ್ಯಕ್ಕೆ, ಅವಳ ಮಾವನೇ ಮೆಚ್ಚಿ ಹೋಗಿದ್ದರು; ಇನ್ನು ಚಪಲಶೀಲೆ ವಸಂತಿಯನ್ನು ಕೇಳಬೇಕೆ?— ಅವಳು ಸೋತೇ ಮಾರು ಹೋಗಿಬಿಟ್ಟಿದ್ದಳು. ಆಹಾ! ವರದನ ಮಾತುಗಳು

ಅದೆಷ್ಟು ನಯ! ಅದೆಷ್ಟು ಮಧುರ! ನೋಟಕ್ಕೂ ಸುಲಕ್ಷಣಯುಕ್ತ ಯುವಾಸ್ಫುರದ್ರೂಪಿ ವರದ! ಹೌದು! ಆದರೆ ಅವನ ಅಂತರ್ಯವೋ!

ಅದು ತೀರಾ ಅಶುದ್ಧವಾಗಿತ್ತು. ಅವನು ಅವಿವಾಹಿತನಾದ ಅಸಾಧ್ಯ ಸ್ತ್ರೀಲೋಲ. ಹೊಸ ಹೊಸ ತಾರೆಯರನ್ನು ಹುಡುಕಿ ತೊಡುಕು ವುದರಲ್ಲಿ ಅವನು ಪ್ರವೀಣ ಒಳ್ಳೆಯ ಡೈರೆಕ್ಟರ್, ಉತ್ತಮ ನಟ; ಚಲೋ ನಾಟ್ಯಗಾರ ಆದರೇನು? ಅವನ ಅಂತರ್ಯವು ಗೊತ್ತಿದ್ದವರಿಗೆ ಚೆನ್ನಾಗಿ ಗೊತ್ತು ಯಾವ ಯಾವ ಮಹಿಳೆಯನ್ನು ಹೇಗೆ ಹೇಗೆ ಮಾತಾಡಿಸಿ ವ್ಯಮರಿಸಬೇಕೆಂಬ ಕಲೆಯಲ್ಲಿ ವಿಶೇಷವಾಗಿ ಪಳಗಿದವನು ಇದರ ಮೇಲೆ ಅವನು ಕುಡಿಗಾರನೂ ಹೌದು. ಅವನು ಕುಡಿಗಾರನೆಂಬುದು ಅವನ ತೋಳತೆಕ್ಕೆಗೆ ಬಿದ್ದ ಎಲ್ಲ ಸ್ತ್ರೀಯರಿಗೂ ಗೊತ್ತಿರಲಿಕ್ಕಿಲ್ಲ. ಗೊತ್ತಾದರೂ ಬಾಧಕವಿಲ್ಲದ ವೇಶ್ಯೆಯರಂತಹರಿಗೆ ಮಾತ್ರವೇ ಗೊತ್ತಿದ್ದೀತು ನಮ್ಮ ವಸಂತಿಗೂ ಅದೂ ಗೊತ್ತಿರಲಿಲ್ಲ ಅವಳೊಡನೆ ಅವನು ಬಹಳ ನ್ಯಾಯ ನೀತಿ ಶೀಲನಾಗಿರುವಂತೆ ನಟಿಸುತ್ತಿದ್ದನು.

ಸ್ಟುಡಿಯೋ ಕಟ್ಟಡಗಳಲ್ಲಿ ವರದನಿಗೊಂದು ಪ್ರತ್ಯೇಕವಾದ ಆಫೀಸುಂಟು. ಅದರ ಬಾಗಿಲಲ್ಲಿ "ನೊ ಅಡ್ಮಿಷನ್" ಎಂಬ ಹಲಗೆಯೂ ಉಂಟು. ಅವನ ಸ್ತ್ರೀವ್ಯಾಮೋಹ ಲಹರಿಗಳೆಲ್ಲ ಅಲ್ಲಿಯೇ ನಡೆಯುತ್ತಿದ್ದುವು ವಸಂತಿಗೂ ಆ ಸ್ಥಳವು ಚೆನ್ನಾಗಿ ಪರಿಚಿತವಾಗಿತ್ತು. ಪಾಪ, ವರದನ ಮರುಳು ಮಾಡುವ ಸಾಂಗತ್ಯಕ್ಕೆ ಮನಸೋತ ವಸಂತಿ, "ನೀವು ಇನ್ನೂ ವಿವಾಹ ಮಾಡಿಕೊಳ್ಳಲಿಲ್ಲವೇಕೆ?" ಎಂದು ಕೇಳಿದಳು. "ನಿನ್ನಂತಹ ವಧೂಮಣಿ ಸಿಕ್ಕದ್ದರಿಂದ" ಎಂದನು ವರದ. ಹೀಗೆ ಮೊದಲಾದ ಸಂಭಾಷಣೆಯಿಂದ ಕೆಲದಿನಗಳಲ್ಲೆ ಅವರಿಬ್ಬರೂ ಪರಸ್ಪರ ವಾಗ್ದತ್ತ ವಧೂವರರಾಗಿ ಹೋದರು. ವರದನು ಖಂಡಿತ ಭರವಸೆ ಕೊಟ್ಟು ಬಿಟ್ಟುದರ ನಂಬುಗೆಯಿಂದ, ಚಪಲೆ ವಸಂತಿಯು ತಾಳ್ಮೆಯ ಎಲೆಗಟ್ಟೂ ಕಡಿದುಹೋಗಿತ್ತು. ಎಲ್ಲವೂ ರಹಸ್ಯದಲ್ಲಿ ಇನ್ನೂ ಈ ವಿಚಾರವನ್ನು ಬಹಿರಂಗ ಪಡಿಸಕೂಡದೆಂದೂ ವರದನು ಕಟ್ಟುಪಾಡಿ ಹಾಕಿದ್ದನು. "ಮಾನವತಿ" ಚಿತ್ರ ಮುಗಿದ ಕೂಡಲೇ ವಸಂತಿಯು ಹಿರಿಯರಿಗೆ ಅವನೆ ತಿಳಿಸುವುದಾಗಿ ಹೇಳಿ ಅವಳ ಬಾಯಿ ಬಿಗಿದಿದ್ದನು.

ಹೀಗಿರುವಾಗ "ಸಿನಿಮಾ ವೃತ್ತ" ಹಾಗೆ ಪ್ರಕಟವಾದರೆ ವಸಂತಿ ವಸಂತಿ ಗಾಬರಿಯಾಗದಿದ್ದಾಳೆ?

ಕಡೆಗೆ ಆ ಗಾಬರಿಯುನ್ನು ಕೂಡಾ ಜಾಣ ವರದನು ನಿವಾರಿಸಿದ್ದಾನೆ. ಇನ್ನೇನು? ನಿಜವಾಗಿಯೂ ವರದನು ಅವಳನ್ನು ವಿವಾಹವಾದಾನೆ? ವಸಂತಿ ಇನ್ನೂ ನಂಬಿದ್ದಾಳೆ. ನಮಗೆನೋ ನಂಬುಗೆಯಿಲ್ಲ.

ಆದರೆ ವರದನು ಗೌರಿಯುನ್ನು ಮದುವೆ ಮಾಡಿಕೊಳ್ಳಲು ಭಗೀರಥ ಪ್ರಯತ್ನ ಪಟ್ಟುದೇನೋ ವಾಸ್ತವ. ವಿವಾಹದ ಸಂದರ್ಭದಲ್ಲಿ ವಸಂತಿಗೆ ಗೊತ್ತಾದರೆ ಆಗಲಿ, ಏನು ತಾನೇ ಮಾಡಿಯಾಳು ?

ಕಡೆಗೆ ಆದುದೇನು? ವಸಂತಿಗೆ ಗೊತ್ತಾದುದೂ, ಗೌರಿ ಪಂಜರದಿಂದ ಪಾರಾದುದೂ ಒಂದೇ ಸಮಯದಲ್ಲಿ ನಡೆದುಹೋಯಿತು ! ಕೈಕೈ ಹಿಸುಕಿಕೊಂಡನು ವರದ! ಸಮಯ ಸುಧಾರಣೆಗಾಗಿ ವಸಂತಿಗೆ ಆಶೆಯು ಕುಡಿ ಉಳಿಯುವಂತೆ ಮಾತಾಡಿ ಕಳುಹಿಸಿದ್ದನು. ಹೌದು ! ಹೊಸ ತರುಣಿಯಲ್ಲವೇ ವಸಂತಿ ! ಅವಳನ್ನು ಒಮ್ಮೆಲೇ ಬಿಟ್ಟು ಬಿಡದೆ, ಹೋದಷ್ಟು ದಿನ ಅವನ ಚಾಪಲ್ಯಕ್ಕೆ ಎರೆವಸ್ತುವಾಗಿರಬೇಡವೆ? ಬಿಟ್ಟಾನೇ ವರದ! ನೀಚ! ಅಂತರ್ಘಾತುಕ!

ಪಾಪ! ವಸಂತಿ ತಾನು ದೊಡ್ಡ ಸಿನಿಮಾ ಡೈರೆಕ್ಟರನ ಅರ್ಧಾಂಗಿಯಾದ ಸಿನಿಮಾತಾರೆಯಾಗುವೆನೆಂದು ನಂಬಿದ್ದಾಳೆ !

## ೩೭

ಅಂದು ರಾತ್ರಿ ಉಪಚಾರಗಳೆಲ್ಲಾ ಮುಗಿದುವು ಗಜವದನ ರಾಯರ ಮನೆಯಲ್ಲಿ ಟೆಲಿಫೋನ್ ಇರುವುದನ್ನು ಗೌರಿ ಕಂಡಳು. ಅದರ ಬದಿಯಲ್ಲಿದ್ದ ಟೆಲಿಫೋನ್ ಡೈರೆಕ್ಟರಿಯನ್ನು ತೆಗೆದು ಬಿಡಿಸಿ ನೋಡಿದಳು. "ಮಹಿಳಾಭ್ಯುದಯ ಮಂಡಲಿ"ಯ ಟೆಲಿಫೋನಿನ ನಂಬರು ಸಿಕ್ಕಿತು. ಒಡನೆಯೇ ಗೌರಿ ರಾಯರ ಅಪ್ಪಣೆಯನ್ನು ಪಡೆದು,

ರಿಸೀವರನ್ನು ಎತ್ತಿಕೊಂಡು ಮಹಿಳಾಭ್ಯುದಯ ಮಂಡಲಿಯ ನಂಬರು ಗಳನ್ನು 'ರಿಂಗ್' ಮಾಡಿದಳು.

"..................ಹಲೋ!—" ನಯಮಧುರವಾದ ದನಿಯಿಂದ ಗೌರಿ ಫೋನಿನಲ್ಲಿ ಮಾತಾಡುತ್ತಾಳೆ: "........ಅದು ಮಹಿಳಾಭ್ಯುದಯ ಮಂಡಲಿಯಾಫೀಸೋ?"

"ಹೌದು"—ಎಂದು ಇಂಗ್ಲೀಷಿನಲ್ಲಿ ಉತ್ತರ ಬಂತು.

ಗೌರಿಯೂ ಇಂಗ್ಲೀಷಿನಲ್ಲಿಯೇ ಕೇಳಿದಳು: "ಅಲ್ಲಿ ಕೆ. ಸುಂದರೀ ಬಾಯಿ ಇದ್ದಾರೆಯೆ?"

"ಇದ್ದಾರೆ"

"ದಯಮಾಡಿ ಸ್ವಲ್ಪ ಕರೆಯುವಿರಾ?"

"ಕರೆಯುವೆನು. ಕೊಂಚ ಕಾದಿರಿ. ಅವರು ಅನಾಥ ಚಿಕಿತ್ಸಾ ಲಯದಲ್ಲಿದ್ದಾರೆ"

ಗೌರಿ ರಿಸೀವರನ್ನು ಕಿವಿಯಲ್ಲಿಟ್ಟುಕೊಂಡು ಕಾಗಿದ್ದಳು. ಸುಮಾರು ೨೦ ನಿಮಿಷದ ನಂತರ— "ಹಲೋ!—ಯಾರು?" ಎಂಬ ಸ್ತ್ರೀಕಂಠವೊಂದು ತಮಿಳಿನಲ್ಲಿ ಕೇಳಿತು.

"ಯಾರು ಸುಂದರೀಬಾಯಿಯೊ?"— ಗೌರಿ ಕನ್ನಡದಲ್ಲಿ ಕೇಳಿ ದಳು.

"ಹೌದು. ನೀವು?"

"ನಾನು ಗೌರಿ, ಅತ್ತಿಗೇ! ನಾನು ಗೌರಿ!"

"ಗೌರಿ! ಗೌರಿ! ಎಲ್ಲಿದ್ದಿ ಗೌರೀ? ಎಲ್ಲಿಂದ ಮಾತಾಡುತ್ತಿದ್ದಿ?" ಸುಂದರಿ ಆತುರದಿಂದ ಕೇಳುತ್ತಿದ್ದಳು.

"ಗಜವದನರಾಯರಲ್ಲಿಂದ. ಈಗ ತಾನೇ ಇಲ್ಲಿಗೆ ಬಂದೆ."

"ಆಹಾ! ಕ್ಷೇಮವಾಗಿದ್ದೀಯಾ ಗೌರಿ?"

"ಇದ್ದೇನೆ ಅತ್ತಿಗೇ! ನೀವು ಕ್ಷೇಮ ತಾನೆ?"

"ನನ್ನ ಕ್ಷೇಮಕ್ಕೇನು ಬಿಡು. ನಿನ್ನ ವಿಷಯವಾಗಿ ಭಯಂಕರ ವಾದ ಸಮಾಚಾರ ಕೇಳಿದೆನಲ್ಲಾ?"

"ಹೌದು. ದೇವರ ದಯದಿಂದ ಆಪತ್ತಿನಿಂದ ಪಾರಾದೆ. ಅದೆಲ್ಲಾ ನಿಧಾನವಾಗಿ ಹೇಳುವಾ. ನಾನು ಮಹಿಳಾಭ್ಯುದಯ ಮಂಡ

ಲಿಯ ಶಾಲೆಯಲ್ಲಿ ಸೇರಿ ನೃತ್ಯವನ್ನೂ ಸಂಗೀತವನ್ನೂ ಕಲಿಯಬೇಕೆಂದಿದ್ದೇನೆ. ಅಲ್ಲಿಯ ಕಾರ್ಯದರ್ಶಿಗಳಿಗೂ ಈ ವಿಷಯವಾಗಿ ಕಾಗದ ಬರೆಯಲ್ಪಟ್ಟಿದೆ ಅಲ್ಲದೆ ನನ್ನಣ್ಣ ನೀವು ಅಲ್ಲಿರುವ ವಿಷಯವನ್ನೂ ನನಗೆ ಹೇಳಿ, ನಿಮ್ಮನ್ನು ಅಗತ್ಯವಾಗಿ ನೋಡಬೇಕೆಂದಿದ್ದಾನೆ..........."

"ಹೌದು ಗೌರಿ. ಅವರು ನನಗೂ ಕಾಗದ ಬರೆದಿದ್ದಾರೆ. "ಅವರೀಗ ಬಳ್ಳಾರಿಯ ಜೈಲಿನಲ್ಲಿದ್ದಾರೆ ನಿನಗೆ ಗೊತ್ತಿದೆಯೆ?"

"ಈಗ ತಾನೇ ಗೊತ್ತಾಯಿತು."

"ಒಳ್ಳೇದು. ಎಷ್ಟೋ ಮಾತಾಡಬೇಕು ನಿನ್ನೊಡನೆ. ನೀನು ಸುಖವಾಗಿರುವುದನ್ನು ಕೇಳಿ ನನಗೆ ಬಹಳ ಸಂತೋಷವಾಯಿತು ನಾನು ನಾಳೆ ಬೆಳಗ್ಗೆ ಅಲ್ಲಿಗೆ ಬರುತ್ತೇನೆ. ಕೂಡಲೇ ನನ್ನೊಂದಿಗೆ ಹೊರಡುತ್ತೀಯಷ್ಟೆ?"

"ಹೌದು. ಅತ್ತಿಗೆ! ಅಷ್ಟು ಉಪಕಾರ ಮಾಡಿ. ನಾನೀಗ ಅನಾಥಳಂತಿದ್ದೇನೆ"

"ಅಯ್ಯೋ! ಉಪಕಾರವೇನು ಬಂತಮ್ಮ! ನಾಳೆ ಬೆಳಗ್ಗೆ ಖಂಡಿತ ಬರುತ್ತೇನೆ"

ಮರುದಿನ ಬೆಳಗ್ಗೆ, ಬಿಳೀ ಖಾದೀ ಸೀರೆಯನ್ನುಟ್ಟು, ಬಿಳೀ ಸಾದಾ ಖಾದೀ ರವಕೆಯನ್ನು ತೊಟ್ಟು, ಸುಮಾರು ೨೫ ವರ್ಷ ವಯಸ್ಸಿನ ಹೆಂಗಸೊಬ್ಬಳು, ಗಜವದನರಾಯರ ಮನೆಗೆ ಬಂದಳು. ಗೌರೀ ವಸಂತಿಯರು ಜಗುಲಿಯಲ್ಲಿಯೇ ಆವಳನ್ನು ಕಂಡರು. ವಸಂತಿ ಮುಂದೆ ಹೋಗಿ,— "ಬನ್ನಿ ಸುಂದರೀಬಾಯಿ!" ಎಂದು ಅವಳನ್ನು ಬರಮಾಡಿ ಕೊಂಡಳು. ಸಂದೇಹದಿಂದ ನೋಡುತ್ತಿದ್ದ ಗೌರಿ, ನಿಸ್ಸಂದೇಹಳಾಗಿ ಅಚ್ಚರಿಪಟ್ಟು— "ಅಹ! ನೀವೇ ನನ್ನ ಅತ್ತಿಗೆ ಸುಂದರಿಯೆ! ಎಷ್ಟು ವ್ಯತ್ಯಾಸವಾಗಿದ್ದೀರಿ? ಗುರುತೇ ಸಿಕ್ಕಲಿಲ್ಲ!" ಎನ್ನುತ್ತ ಆವಳ ಕೈಹಿಡಿದಳು.

ಸುಂದರಿ ನಗುತ್ತ— "ಗುರುತು ಸಿಕ್ಕಲಿಕ್ಕೆ ನನ್ನನ್ನು ನೋಡಿದ ನೆನಪಿದೆಯೇ ನಿನಗೆ? ನಾನು ನಿಮ್ಮನ್ನೆಲ್ಲಾ ಬಿಟ್ಟು ಅಗಲುವಾಗ, ನೀನು ಎಂಟೊಂಭತ್ತು ವರ್ಷದ ಹುಡುಗಿ! ನೀನು ಕೂಡಾ ಈಗ ಎಷ್ಟು ವ್ಯತ್ಯಾಸವಾಗಿದ್ದೀ" ಎನ್ನುತ್ತಾ ಅವಳೊಂದಿಗೆ ಕೋಣೆಯೊಳಗೆ ನಡೆದಳು

ಅಲ್ಲಿ ಗಜವದನರಾಯರು ಆಗ ತಾನೇ ಬಂದ "ಹಿಂದೂ" ಪತ್ರಿಕೆಯನ್ನು ಓದುತ್ತಾ ಈಸೀ ಚೇರಿನಲ್ಲಿ ಒರಗಿದ್ದರು.

ಸುಂದರಿ ತನ್ನ ಕೈಯಲ್ಲಿದ್ದೊಂದು ಸಣ್ಣ ಬ್ಯಾಗನ್ನು ಬೆಂಚಿಯ ಮೇಲಿಟ್ಟು,— "ನಮಸ್ತೇ ಸ್ವಾಮಿ" ಎಂದು ರಾಯರಿಗೆ ಕೈಮುಗಿದಳು.

ರಾಯರು ಪ್ರತಿವಂದನೆ ಗೈದು ಅವಳನ್ನು ಕೂಡುವಂತೆ ಹೇಳಿ, ಕ್ಷೇಮಲಾಭ ವಿಚಾರಣೆ ಮಾಡಿದರು.

ಪ್ರಸ್ತಾಪದ ಮಾತುಗಳಲ್ಲಿ ಗೌರಿಯನ್ನು ಮಹಿಳಾಭ್ಯುದಯ ಮಂಡಲಿಗೆ ಕರೆದೊಯ್ಯುವುದಕ್ಕಾಗಿ ತಾನು ಬಂದಿರುವೆನೆಂದು ಸುಂದರಿ ಹೇಳಿದಳು.

ರಾಯರು ಅದಕ್ಕೆ ಉತ್ತರ ಕೊಡುತ್ತ— " ನಾಟ್ಯ-ಸಂಗೀತ ಮುಂತಾದ ಕಲೆಗಳು ಸಿನಿಮಾ ಚಿತ್ರಪ್ರದರ್ಶನದಲ್ಲಿ ಸಾರ್ಥಕ ಹೊಂದುವಂತಹವುಗಳು. ಧನವೂ ಯಶವೂ ಒಟ್ಟಿಗೇ ಬರುವುದು ಇಲ್ಲಿಯೇ. ಸಿಕ್ಕಿದ ಸುಸಂದರ್ಭವನ್ನು ಕಳೆದುಕೊಂಡು, ವ್ಯರ್ಥವಾಗಿ ಕಲಾಶಾಲೆಗೆ ಸೇರಿ ಕಾಲವನ್ನು ವ್ಯಯಪಡಿಸುವುದೇಕೆ ? ಫಿಲಿಂನಲ್ಲಿಯಾದರೆ ಕಲಿಯುವಿಕೆಯೂ, ಅದರ ಫಲವೂ ಒಟ್ಟಿಗೇ ಸಿಕ್ಕುವುದಲ್ಲವೇ ? ಸುಂದರೀಬಾಯಿ ! ನೀವು ಕೂಡಾ ಫಿಲಿಂನಲ್ಲಿ ಅಷ್ಟು ವಿಖ್ಯಾತರಾಗಿದ್ದೂ, ಅದನ್ನು ಬಿಟ್ಟು ಬಿಟ್ಟದ್ದಕ್ಕಾಗಿ ನಾನು ವ್ಯಸನ ಪಡುತ್ತೇನೆ. ವ್ಯಂಗ್ಯ ನಾಟ್ಯಕಲೆಯ ಅಭಿವೃದ್ಧಿಗೆ ನಿಮ್ಮಿಂದ ದೊಡ್ಡ ನಷ್ಟವಾಯಿತೆನ್ನಬೇಕು. ಈಗ ನಿಮ್ಮಂತಹ ವ್ಯಂಗ್ಯ ಕಲಾಭಿನಯಶಾಲಿಗಳು ಯಾರಾದರೂ ಇದ್ದಾರೆಯೇ? ಯಾರೂ ಇಲ್ಲ!" ಎಂದರು.

ಸುಂದರಿ ಹಿರಿಯರಾದ ಆ ರಾಯರೊಡನೆ ಈ ವಿಷಯವಾಗಿ ಚರ್ಚಿಸಲು ಇಷ್ಟವಿರಲಿಲ್ಲ "ಏನೋ ನನಗೆ ಅದರಲ್ಲಿ ಬೇಸರ ಬಂದು ಬಿಟ್ಟು ಬಿಟ್ಟೆ ನನ್ನ ವಿದ್ಯೆಯನ್ನು ನಾನು ನನ್ನಂತೆಯೇ ಕುರೂಪಿಗಳಾದ ಹುಡುಗಿಯರಿಗೆ ಹೇಳಿಕೊಡುತ್ತಿದ್ದೇನಲ್ಲವೆ ? ಈ ಬಗೆಯ ಸೇವಾ ಕಾರ್ಯಗಳೇ ನನಗೆ ಸಾಕು " ಎನ್ನುತ್ತಾ ಸುಂದರಿ, ತನ್ನ 'ಹೇಂಡ್ ಬ್ಯಾಗ'ನ್ನು ತೆರೆದು, ಒಂದು ಪುಸ್ತಕವನ್ನೆತ್ತಿ ಬಿಡಿಸುತ್ತ—"ತಮ್ಮ ಸಹಾಯಕ ದಾನವನ್ನು ನಾನೀಗ ಜ್ಞಾಪಕಪಡಿಸಬಹುದೇ?" ಎಂದು ಜ್ಞಾಪಕಪಡಿಸಿದಳು ಹಾಗು ಆ ಪುಸ್ತಕದಲ್ಲಿ ಗಜವದನರಾಯರ ಹೆಸರನ್ನು ತೋರಿಸಿದಳು.

ರಾಯರು— "ಓಹೋ! ಬರ್ಮಾ ಎವಾಕ್ಯುವೇಶನ್ನಿಗೆ ನಾನು ಇಪ್ಪತ್ತೈದು ರೂಪಾಯಿ ಬರೆದಿದ್ದೆನಲ್ಲವೆ? ಈಗಲೇ ಕೊಟ್ಟು ಬಿಡುತ್ತೇನೆ" ಎಂದು ಎದ್ದು ಒಳಗೆ ಹೋಗಿ ರೂಪಾಯಿಗಳನ್ನು ತಂದು ಎಣಿಸಿ ಕೊಟ್ಟು ಪುಸ್ತಕದಲ್ಲಿ "ಪೇಡ್" ಎಂದು ಬರೆದು ಕೊಟ್ಟರು.

"ತುಂಬಾ ಉಪಕಾರ" ಎಂದಳು ಸುಂದರಿ

ಅನಂತರ ಸುಂದರಿ, ಗೌರಿಯನ್ನು ತನ್ನೊಂದಿಗೆ ಕರೆದುಕೊಂಡು, ಹೊರಡಲನುವಾದಳು. ವಸಂತಿ, ರಾಯರು, ಮೊದಲಾದ ಎಲ್ಲರನ್ನೂ ಬೀಳ್ಕೊಂಡಳು ಬಳಿಕ ಇಬ್ಬರೂ ಅಲ್ಲಿಂದ ಹೊರಟರು. ಆಗ ಗೌರಿ ತನ್ನ ಬಟ್ಟೆಬರೆಗಳನ್ನೆಲ್ಲ ಒಂದು ಚಿಕ್ಕ ಸೂಟುಕೇಸಿನಲ್ಲಿ ತುಂಬಿಸಿಕೊಂಡು, ಕೈಯಲ್ಲಿ ಹಿಡಿದಿದ್ದಳು. ಹೆಚ್ಚು ಭಾರವಿಲ್ಲದೆ ಹಗುರಾಗಿತ್ತು ಆ ಪೆಟ್ಟಿಗೆ.

ಶೀನಣ್ಣನ ಹೆಂಡತಿ, ತನ್ನ ಅತ್ತಿಗೆ ಸುಂದರಿಯನ್ನು ಕೌತುಕದಿಂದ ನೋಡುತ್ತಾ, ಅವಳ ಈಗಿನ ವೃತ್ತಿವೇಷಗಳನ್ನೂ, ಹಿಂದಿನ ಕತೆಯನ್ನೂ, ಸಿನಿಮಾಲೋಕದಲ್ಲಿ ಮೆರೆದ ಅವಳ ಮಧ್ಯಕಾಲದ ವೈಭವವನ್ನೂ ನೆನೆದು ಆಶ್ಚರ್ಯಪಡುತ್ತಾ ಅವಳೊಂದಿಗೆ ಹೋಗುತ್ತಿದ್ದಳು ಗೌರಿ.

ಹಳ್ಳಿಯಲ್ಲಿ ಅಜ್ಜಿಯ ಪರಾಂಬರಿಕೆಯಲ್ಲಿ ಬೆಳೆದ ಹುಡುಗಿ ಸುಂದರಿ. ಬಹಳ ಕುರೂಪಿ, ವಿಕಲಾಂಪಿ ದೊಡ್ಡ ಶ್ರೀಮಂತರೂ, ಸರಕಾರೀ ಅಧಿಕಾರಿಗಳೂ ಆದ ಮುಕುಂದರಾಯರೇ ಅವಳ ಜನ್ಮದಾತರೆಂದರೆ ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ? ಮುಕುಂದರಾಯರ ಮೊದಲನೆಯ ಹೆಂಡತಿ ಕುರೂಪಿ, ಅವಳ ಹೊಟ್ಟೆಯಲ್ಲಿ ಹುಟ್ಟಿದ ಸುಂದರಿ ಇನ್ನಷ್ಟು ಕುರೂಪಿ.

ಅದೇ ಅವಳ ಹೊಟ್ಟೆಯಲ್ಲಿ ಹುಟ್ಟಿದ, ಸುಂದರಿಯ ಅಣ್ಣ ವರದನು ಒಳ್ಳೇ ಸುರೂಪಿಯಾಗಿದ್ದಾನೆ. ಇದೂ ಒಂದು ಆಶ್ಚರ್ಯವೇ!

ಎರಡನೆಯ ಬಾರಿ ಕುರೂಪಿ ಮಗಳು ಹುಟ್ಟುತ್ತಲೇ—ಮೊದಲೇ ಬೇಡಾದ ಹೆಂಡತಿ— ಮುಕುಂದರಾಯರು, ಹೆಂಡತಿಯನ್ನೂ ತ್ಯಾಜ್ಯ ಮಾಡಿಬಿಟ್ಟರು ಆದುದುದರಿಂದ ಸುಂದರಿ ತಂದೆ 'ಯಾರೆಂದು ತಿಳಿಯದೆ, ತಾಯಿಯೂ ಬೇಗನೇ ತೀರಿಹೋದ ಮೇಲೆ, ಅಜ್ಜಿಯ ಆರೈಕೆ

ಯಲ್ಲಿಯೇ ಬೆಳೆದಳು ಮುಕುಂದರಾಯರು ದೂರ ಅಡಗಿದ್ದೇ ಉಪಾಯ ವಾಗಿ ಮಗಳ ಮದುವೆಗೂ ಏರ್ಪಾಡು ಮಾಡಿದರು. ತಂತ್ರಶಾಲಿಗಳಾದ ನಮ್ಮ ರಾಮಾ ಜೋಯಿಸರು, ಯುಕ್ತಿಯಿಂದ ಈ ಸುಂದರಿಯನ್ನು ನಮ್ಮ ಶೀನಣ್ಣನ ಕೊರಳಿಗೆ ಕಟ್ಟಿಬಿಟ್ಟರು ಹೆಂಡತಿಯನ್ನು ಮನವೊ ಡೆವ ಶೀನು, ಊರು ಬಿಟ್ಟು ಫರಾರಿಯಾದ. ಕೃಷ್ಣ ಸುಂದರಿಯನ್ನು ಮನೆಯಿಂದ ಹೊರಗೆ ಹೊರಡಿಸಿ ಬಿಟ್ಟ ರಾಮಾ ಜೋಯಿಸರು ಅವ ಳನ್ನು ಮದರಾಸಿನ "ಪ್ರಕೃತಿ ಕಳೋದ್ಧಾರಕ" ಫಿಲಿಂ ಕಂಪೆನಿಗೆ ಸೇರಿಸಿ ಬಿಟ್ಟರು. ಹಳ್ಳಿಯ ಬಡ್ಡಿ ಸುಂದರಿ ಫಿಲಿಂ ಕಂಪೆನಿಯನ್ನು ಸೇರಿ, ಅವಳ ವಿಕೃತ ರೂಪಾಕಾರಕ್ಕೆ ತಕ್ಕಂತೆ, ವ್ಯಂಗ್ಯ ಸಂಗೀತ, ವ್ಯಂಗ್ಯ ನಾಟ್ಯಗಳಲ್ಲಿ ಸುಪ್ರಸಿದ್ಧಳಾಗಿ ಎಲ್ಲೆಲ್ಲಿಯೂ ಅವಳ ಹೆಸರು ಜನಜನಿತ ವಾಗಿ ಹೋಯಿತು ! ಅವಳು ನಟಿಸಿದ ಸಿನೆಮಾವನ್ನು ನೋಡಲು ಜನ ರಿಗೆ ಅದೆಷ್ಟು ಕುತೂಹಲ !

ಹಾಗಿದ್ದೂ ಅವಳೀಗ ಸಿನಿಮಾ ವಾತಾವರಣದಿಂದ ದೂರವಾಗಿ ದ್ದಾಳೆ ! ತನ್ನ ಕಲೆಯನ್ನು ತನ್ನಂತಿರುವ ಹುಡುಗಿಯರಿಗೆ ಕಲಿಸುವ ಸೇವೆಯನ್ನು ಮಾಡುತ್ತಿದ್ದಾಳೆ. ಲೋಕದಲ್ಲಿ ಎಲ್ಲಾ ಹುಡುಗಿಯರೂ ಸುಂದರಿಯರಾಗಿ ಹುಟ್ಟುತ್ತಾರೆಯೆ ? ಸುಂದರಿಯರಿಗೂ, ಸುಲಕ್ಷಣ ಯುಕ್ತರಾಗಿರುವವರಿಗೂ, ಲಲಿತಕಲೆಗಳು ಒಪ್ಪುತ್ತವಾದರೆ, ಅಲ್ಪಸ್ವಲ್ಪ ಕುಂದು ಕೊರತೆಗಳುಳ್ಳ ಸರ್ವಸಾಮಾನ್ಯರಿಗೆಲ್ಲಾ ವ್ಯಂಗ್ಯಕಲೆಗಳು ಹೊಂದಿಕೊಳ್ಳುತ್ತವೆ. ನವರಸಗಳ ಗುಂಪಿಗೆ ಸೇರಿದ ಹಾಸ್ಯ, ಬೀಭತ್ಸ ರಸಗಳು ವ್ಯಂಗ್ಯ-ವಿಕೃತಕಲೆಗಳಲ್ಲಿ ಪ್ರಧಾನವಾಗಿವೆ. ಇದನ್ನು ಮೆಚ್ಚು ವವರೆಲ್ಲ ಸಾಮಾನ್ಯ ಜನತೆಯೇ ಆದರೂ, ಸುಸಂಸ್ಕೃತರು ಕೂಡಾ ಅದನ್ನು ನೋಡಿ ಮೆಚ್ಚಿ ರಸಿಸಿ ಆನಂದದಲ್ಲಿ ಲೋಲಾಡಬಹುದೆಂದು, ಸುಂದರಿಯಿಂದ ಶಿಕ್ಷಣಹೊಂದಿದ ಹುಡುಗಿಯರು ತೋರಿಸಿಕೊಡುತ್ತಾರೆ. "ಬರ್ವಾ ಎವಾಕ್ಯುವೇಶನ್ನಿ"ನ ನಿಧಿಯ ಸಂಗ್ರಹಕ್ಕಾಗಿ ಅವಳು, ತನ್ನಿಂದ ಶಿಕ್ಷಣ ಪಡೆದ ಬಡ ಹುಡುಗಿಯರ ಗೋಷ್ಠಿಯೊಂದಿಗೆ ಊರು ಪರವೂರುಗಳಿಗೆಲ್ಲಾ ಹೋಗಿ, ವ್ಯಂಗ್ಯ ಸಂಗೀತ, ವ್ಯಂಗ್ಯ ನಟನೆಗಳ ಪ್ರದರ್ಶನದಿಂದ ಹೇರಳ ಧನಸಂಗ್ರಹ ಮಾಡಿಕೊಟ್ಟಿದ್ದಾಳೆ ಮನೆಮನೆಗೆ ಹೋಗಿ ಚಂದಾ ಮೂಲಕ ವಸೂಲು ಬೇರೆ ಮಾಡುತ್ತಿದ್ದಾಳೆ. ಬರ್ಮಾ

ದೇಶದಲ್ಲಿ ನಡೆಯುವ ಯುದ್ಧದಲ್ಲಿ ಅರೆಪ್ರಾಣ ಮುಕ್ಕಾಲು ಪ್ರಾಣದಿಂದ ಬಂದವರೂ, ಹವೆಕೆಟ್ಟು, ದಾರಿಯಲ್ಲಿ ಅನ್ನಾಹಾರವಿಲ್ಲದೆ, ಕಂಡದ್ದುಂಡು ರೋಗಗ್ರಸ್ತರಾದವರೂ, ಯಾರೂ ದಿಕ್ಕಿಲ್ಲದ ಅನಾಥರೂ, ಮದರಾಸಿಗೆ ಬಂದು ಬಂದು ತುಂಬುತ್ತಲೇ ಇದ್ದರು. ರೋಗಿಗಳನ್ನು ಇಡಲಿಕ್ಕೆ ಸ್ಥಳವಿಲ್ಲದೆ ಸರಕಾರದವರು ಪೇಚಾಡುತ್ತಿದ್ದಾಗ, "ಮಹಿಳಾಭ್ಯುದಯ ಮಂಡಲಿ" ತನ್ನ ತೆಕ್ಕೆಯೊಳಗೂ ಒಂದು ಶಾಖೆಯನ್ನು ತೆರೆದುಕೊಟ್ಟಿತು. ಕಲಾಸಂಬಂಧ, ಕೃಷಿಸಂಬಂಧ, ಗೃಹಕೃತ್ಯಸಂಬಂಧ, ವಿಜ್ಞಾನಸಂಬಂಧ ಮೊದಲಾದ ಅನೇಕ ಶಾಖೆಗಳಲ್ಲಿ 'ಅನಾಥ ಚಿಕಿತ್ಸಾಲಯ' ಎಂಬ ಶಾಖೆ ಅಲ್ಲಿ ಇತ್ತೀಚೆಗೆ ಹೊಸದಾಗಿ ಸ್ಥಾಪನೆಯಾಗಿತ್ತು. ಸುಂದರಿ ಅಲ್ಲಿಯೂ ತನ್ನ ಸೇವಾಕಾರ್ಯವನ್ನು ಸಲಿಸುತ್ತಿದ್ದಳು. ಹಳ್ಳಿಯ ಅಸಂಸ್ಕೃತ ಹುಡುಗಿಯಾದ ಸುಂದರಿ, ಪಟ್ಟಣ ಸೇರಿ ಎಷ್ಟು ಸುಸಂಸ್ಕೃತಳಾಗಿ ಹೋಗಿದ್ದಾಳೆ! ಮನಸ್ಸಿನಲ್ಲಿ ಭಾವದಲ್ಲಿ ರೂಪದಲ್ಲಿ ಆಕಾರದಲ್ಲಿ, ಹೀಗೆ ಎಲ್ಲದರಲ್ಲಿಯೂ ಪಲ್ಲಟಿಸಿ ಹೋಗಿದ್ದಾಳೆ!

ಕಪ್ಪಿನವಳು, ದಪ್ಪದವಳು, ದೊಡ್ಡ ಮುಖ, ಸಣ್ಣ ಕಣ್ಣು ಹೀಗೆಲ್ಲಾ ವಿಕಲಾಂಗಿಯಾಗಿದ್ದ ಸುಂದರಿಯೇ ಇವಳು? ಈಗ ಇವಳು ಅಷ್ಟು ಕಪ್ಪೂ ಇಲ್ಲ, ದಪ್ಪವೂ ಇಲ್ಲ! ವಿಕಲಾಂಗದಲ್ಲಿ ಒಂದು ಬಗೆಯ ಲಾಲಿತ್ಯವು ಹರಡಿಕೊಂಡಿದೆ ನಾಟ್ಯವಾಡಿಯಾಡಿ ವ್ಯಾಯಾಮಗೊಂಡು ಹಾಗಾಗಿರಬೇಕು. ಸಿನೆಮಾದಲ್ಲಿ ವಿಖ್ಯಾತಳಾದಂತೆ, ಒಂದಿಗೇ ಧನಾಗಮನವೂ ಚೆನ್ನಾಗಿ ಆಯಿತಲ್ಲವೆ? ಐಶ್ವರ್ಯ ಲಕ್ಷ್ಮಿಯು ಒಲ್ಮೆಗೆ ಸಿಕ್ಕಿದರೆ ಮನಸ್ಸಿಗೆ ಒಂದು ಬಗೆಯ ಸೊಂಪೂ ತಂಪೂ ಉಂಟಾಗಿ, ದೇಹವೂ ಕಳೆಗೊಳ್ಳುವುದನ್ನು ನಾವು ನೋಡಿದ್ದೇವೆ; ಕೇಳಿದ್ದೇವೆ. ಹಾಗೆ ಕಳೆಗೊಂಡು ಕಾಣುತ್ತಿದ್ದಾಳೆ ಈಗ ಈ ಸುಂದರಿ. ಸತ್ಸೇವಾನಿರತಳಾಗಿರುವುದರಿಂದ. ಆ ಕಳೆಯೊಂದಿಗೆ ಒಂದು ಸಾತ್ವಿಕ ಶಾಂತ ಕಾಂತಿಯೂ ಸೇರಿ, ಈಗ ಅವಳೊಬ್ಬಳು ದೇವಿಯಂತೆಯೇ ಒಪ್ಪುತ್ತಿದ್ದಾಳೆ!

---

# ೩೭

ತಿರುವಲ್ಲಿಕೇಣಿಯಿಂದ ಗೌರಿಯನ್ನು ಕರೆದುಕೊಂಡು ಹೊರಟ ಸುಂದರಿ, ಸಿಟೀಬಸ್ಸು ಹತ್ತಿ ಸೆಂಟ್ರಲ್ಲಿನ ಹತ್ತಿರ ಇಳಿದು ಅಲ್ಲಿಂದ ಪಾರ್ಕ್ ಸ್ಟೇಶನ್ನಿನಲ್ಲಿ ಎಲೆಕ್ಟ್ರಿಕ್ ರೈಲನ್ನು ಏರಿದಳು ಗೌರಿ ಎಲೆಕ್ಟ್ರಿಕ್ ರೈಲಿನಲ್ಲಿ ಕುಳಿತುದು ಇದೇ ಮೊದಲು. "ಜಿಗುಜಗ್ಗು—ಜಿಗುಜಿಗು—" ಎಂದು ವೇಗವಾಗಿ ಓಡುವ ಆ ರೈಲು ಅರ್ಧ ಗಂಟೆಯೊಳಗೆ ಅನೇಕ ಸ್ಟೇಶನ್ನುಗಳಲ್ಲಿ ನಿಂತು ನಿಂತು ದಾಟಿ, 'ತಾಂಬರಂ" ತಲಪಿತು ಕೂಡಲೇ ಗೌರಿ, ಸುಂದರಿಯರು ಇಳಿದರು.

ಅಲ್ಲಿಂದ ಸ್ವಲ್ಪದೂರ ಕಾಲುನಡಿಗೆಯಿಂದ ಹೋಗುತ್ತಲೇ, ಒಂದು ದೊಡ್ಡ ಎತ್ತರವಾದ ಪೌಳೀ ಗೋಡೆಯ ಕಂಪೌಂಡು ಕಾಣಿಸಿತು. ಅದರೊಳಗೆ ತೋಟಗಳೂ ಮನೆಗಳೂ ಕಂಗೊಳಿಸುತ್ತಿದ್ದವು. ಅಲ್ಲಿ ಪಟ್ಟಣದ ಜನಜಂಗುಳಿಯು, ನೂರಾರು ವಾಹನಗಳ "ಕಲಕಲ ಗಡಗಡಾ"ಟಗಳು ಕೊಂಚವೂ ಇರಲಿಲ್ಲ ಪಟ್ಟಣಕ್ಕೆ ಹೊಂದಿಕೆಂಡಿದ್ದರೂ ಹೊರಗೆ, ತಾವರೆಯೆಲೆಯ ಮೇಲಣ ನೀರಿನಂತೆ, ಪಟ್ಟಣಕ್ಕೆ ಅಂಟದೆ ಶಾಂತತೆಯನ್ನು ಸೆರೆಹಿಡಿದಿಟ್ಟುಕೊಂಡಿರುವಂತೆ ಕಾಣುತ್ತಿತ್ತು ಆ ಕಂಪೌಂಡು.

ಕಂಪೌಂಡಿನ ವಿಶಾಲ ಮನೋಜ್ಞವಾದ ಗೇಟಿನ ಕಮಾನಿನಲ್ಲಿ "ಮಹಿಳಾಭ್ಯುದಯ ಮಂಡಲಿ" ಎಂಬ ದೊಡ್ಡ ದಪ್ಪ ಗುಂಡು ಲೋಹದ ಅಕ್ಷರಗಳು ಉಜ್ವಲಿಸುತ್ತಿದ್ದುವು. ಅಲ್ಲಿಯೂ ಮುಖದ್ವಾರದಲ್ಲಿ ಇಬ್ಬರು ಘೂರ್ಕಾ ಸಿಪಾಯಿಗಳಿದ್ದಾರೆ! "ಪ್ರಕೃತಿ ಕಳೋದ್ಧಾರಕ" ಕಂಪೆನಿಯ ಘೂರ್ಕಾ ಸಿಪಾಯಿಗಳು, ಅಲ್ಲಿಯ ಸ್ಥಳಗುಣ ವಿಶೇಷದಿಂದಾಗಿ ಗೌರಿಗೆ ಭಯಂಕರರಾಗಿ ತೋರಿದಂತೆ ಇಲ್ಲಿಯವರು ತೋರಲಿಲ್ಲ ಇವರು ಈ ಸ್ಥಳಗುಣಾನುಸಾರವಾಗಿ ಅಭಯಪ್ರದ ವೀರರಾಗಿ ತೋರಿದರು. ಮದ್ರಾಸಿನ ಮಾಯಾಜಾಲದ ನರಕಲೋಕದಿಂದ, ತಾನೊಂದು ಸ್ವರ್ಗಲೋಕಕ್ಕೆ ಬಂದಂತೆ ಅವಳಿಗೆ ತೋರಿತು ಇಂತಹ ಸ್ಥಳಕ್ಕೆ ತಂದು ಬಿಟ್ಟ ಆ ಎಲೆಕ್ಟ್ರಿಕ್ ಟ್ರೈನು ಚಿರಂಜೀವಿಯಾಗಿರಲೆಂದು ಅವಳು ಹರಸಿದಳು.

ಮುಖದ್ವಾರದಿಂದ ಒಳಗಡೆಗೆ ಹೋದಂತೆ ಈ ಮೊದಲು ಅವಳು ಪಟ್ಟ ಕಷ್ಟಗಳೆಲ್ಲ ಒಂದು ಕನಸಿನಂತೆ ಭಾಸವಾಗತೊಡಗಿತು. ಅಲ್ಲಿಯ

ದೃಶ್ಯವು ಅಂತಹುದು. ಆ ಉದ್ಯಾನಗಳ ಸೊಂಪೇನು! ಅಲ್ಲಿ ಬೆಳೆದು ಹರಡಿರುವ ಹೂಬಳ್ಳಿಗಳ ಒಯ್ಯಾರವೇನು! ಅರಳಿ ನರುಗಂಪಿಡುಗಿಸುವ ನಾನಾ ಜಾತಿಯ ಸುಂದರ ಕುಸುಮಗಳ ಸೊಗಸೇನು! ಒಂದು ಕಡೆ ಅಂದವಾದ ತರಕಾರೀ ತೋಟಗಳು. ಇನ್ನೊಂದು ಕಡೆ ತಾವರೆಗಳರಳಿ ಮಿನೋಟವೊಳಗೊಂಡ ನೀರು ತುಂಬಿದ ಚೆಂದವಾದ ಕೊಳ. ಆಹಾ! ಅಡ್ಡಾದಿಡ್ಡಿಯಾಗಿ ಬೀದಿಬೀದಿಗಳಿಂದ ಬಲೆಯಂತೆ ಹೊಲಿಯಲ್ಪಟ್ಟಿರುವ ಮದರಾಸಿನ ಪಕ್ಕದಲ್ಲಿ, ಇಂತಹುದೊಂದು ಸ್ವರ್ಗತುಲ್ಯ ಸ್ಥಳವಿದ್ದೀತೆಂದು ಗೌರಿ ಊಹಿಸಿಯೇ ಇರಲಿಲ್ಲ. ಆ ಮಂಡಲಿಯ ಸ್ಥಳವೆಂದರೆ ಸುಮಾರು ಹತ್ತು ಹನ್ನೆರಡು ಎಕರೇ, ವಿಸ್ತಾರವಾದ ಸುತ್ತಳತೆಯ ವಠಾರವಾಗಿತ್ತು.

ನಡುಗಡೆ ಸುಂದರವೂ ಭವ್ಯವೂ ಆದ ಆಫೀಸು ಕಟ್ಟಡವಿದೆ. ಅದರ ಆಚೀಚೆ ಬದಿಗಳಲ್ಲಿ, ಹೂತೋಟಗಳ ನಡುನಡುವೆ, ಬೇರೆ ಬೇರೆ ಮಂದಿರಗಳೂ, ಬೇರೆ ಬೇರೆ ಶಾಲೆಗಳೂ ರಂಜಿಸುತ್ತಿದ್ದುವು. ಎಲ್ಲಕ್ಕೂ ಹಿಂದೆ ಆಟದ ಮೈದಾನವಿತ್ತು. ಅದರಾಚೆಗೆ ಅನಾಥ ಚಿಕಿತ್ಸಾಲಯದ ಉದ್ದವಾದ ಕಟ್ಟೋಣ ಒಂದು ಪಾರ್ಶ್ವವಾಗಿ ಬಾವಿ-ಬಚ್ಚಲು ಕಟ್ಟಡದ ಬದಿಯಲ್ಲಿ ಅಡುಗೆಯ ಶಾಲೆಯಿತ್ತು. ಅದಕ್ಕೆ ಹೊಂದಿಕೊಂಡು ವಿಶಾಲವಾದ ಭೋಜನ ಶಾಲೆ. ಅದರಾಚೆಗೆ ಕಾಣುವುದು ಗೋಶಾಲೆ.

ತರಕಾರೀ ತೋಟಗಳಲ್ಲಿಯೂ, ಹೂಗಳ ಉದ್ಯಾನದಲ್ಲಿಯೂ ಕೆಲವರು ಹೆಂಗುಸರೂ ಹುಡುಗಿಯರೂ, ಗಿಡಗಳಿಗೆ ನೀರು ಹಾಕುತ್ತ, ಉಲ್ಲಾಸವಾಗಿ ಕೆಲಸಮಾಡುತ್ತಿದ್ದರು.

ಸುಂದರಿ ಗೌರಿಗೆ ಅಲ್ಲಿಯ ದೃಶ್ಯಗಳನ್ನೆಲ್ಲ ಸ್ಥೂಲವಾಗಿ ತೋರಿಸುತ್ತ ಆಫೀಸು ಕಟ್ಟಡದಲ್ಲಿರುವ ಅಲ್ಲಿಯ ಮುಖ್ಯ ಕಾರ್ಯದರ್ಶಿಗಳ ಕೋಣೆಗೆ ಕರೆದೊಯ್ದಳು.

ಪ್ರಥಮ ಕಾರ್ಯದರ್ಶಿನಿಯೂ, ಶಿರೋಧಿಕಾರಿಣಿಯೂ ಆಗಿರುವವಳೊಬ್ಬಳು ಶ್ರೀಮಂತ ಮಹಿಳೆ ಕಸ್ತೂರಿಬಾ, ಎಂ ಎ ಎಂಬುದು. ಅವಳ ವಿಖ್ಯಾತ ನಾಮ. ಅವಳ ಪತಿ ದೊಡ್ಡ ಜಹಗೀರುದಾರರಿದ್ದರು ಅವರು ಹೆಂಡತಿಯ ಹೆಸರಿಗೆ ಅನೇಕ ಲಕ್ಷ ರೂಪಾಯಿಗಳನ್ನು ಬರೆದು ಕೊಟ್ಟು, ಸ್ವರ್ಗಸ್ಥರಾಗಿದ್ದರು. ಅವರಿಗೆ ಮಕ್ಕಳಿಲ್ಲ. ಅವಳು ಉದಾರ ಬುದ್ಧಿಯಿಂದ ತನ್ನ ಹೆಸರಿನ ಯಾವತ್ತು ಸೊತ್ತನ್ನೂ ಮೂಲ ನಿಧಿಯಾಗಿ

ಸಮರ್ಪಿಸಿ, ತನ್ನ ಧ್ಯೇಯಕ್ಕೊಪ್ಪುವ ಹೆಸರಿನಿಂದ ಈ ಸಂಘವನ್ನು ಸ್ಥಾಪಿಸಿದ್ದಳು. ಅದು ಬೇಗಬೇಗನೇ ಅಭಿವೃದ್ಧಿಯನ್ನೈದಿ ಅನೇಕ ಶಾಖೆಗಳನ್ನು ಬಿಟ್ಟು ಬಹಳ ಪ್ರಖ್ಯಾತವಾಯಿತು. ಅಲ್ಲಿಯ ಶಿಕ್ಷಣ ಖಾತೆಗಳು ಮದರಾಸು ವಿಶ್ವವಿದ್ಯಾಲಯದಿಂದ ಅಂಗೀಕರಿಸಲ್ಪಟ್ಟಿದ್ದುವು.

ಮುಖ್ಯ ಕಾರ್ಯದರ್ಶಿಗಳೊಡನೆ ಮಾತಾಡಿ, ಗೌರಿಯ ಹೆಸರನ್ನು ರಿಜಿಸ್ಟ್ರಿಯಲ್ಲಿ ಬರೆಯಿಸಿದ ಮೇಲೆ, ಶಿರೋಧಿಕಾರಿಣಿ ಕಸ್ತೂರಿಬಾಯಿಯ ಸನ್ನಿಧಿಗೆ ಸುಂದರಿ ಗೌರಿಯನ್ನು ಕರೆದು ತಂದಳು.

ಸರಳಶುಭ್ರ ಉಡುಗೆಗಳಿಂದ ಕರ್ಮಯೋಗಿನಿಯಂತೆ ಕಾಣುವ, ನಿರಾಡಂಬರೆಯಾಗಿ, ವಿದ್ಯಾಪೂರ್ಣ ತೇಜಸ್ಸಿನಿಂದೊಪ್ಪುವ ಕಸ್ತೂರೀಬಾಯಿ, ಗೌರಿಯನ್ನು ಅಕ್ಕರೆಯಿಂದ ಆದರಿಸಿದಳು. ಸ್ವಲ್ಪ ಮಾತ್ರ ಗೌರಿಯೊಡನೆ ಮಾತಾಡುವಷ್ಟರಲ್ಲಿ, ಕಸ್ತೂರಿಬಾಯಿಗೆ ವಿಶೇಷವಾದೊಂದು ತೃಪ್ತಿಯೂ ಸಂತೋಷವೂ ಆದಂತೆ ತೋರಿತು. ಕಸ್ತೂರಿಬಾಯಿ ಒಳ್ಳೆಯ ಕಲಾಭಿಜ್ಞೆಯೂ ಆಗಿದ್ದಳು. ಅಲ್ಲಿ ನಾಟ್ಯ ಕಲಿಯಲು ಬಂದ ವಿದ್ಯಾರ್ಥಿನಿಯರಲ್ಲಿ ಗೌರಿಯಂತಹ ವೈನಯವುಳ್ಳವರು. ಯಾರೂ ಇರಲಿಲ್ಲ. ಆದುದರಿಂದ ಗೌರಿಯನ್ನು ತುಂಬಾ ಮೆಚ್ಚಿಕೊಂಡಳು. ಅವಳು ಮಾತಿನಲ್ಲಿ, ಕೃತಿಯಲ್ಲಿ, ಕಣ್ಣಿನಲ್ಲಿ ತೋರಿಸಿದ ಪ್ರೇಮಾದರಗಳನ್ನು ನೋಡಿ, ಮಾತೃಸ್ನೇಹವನ್ನು ಕಳೆದುಕೊಂಡ ಗೌರಿಗೆ, ಅದು ಪುನಃ ನೂತನ ಸುಖಾಮೃತರೂಪದಲ್ಲಿ ಸಿಕ್ಕಿದಂತೆ ಸಂತೋಷವಾತು.

ಗೌರಿಗೆ ಸಂಗೀತ-ನಾಟ್ಯಗಳಲ್ಲಿ ಮಂಗಳೂರಿನಲ್ಲಿಯೇ ಸ್ವಲ್ಪ ಮಟ್ಟಿಗೆ ಶಿಕ್ಷಣವಾಗಿದ್ದುದರಿಂದ, ಅದನ್ನು ಪರೀಕ್ಷೆಮಾಡಿ, ಅನಂತರ ಅವಳನ್ನು ಯಾವ ಶಾಲೆಯ ಯಾವ ತರಗತಿಗೆ ಸೇರಿಸುವುದೆಂದು ನಿರ್ಣಯವಾಗಬೇಕಿತ್ತು. ಗೌರಿ ಬರಿಯ ಸಂಗೀತ-ನಾಟ್ಯ ಮಾತ್ರವಲ್ಲದೆ, ಉಳಿದ ವೇಳೆಯಲ್ಲಿ ಗೋಸೇವೆ, -ತೋಟದ ಕೆಲಸ, ಮೊದಲಾದ ನಿತ್ಯೋಪಯೋಗಿ ಕೆಲಸಗಳಲ್ಲಿ ಭಾಗಿಯಾಗುವೆನೆಂದೂ, ಸುಂದರಿಯ ಜತೆಯಲ್ಲಿ ಅನಾಥ ಚಿಕಿತ್ಸಾಲಯದಲ್ಲಿ ಚಿಕಿತ್ಸಾಕ್ರಮವನ್ನೂ ಕಲಿಯುವೆನೆಂದೂ, ಹೇಳಿದಳು. ಅವಳ ಉತ್ಸಾಹವನ್ನು ನೋಡಿ ಕಸ್ತೂರಿಬಾಯಿಗೆ ಇನ್ನಷ್ಟು ಮೆಚ್ಚುಗೆಯಾಯಿತು. ಹಾಗೆ ಕೆಲವು ಕೆಲಸಗಳನ್ನು ಒಪ್ಪಿ

ಕೊಂಡುದಾದರೆ, ಒಪ್ಪಿಕೊಂಡು ನಿರ್ವಹಿಸುವ ಕೆಲಸದ ಪರಿಣತಿಗೆ ತಕ್ಕಂತೆ, ನಿಯಮಿತ ವಿದ್ಯಾರ್ಜನೆಗೆ ಕೊಡತಕ್ಕ ನಿಯಮಿತ ವೇತನ ದಲ್ಲಿಯೂ ಕಡಮೆಯಾಗುತ್ತಿತ್ತು

ಸುಂದರಿಯ ಕೊಟಡಿಯಲ್ಲಿಯೇ ಗೌರಿಯೂ ಇರುವುದಾಗಿ ಏರ್ಪಾಡಾಗಿತ್ತು ಅಲ್ಲಿಯ ವಿದ್ಯಾರ್ಥಿನೀ ಭವನದಲ್ಲಿ ಒಂದೊಂದು ಕೋಣೆಯಲ್ಲಿ ಸೌಕರ್ಯಕ್ಕೆ ತಕ್ಕಂತೆ ನಾಲ್ಕೈದು ಹುಡುಗಿಯರು ವಾಸ ವಾಗಿದ್ದರೂ, ಅಲ್ಲಿಯೇ ಇರುವ ಶಿಕ್ಷಕಿಯರಿಗೆ ಮಾತ್ರ ಬೇರೆ ಬೇರೆ ಕೋಣೆಗಳು ಕೊಡಲ್ಪಟ್ಟಿದ್ದುವು. ಸುಂದರಿಯ ಕೋಣೆ ಚಿಕ್ಕದೂ ಚೊಕ್ಕದೂ ಆಗಿತ್ತು ತುಂಬ ಸುಲಭವಾದ ಸಾಮಾನುಗಳಷ್ಟೇ ಶುಭ್ರ ವಾಗಿ ಓರಣಿಸಿಡಲ್ಪಟ್ಟಿದ್ದುವು ಒಂದು ಬದಿಯಲ್ಲಿ ಒಂದು ಚರಕವು ಒಪ್ಪುತ್ತಿತ್ತು. ಗೋಡೆಯಲ್ಲಿ ಮಹಾತ್ಮಾ ಗಾಂಧಿಯ ಭಾವಚಿತ್ರವೂ, ಅದರ ಕೆಳಗೆ ತಿರುಪತಿ ದೇವರ ಚಿತ್ರವೂ, ದೇವಸಾನ್ನಿಧ್ಯವಾಗಿ ಕಂಗೊಳಿ ಸುತ್ತಿದ್ದುವು. ಮಲಗಲು ಮಂಚವಾಗಲೀ ಹಾಸಿಗೆಯಾಗಲೀ ಅಲ್ಲಿಲ್ಲ. ಸುಂದರಿ ನೆಲದಲ್ಲಿಯೇ ಚಾಪೆ ಹಾಸಿಕೊಂಡು ಮಲಗುತ್ತಿದ್ದಳು ಅದ ನ್ನೆಲ್ಲ ಕಾಣುವಾಗ ಗೌರಿಗೆ ಪುರಾಣದಲ್ಲಿ ವರ್ಣಿತವಾದ ಋಷ್ಯಾಶ್ರಮದ ನೆನಪು ಬರುತ್ತಿತ್ತು.

ಒಂದು ಸುಂದರಿ-ಗೌರಿಗೆ ಮನಬಿಚ್ಚಿ ಬಾಯಿತುಂಬ ಮಾತಾಡು ವುದೇ ಕೆಲಸವಾಯಿತು ಗೌರಿ ಮೂರು ತಿಂಗಳು ಸಿನಿಮಾ ಸ್ಟೂಡಿಯೋ ನೊಳಗೆ ಅಡಗಿದ್ದುದನ್ನು ಹೇಳುವಾಗ, ಆಪದ್ಬಾಂಧವನಾದ ವರದನ ಋಣವಿಮೋಚನೆಗಾಗಿ, ಅವನ ಕೋರಿಕೆಯಂತೆ ಸಿನೆಮಾ ಚಿತ್ರದಲ್ಲಿ ನಟಿಸಬೇಕಾಯಿತೆಂದು ಹೇಳಿದಳೇ ಹೊರತು, ವರದನ ಮೋಸತನಗಳ ನ್ನೊಂದೂ ಬಯಲು ಪಡಿಸಲಿಲ್ಲ.

"ಅತ್ತಿಗೆ! ನಿಮ್ಮ ಅಣ್ಣ ಆ ವರದರಾಯರು ಇಲ್ಲಿಗೆ ಬರುತ್ತಾರೊ?" ಎಂದು ಕೇಳಿದಳು "ಇಲ್ಲ ನನ್ನ ಅಣ್ಣನಿಗೂ ನನಗೂ ಸರಿಬೀಳ ಲಿಲ್ಲ. ಮೊದಲು ನಾನೂ ಅದೇ ಸಿನಿಮಾ ಕಂಪೆನಿಯಲ್ಲಿದ್ದೆನಷ್ಟೆ? ಆಗ ನಾವಿಬ್ಬರೂ ತುಂಬಾ ಅನ್ಯೋನ್ಯರಾಗಿದ್ದೆವು. ಅನಂತರ ನನಗೆ ಸಿನಿಮಾ ನಟನೆ ಬೇಡವಾಗಿ ತೋರಿ ಹೊರಟು ಬರುವಾಗ, ಅವನು ನನ್ನನ್ನು ಅಲ್ಲಿಯೇ ಇರುವಂತೆ ತುಂಬಾ ಒತ್ತಾಯ ಮಾಡಿದ. ನಿರಾಕರಿಸಿ

ಬಂದು ಬಿಟ್ಟೆ. ಅಂದಿನಿಂದ ನಾನೂ ಅವನನ್ನು ನೋಡಲು ಹೋಗ ಲಿಲ್ಲ. ಅವನೂ ನನ್ನನ್ನು ಮಾತಾಡಿಸಲು ಇಲ್ಲಿಗೆ ಬರಲಿಲ್ಲ. ಅಷ್ಟೇ ಹೊರತು ಅವನಿಗೂ ನನಗೂ ಸಿಟ್ಟುಗಿಟ್ಟು ಅಂತ ಹಾಗೇನೂ ಇಲ್ಲ. ಮುಖ್ಯವಾಗಿ ನಾನು ನನ್ನ ಪತಿಗೆ ಬೇಡಾಗಿರುವವಳು; ಇನ್ನು ಅಣ್ಣನಿಗೆ ನಾನೇಕೆ ? ನನಗೆ ಅಣ್ಣನೇಕೆ ?" ಎಂದು ಹೇಳುತ್ತಿದ್ದಾಗ ಸುಂದರಿಯ ಸ್ವರವು ತುಸು ಕಂಪಿಸಿತು.

ಗೌರಿಯೂ ತುಂಬಾ ಸಂಕಟಪಡುತ್ತ— "ಹಾಗಿಲ್ಲ ಅತ್ತಿಗೆ ! ಈಗ ನನ್ನಣ್ಣನಿಗೆ ನಿಮ್ಮ ಮೇಲೆ ತುಂಬಾ ಪ್ರೀತಿಯಿರುವ ಹಾಗೆ ಕಾಣುತ್ತದೆ. ಅವನಿಗೆ ನಿಮ್ಮ ಸಂಗತಿಯೆಲ್ಲ ಚೆನ್ನಾಗಿ ಗೊತ್ತಿದೆ. ನನಗೆ ಮೊದಲು ಅವನೇನೂ ಹೇಳಲಲ್ಲ. ಅವನು ಕೈದಿಯಾಗಿ ಹೋಗುವ ಸಂದರ್ಭದಲ್ಲಿ ಇಲ್ಲಿ ನೀವಿರುವ ಸಂಗತಿ ತಿಳಿಸಿದ್ದ ನಿಮ್ಮನ್ನು ಖಂಡಿತವಾಗಿ ನಾನು ನೋಡಬೇಕೆಂದೂ ಹೇಳಿದ್ದ ಅತ್ತಿಗೆ ! ನೀವು ಅವನಿಗೆ ಏನಾದರೂ ಪತ್ರ—ಗಿತ್ರ ಬರೆದಿದ್ದೀರಾ?"

"ಹಾಗೇನೂ ಇಲ್ಲ ಹೇಗೋ ಅವರು ತಿಳಿದಿರಬೇಕು".

"ಅತ್ತಿಗೆ ! ಈಗ ನಿಮ್ಮನ್ನು ಅಣ್ಣನು ನೋಡಿದರೆ ಎಂದೂ ಬಿಡ ಲಾರ. ನಾನು—"

ಸುಂದರಿಗೆ ಫಕ್ಕನೆ ನಗು ಬಂದು ಬಿಟ್ಟಿತು. "ಅದೇನೆ? ನಾನೀಗ ಅಷ್ಟು ಸುಂದರಿಯಾಗಿ ಕಾಣುತ್ತೇನೆಯೆ?"

"ಕಾಣುತ್ತೀರಿ ಅತ್ತಿಗೆ. ಚೆನ್ನಾಗಿ ಕಾಣುತ್ತೀರಿ. ಸಾಮಾನ್ಯ ಮನುಷ್ಯರಿಗೆಲ್ಲಾ ಎರಡು ಕಣ್ಣುಗಳುಂಟು; ಒಂದು ಹೊರಗಣ್ಣು, ಇನ್ನೊಂದು ಒಳಗಣ್ಣು. ವಿವಾಹವಾದ ಮೊದಮೊದಲಲ್ಲಿ ಹೊರ ಗಣ್ಣಿಗೂ, ಹೊರಗಣ್ಣಿನ ವಿಷಯವಾದ ಬಾಹ್ಯ ಸೌಂದರ್ಯಕ್ಕೂ ಮುಖ್ಯ ತ್ವವಿರುತ್ತದೆ. ಕಾಲಕ್ರಮೇಣ ಸ್ಥಿರವಾಗಿ ನಿಲ್ಲುವುದು ಒಳಗಣ್ಣಿಗೆ ಕಾಣುವ ಗುಣ ಸೌಂದರ್ಯ. ಅಣ್ಣನೀಗ ನಿಮ್ಮ ಗುಣ ಸೌಂದರ್ಯ ವನ್ನು ತನ್ನ ಒಳಗಣ್ಣಿನಿಂದ ಕಾಣುತ್ತಿದ್ದಾನೆ. ಅವನು ಜೈಲಿನಿಂದ ಬಿಡುಗಡೆಯಾಗಿ ಬರಲಿ ಖಂಡಿತವಾಗಿ ನಿಮ್ಮೊಂದಿಗೆ ಬಾಳುವೆ ಮಾಡು ತ್ತಾನೆ. ನಾನು ಖಂಡಿತವಾಗಿ ಹಾಗೆ ಮಾಡಿಸುತ್ತೇನೆ ಅತ್ತಿಗೆ !"

ಸುಂದರಿ ಎಳೆನಗೆಯನ್ನು ನಗುತ್ತ— "ನಿನಗೆ ಹುಚ್ಚು ಗೌರಿ. ನನಗೆ ಇನ್ನೆಲ್ಲಿಯ ಬಾಳುವೆ? ಇನ್ನೆಲ್ಲಿಯ ಪತಿಸಾಂಗತ್ಯ?..........."

"ಹಾಗೆ ನಿರಾಶರಾಗಬೇಡಿ. ನಾನು ಈಗಲೇ ಅಣ್ಣನಿಗೆ ಪತ್ರ ಬರೆಯುತ್ತೇನೆ. ನನ್ನ ಗತಿ ಏನಾಗಿದೆಯೋ ಎಂಬ ಚಿಂತೆಯಲ್ಲಿರುವ ಅಣ್ಣನಿಗೆ ಅಗತ್ಯವಾಗಿ ಪತ್ರ ಬರೆಯಬೇಕಾಗಿದೆ."

ಗೌರಿ ಸುಂದರಿಯ ಕೋಣೆಯಲ್ಲಿಯೇ ಕುಳಿತುಕೊಂಡು ಒಂದು ಪತ್ರವನ್ನು ಬರೆದಳು. ಅದರಲ್ಲಿ ತನ್ನ ಸಂಗತಿಗಳನ್ನೆಲ್ಲ ವಿವರವಾಗಿ ಬರೆದಳು. ತನ್ನನ್ನು ಕಾಪಾಡಿದ ವರದನ ಋಣವಿಮೋಚನೆಗಾಗಿ ಸಿನೆಮಾದಲ್ಲಿ ಸ್ವಲ್ಪ ನಟಿಸಬೇಕಾಯಿತು.–ಕ್ಷಮಿಸು, ಎಂದು ಮನಗರಗುವಂತೆ ಕೇಳಿಕೊಂಡಳು.

ಅನಂತರ ಸುಂದರಿಯ ಸುಗುಣಾತಿಶಯಗಳನ್ನೂ ತುಂಬಾ ಬಣ್ಣಿಸಿ ಬರೆದಳು. "ಈಗ ಅತ್ತಿಗೆ ಮೊದಲು ನಾವೆಲ್ಲಾ ನೋಡಿದ ಸುಂದರಿಯತ್ತಿಗೆಯೇ ಅಲ್ಲ; ಯೋಗಿನಿಯಂತಿದ್ದಾಳೆ! ತಪಸ್ವಿನಿಯಾಗಿದ್ದಾಳೆ. ಇಂತಹಳನ್ನು ಪತ್ನಿಯಾಗಿ ಪಡೆದ ನೀನು ಧನ್ಯನು ಅಣ್ಣಾ!" ಎಂದು ಮುಂತಾಗಿ ಬರೆದು ಬಿಟ್ಟಿದ್ದಳು

ಪತ್ರವನ್ನು ಬರೆದು ಮುಗಿಸುವಾಗ ರಾತ್ರಿಯಾದುದರಿಂದ ಅಂದು ಟಪ್ಪಾಲಿಗೆ ಸೇರಿಸಲಾಗಲಿಲ್ಲ. ಮರುದಿನ ಬೆಳಗ್ಗೆಯೇ ಟಪ್ಪಾಲಿಗೆ ಕಳುಹಿಸಿದಳು

— — —

## ೩೮

ಅನಂತರ ಅದೇ ದಿನ ಹತ್ತು ಗಂಟೆಗೆ ಬಂದ ಟಪ್ಪಾಲಿನಲ್ಲಿ ಸುಂದರಿಯ ಹೆಸರಿಗೆ ಒಂದು ಪತ್ರವು ಬಂದಿತ್ತು. ಆ ಕವರಿನ ಮೇಲೆ ಜೈಲಿನ ಮುದ್ರೆಯಿತ್ತು. ಸುಂದರಿ ಕುತೂಹಲದಿಂದ ಆ ಪತ್ರವನ್ನೊಡೆದು ಓದುವಾಗ, ಗೌರಿಯೂ ಕಣ್ಣೋಟದಿಂದ ಓದುತ್ತಿದ್ದಳು.

ಬಳ್ಳಾರಿ ಜೈಲು
ವಾ ನಂ. ೧೮

''ಪ್ರಿಯ ಸೌ. ಸುಂದರಿ,

ಬಹುಶಃ ಇನ್ನು ಮೇಲೆ ನನ್ನಿಂದ ನಿನಗೆ ಕಾಗದ ಬರಲಿಕ್ಕಿಲ್ಲ. ನನ್ನನ್ನು ಬೇಗದಲ್ಲಿಯೇ ಇಲ್ಲಿಂದ ಎಲ್ಲಿಗೋ ಕೊಂಡೊಯ್ಯುವ ಹಾಗಿದೆ. ನನ್ನ ಕ್ಷೇಮ ಸಮಾಚಾರಗಳನ್ನು ತಿಳಿಯಬೇಕೆನ್ನುವವರಲ್ಲಿ ಈಗ ಇರು ವವಳು ನೀನೊಬ್ಬಳೇ. ಅಂತೆಯೇ ನಿನಗಷ್ಟೇ ಈ ಸುದ್ದಿ ತಿಳಿಸಿದ್ದೇನೆ. ಘೋರವಾಗಿ ಮನಸ್ಸನ್ನು ಕೊರೆಯುವ ದುಃಖವನ್ನು ಆತ್ಮೀಯರೊಡನೆ ಹೇಳಿಕೊಂಡರೆ ಕೊಂಚ ಶಮನವುಂಟಗುವುದಲ್ಲವೆ ? ಅಂತಹ ಆತ್ಮೀಯ ಳೀಗ ನಿನ್ನ ಹೊರತು ಬೇರೆ ಯಾರೂ ನನಗಿಲ್ಲದಂತಾಗಿದೆ. ಅಯ್ಯೋ ! ನನ್ನ ಪ್ರೀತಿಯ ಸರ್ವಸ್ವಕ್ಕೂ ಪಾತ್ರಳಾದ ನನ್ನ ಏಕಮಾತ್ರ ತಂಗಿ ಗೌರಿ, ಬದುಕಿದ್ದಾಳೋ ಇಲ್ಲವೋ ಒಂದೂ ತಿಳಿದಿಲ್ಲ. ನನ್ನ ತಮ್ಮ ಕೃಷ್ಣನೂ ಜೈಲಿಗೆ ಹೋಗಿದ್ದಾನಂತೆ. ಅವನ ಹೆಂಡತಿ ಮಲ್ಲಿಕಾ ತುಂಬಾ ದುಃಖದಿಂದ ಕಾಗದ ಬರೆದಿದ್ದಾಳೆ ಇದೆಲ್ಲದಕ್ಕೂ ಮೂಲಕಾರಣ ನಾನೇ ಆಗಿದ್ದೇನೆ. ಅದೆಲ್ಲಾ ಹೇಳಿ ನಿನ್ನನ್ನೇಕೆ ಸಂಕಟಪಡಿಸಬೇಕು ? ನಿನ್ನನ್ನು ತ್ಯಾಜ್ಯಮಾಡಿ, ನಿನಗೆ ಅಸಹನೀಯವಾದ ಮನೋವೇದನೆಯ ನ್ನಿತ್ತ ಮಹಾಪಾಪಿ ನಾನು ! ಅದರ ಫಲವನ್ನೇ ಈಗ ದೇವನು ಕೊಡು ತ್ತಿದ್ದಾನೆಂದು ತೋರುತ್ತದೆ! ನನ್ನ ತಂಗಿಯ ಗತಿಯನ್ನೂ ನನ್ನ ತಮ್ಮನ ಗತಿಯನ್ನೂ, ಮಲ್ಲಿಕೆಯ ವ್ಯಸನವನ್ನೂ ಯೋಚಿಸುವಾಗ ನನ್ನ ಹೃದ ಯವೇ ಒಡೆಯುತ್ತಿದೆ ! ಇದರ ಮುಂದೆ ಈ ಜೈಲು ವಾಸವು ಯಾವ ಲೆಕ್ಕ? ಸುಂದರಿ ! ನಿನ್ನಲ್ಲಿ ಕ್ಷಮೆಯನ್ನು ಕೇಳಿಕೊಳ್ಳಲಿಕ್ಕೂ ಯೋಗ್ಯತೆ ಯಿಲ್ಲದಷ್ಟು ಮುಂದುವರಿದು ಹೋದವನು ನಾನು. ಮುಖ್ಯವಾಗಿ ನಿನ್ನನ್ನು ತ್ಯಾಜ್ಯಮಾಡಿದ ಘೋರ ಕೃತ್ಯಕ್ಕೆ ದೇವರು ತಕ್ಕ ದಂಡನೆ ಯನ್ನು ಕೊಟ್ಟಿದ್ದಾನೆ. ಇದನ್ನು ನಿನಗೆ ತಿಳಿಸಲಿಕ್ಕಾಗಿಯೇ ಈ ಕಾಗದ ಬರೆದೆ. ನನ್ನ ಚಿಂತೆಯನ್ನು ಕೇಳಿ ನೀನು ದುಃಖಿಸುವಿಯೆಂದು ನಾನು ಬಲ್ಲೆ. ಇನ್ನು ಮೇಲೆ ನೀನು ನನ್ನನ್ನು ಕುರಿತು ಚಿಂತಿಸಬೇಡ ದುಃಖಿ ಸಬೇಡ. ನನಗೆ ಪತ್ರವನ್ನೂ ಬರೆಯಬೇಡ. ನನ್ನ ವಿಳಾಸವೂ ನಿನ ಗಿನ್ನು ಸಿಕ್ಕದು. ಇತಿ ನಿನ್ನ—ಶೀನು

ಓದಿ ಮುಗಿಸುತ್ತಿದ್ದಾಗ, ಸುಂದರಿಯು ಕಣ್ಣುಗಳಿಂದ ಧಾರಾಕಾರವಾಗಿ ನೀರಿಳಿಯುತ್ತಿತ್ತು. ಗೌರಿಯು ಕಣ್ಣುಗಳೂ ಒದ್ದೆಯಾಗಿದ್ದುವು. "ಅಯ್ಯೋ! ಅಣ್ಣಾ! ನಾನಿಲ್ಲಿ ಸುಖವಾಗಿದ್ದೇನೆಂದು ನಿನಗೆ ಬೇಗನೇ ತಿಳಿಸುವುದು ಹೇಗೆ? ಇಂದು ಹಾಕಿದ ಕಾಗದ ನಾಳೆ ತಾನೇ ಅವನಿಗೆ ಸಿಕ್ಕೀತು! ಅಷ್ಟರೊಳಗೆ ಅವನನ್ನು ಅಲ್ಲಿಂದ ಕೊಂಡೊಯ್ದಾರೆ?........" ಎಂದು ಹಲುಬಿಕೊಂಡಳು.

ಇನ್ನೊಂದು ಹೊಸ ವಿಷಯವೂ ಈ ಕಾಗದದಿಂದ ಗೊತ್ತಾಗಿತ್ತು. ಕೃಷ್ಣನಿಗೆ ಜೈಲುವಾಸವೇಕಾಯಿತು? ಅವನು ಪಾಪ, ದೇಶಸೇವೆ ಜನಸೇವೆ ಎಂಬ ಯಾವ ತಂಟೆಗೂ ಹೋಗುವವನಲ್ಲವಲ್ಲಾ!

ಸುಂದರಿ ಅಳುವುದನ್ನು ನೋಡಿ ಗೌರಿಯೆಂದಳು:— "ಅತ್ತಿಗೆ! ನಾನು ಹೇಳಿದ್ದು ಸುಳ್ಳೆ? ಅಣ್ಣನ ಮನಸ್ಸು ನಿಮ್ಮ ಮೇಲೆ ಹೇಗೆ ಕರಗಿಕೊಂಡಿದೆ ನೋಡಿದಿರಾ?"

ಸುಂದರಿ ಗದ್ಗದಿಸುವ ಕಂಠದಿಂದ— "ಅದು ಹೇಗೇ ಇರಲಿ. ಈಗ ಅವರು ತುಂಬಾ ಉದ್ವಿಗ್ನರಾಗಿದ್ದಾರೆ. ನಮ್ಮ ಕಾಗದ ನಾಳೆ ಅವರಿಗೆ ಸಿಕ್ಕುವವರೆಗೆ ಅವರು ಅಲ್ಲೇ ಇದ್ದರಂತೂ ಒಳ್ಳೇದಾಯಿತು. ಇಲ್ಲದಿದ್ದರೆ ಅವರ ಈ ದುಃಖವು ನಿವಾರಣೆಯಾಗುವ ಬಗೆ ಹೇಗೆ? ನಾಳೆ ಅವರಿಗೆ ನಮ್ಮ ಕಾಗದ ಸಿಕ್ಕೀತು ಇಲ್ಲ ಎಂಬುದು ಕೂಡ ನಮಗೆ ಗೊತ್ತಾಗುವ ಮಾರ್ಗವಿಲ್ಲವಲ್ಲ!"

"ಹೌದು. ಇದೊಂದು ದೊಡ್ಡ ಸಂಕಟವಾಯಿತೀಗ."

ಗೌರೀ–ಸುಂದರಿಯರ ಮನಸ್ಸು ಯೋಚನೆಯಿಂದ ಭಾರವಾಯಿತು ಸುಂದರಿಯು ಪ್ರೇರೇಪಣೆಯಿಂದ, ಊರಿನ ಸಮಾಚಾರವನ್ನು ತಿಳಿಯಲು, ಗೌರಿ ಮಲ್ಲಿಕೆಗೆ ಒಂದು ಕಾಗದವನ್ನು ಬರೆದಳು. ಅದರಲ್ಲಿ ತನ್ನ ಮತ್ತು ಶೀನಣ್ಣನ ವೃತ್ತಾಂತಗಳನ್ನು ಸಂಕ್ಷೇಪವಾಗಿ ತಿಳಿಸಿ, ಕೃಷ್ಣಣ್ಣನು ಜೈಲಿಗೆ ಹೋಗುವಂತೆ ಏನಾಯಿತೋ, ಅದನ್ನು ಖಂಡಿತವಾಗಿ ತನಗೆ ತಿಳಿಸಬೇಕೆಂದು ಒತ್ತಾಯಮಾಡಿ ಬರೆದಿದ್ದಳು.

ಕೃಷ್ಣನ ಜೈಲುವಾಸಕ್ಕೆ ತಾನೇ ಕಾರಣನೆಂದು ಶೀನಣ್ಣ ಬರೆದಿದ್ದಾನಲ್ಲವೆ? ಅದರ ಕತೆ ಹೀಗಿತ್ತು.

ಹಂಪೆಯಲ್ಲಿ ಶೀನುವನ್ನು ಕೈದುಮಾಡಿಕೊಂಡೊಯ್ದಾಗ, ಅವನ ಜತೆಯಲ್ಲಿದ್ದ ಸ್ವಯಂಸೇವಕನೂ ಕೈದಾಗಿದ್ದನಲ್ಲವೆ? ಆ ಸ್ವಯಂಸೇವಕನ ಕೈಯಲ್ಲಿದ್ದ ಬ್ಯಾಗಿನಲ್ಲಿ, ರಾಜದ್ರೋಹಕವೂ, ಪ್ರಜೆಗಳನ್ನು ದಂಗೆಯೇಳಿಸುವಂತಹುದೂ ಎಂದು ತಿಳಿಯಲ್ಪಡುವ, ಕಾರ್ಯಕ್ರಮಗಳ ಪಟ್ಟಿಗಳೂ, ತುಂಡುಪತ್ರಗಳೂ, ಹಲವು ಮಂದಿಯ ಒಪ್ಪಿಗೆಯ ಸಹಿಬುಕ್ಕುಗಳೂ ಇದ್ದುವಷ್ಟೆ? ಅದೆಲ್ಲಾ ಪೋಲೀಸರ ವಶವಾಗಿ, ಶೀನುವನ್ನು ಒಬ್ಬ ಕ್ರಾಂತಿಕಾರನನ್ನಾಗಿಸಿ ಬಿಟ್ಟುವು. ಇವನ ಈ ಅಪರಾಧಕ್ಕೆ ಪೋಷಕ ವಸ್ತುಗಳು, ಇನ್ನೂ ಏನಾದರೂ ಇವನ ಮನೆಯಲ್ಲಿ ಸಿಕ್ಕಬಹುದೆಂದು ಕೊಂಡು, ಬಳ್ಳಾರಿಯ ಪೋಲೀಸು ಅಧಿಕಾರಿಗಳು ಮಂಗಳೂರ ಸರ್ಕಲ್ ಪೋಲೀಸಿಗೆ ಶೀನುವಿನ ಮನೆಯನ್ನು ಜಡತೀ ಮಾಡುವಂತೆ ತಂತಿ ಕೊಟ್ಟರು.

ರಿಮಾಂಡಿನಲ್ಲಿದ್ದ ಶೀನುವಿಗೆ ಮೊದಮೊದಲು ಪತ್ರ ಬರೆಯಲಿಕ್ಕೆ ಕೂಡ ಅನುಮತಿ ಇರಲಿಲ್ಲ. ಕಡೆಗೆ ಅವನು ತುಂಬಾ ಕೇಳಿಕೊಂಡ ಮೇರೆಗೆ, ಪೋಲೀಸು ಅಧಿಕಾರಿಗಳು ಓದಿ ನೋಡಬಹುದಾದರೆ ಪತ್ರ ಬರೆಯಬಹುದೆಂಬ ಅನುಮತಿ ಸಿಕ್ಕಿತು. ಆ ಪ್ರಕಾರ ಶೀನು ಊರಿನಲ್ಲಿರುವ ಕೃಷ್ಣನಿಗೂ, ಮಂಗಳೂರಿನ ಶ್ಯಾಮಸುಂದರರಿಗೂ, ಗಜವದನರಾಯರಲ್ಲಿ ಗೌರಿ ಇರುವಳೆಂದು ನಂಬಿಕೊಂಡು ಅಲ್ಲಿಗೂ, ಸುಂದರಿಗೂ ತನ್ನ ಸ್ಥಿತಿಯನ್ನು ತಿಳಿಸಿ ಪತ್ರ ಬರೆದನು. ಗೌರಿಗೆ ಬರೆದ ಕಾಗದವನ್ನು ವಸಂತಿ ನೋಡಿ, ದಾರಿಯಲ್ಲಿ ಗೌರಿಗೆ ಒದಗಿದ ಭಯಂಕರ ವಿಪತ್ತನ್ನು ತಿಳಿಸಿ ತುಂಬಾ ವ್ಯಸನದಿಂದ ವಸಂತಿ ಬರೆದ ಪ್ರತ್ಯುತ್ತರವು ಅವನಿಗೆ ಸಿಕ್ಕಿ ತುಂಬಾ ದುಃಖಕ್ಕೆ ಗುರಿಮಾಡಿತು. ಸುಂದರಿ ಬರೆದ ಪ್ರತ್ಯುತ್ತರವೂ ಹಾಗೆಯೇ ಇತ್ತು. ಇದರಿಂದ ಎದೆಯೊಡೆದು ಶೀನು ದುಃಖಾಕ್ರಾಂತನಾಗಿರುವಾಗ, ಊರಿನಿಂದ ಮಲ್ಲಿಕಾ ಬರೆದ ಪತ್ರವೂ ಅವನಿಗೆ ಸಿಕ್ಕಿತು. ಅವಳ ಪತಿ ಕೃಷ್ಣನನ್ನು ಪೋಲೀಸರು ಆರೆಸ್ಟ್ ಮಾಡಿಕೊಂಡು ಹೋದರೆಂದೂ, ಕಾರಣ ಈ ಪತ್ರದಲ್ಲಿ ತಿಳಿಸುವಂತಹದಲ್ಲವೆಂದೂ, ಶೀನುವಿನ ಸಂಬಂಧವಾಗಿಯೇ ಪೋಲೀಸರು ಬಂದುದೆಂದೂ ತುಂಬಾ ಮರುಗಿಕೊಂಡು ಬರೆದಿದ್ದಳು.

ಆ ಮೇಲೆ ಮೊನ್ನೆ ಮೊನ್ನೆ ತಾನೇ ಮಲ್ಲಿಕೆಯಿಂದ ಇನ್ನೊಂದು ಪತ್ರವು ಬಂದಿತ್ತು. ಅದರಲ್ಲಿ ಕೃಷ್ಣನ ವಿಚಾರಣೆ ಮುಗಿದು, ೨೦೦೦ ರೂಪಾಯಿ ದಂಡ, ಇಲ್ಲವೆ ೩ ವರ್ಷ ಕಠಿಣ ಶಿಕ್ಷೆ ಎಂದು ಅವನಿಗೆ ದಂಡನೆಯಾಗಿದೆಯೆಂದು ತಿಳಿಸಿ— "ಬಾವಾ! ೨೦೦೦ ಎಲ್ಲಿದೆ? ನಿಮ್ಮ ಗತಿ ಹಾಗಾಯಿತು; ಗೌರಿಯ ಗತಿ ಏನೋ ಆಯಿತು ನನ್ನ ಪತಿ ಅನ್ಯಾಯವಾಗಿ ಜೈಲಿಗೆ ಸೇರಿದರು. ಮನೆಗೆ ದಿಕ್ಕು ಯಾರು? ಅಪ್ಪ ಕೂಡಾ ತುಂಬಾ ವಿಚಾರವಾಗಿದ್ದಾರೆ. ಅಪ್ಪನ ಕೈಯಲ್ಲಿ ಇರುತ್ತಿದ್ದರೆ ದಂಡವನ್ನು ತೆತ್ತು ಪತಿಯನ್ನು ಬಿಡಿಸಿಕೊಂಡು ಬರುತ್ತಿದ್ದರು ನನ್ನ ನಗಗಳನ್ನು ಮಾರಿಯಾದರೂ ಕೊಡುತ್ತೇನೆಂದರೆ, ನನ್ನ ಪತಿ ಒಪ್ಪದೆ, ಜೈಲೇ ಅನುಭವಿಸಿ ಬರುತ್ತೇನೆಂದು ಹಟಹಿಡಿದಿದ್ದಾರಂತೆ. ನಿಮಗೆ ಕೂಡ ಈ ಸಮಾಚಾರವನ್ನು ತಿಳಿಸಬಾರದೆಂದೇ ಅವರು ಹೇಳಿದ್ದರಂತೆ. ಆದುದರಿಂದ, ಬಾವಾ! ನಿಮ್ಮಿಂದ ಸಹಾಯ ಪಡೆಯಲಿಕ್ಕೂ ನನ್ನವರಿಗೆ ಮನಸ್ಸಿಲ್ಲ. ಹೀಗೇಗೆ ಅವರ ಮನಸ್ಸು ಹಾಳಾಯಿತೋ ದೇವರಿಗೇ ಗೊತ್ತು! ನಾನು ತುಂಬಾ ವ್ಯಸನದಲ್ಲಿ ಮುಳುಗಿದ್ದೇನೆ. ನೀವು ಗೌರವದ ಜೈಲುವಾಸದಲ್ಲಿದ್ದೀರಿ; ನನ್ನ ಪತಿ ಅಗೌರವದ ಬಂದೀಖಾನೆಯಲ್ಲಿದ್ದಾರೆ. ಆದರೆ ನಿಜವಾಗಿ ನನ್ನ ಪತಿಗಾದ ಶಿಕ್ಷೆ ಅಸಂಬಂಧ-ಮೋಸ-ಅನ್ಯಾಯ ................" ಎಂದು ತುಂಬಾ ಅತ್ತುಕೊಂಡು ಬರೆದಿದ್ದಳು.

ಕೃಷ್ಣನ ಆ ಅವಸ್ಥೆಯ ಕಾರಣವನ್ನು ಮಲ್ಲಿಕಾ ಸ್ಪಷ್ಟವಾಗಿ ಬರೆಯದಿದ್ದರೂ ಶೀನುವಿನ ಊಹನೆಗೆ ಗೊತ್ತೇ ಇದ್ದಿತು.



## ೩೯

ಬಳ್ಳಾರಿಯ ಪೋಲೀಸು ಅಧಿಕಾರಿಯಿಂದ ಬಂದ ತಂತಿಯ ಮೇರೆಗೆ ಕಿರುಗಟ್ಟೆ ಶೀನುವಿನ ಮನೆಯನ್ನು ಶೋಧಿಸಲು, ಮೂರು ನಾಲ್ಕು ಜನ ಪೋಲೀಸರೂ, ಇನ್ಸ್‌ಪೆಕ್ಟರೂ, ಬೆಳ್ಳಂ ಬೆಳಗ್ಗಿನ ಹೊತ್ತಿಗೆ ಧಿಡುಂಧಿಗ್ಗನೆ ಬಂದು ಬಿಟ್ಟುದನ್ನು ನೋಡಿ ಕೃಷ್ಣನಿಗೆ ಭಯವಾಯಿತು.

ಕೆಂಪು ಟೋಪಿಗಳನ್ನೂ, ಬೂಟ್ಸುಕಾಲಿನ ದಡಬಡ ಸಪ್ಪಳವನ್ನೂ ಕೇಳಿ, ಧೈರ್ಯಶಾಲಿಯಾದ ಆ ಬೊಳ್ಳನಿಗೂ ಭಯವಾಯಿತು ಅವನು ಮುಂದೆ ಬರಲಂಜಿ, ದೂರ ದೂರ ನಿಂತು, ಏನೋ ಮನೆಗೆ ಅಪಾಯ ಬಂತೆಂಬಂತೆ, ಒಂದೇ ಸವನೆ ಬೊಗಳುತ್ತಿದ್ದನು.

ಇದಿರೇ ನೋಡದ ಸಂಭವವಾದುದರಿಂದ ಕೃಷ್ಣನು ಆಶ್ಚರ್ಯದಿಂದ,--- "ಯಾಕೆ? ಏನು ಬಂದಿರಿಲ್ಲಿಗೆ?" ಎಂದು ಇನ್ಸ್‌ಪೆಕ್ಟರನ್ನು ಕೇಳಿದನು

"ಕೆ. ಶ್ರೀನಿವಾಸರಾಯರ ಮನೆ ಇದು ತಾನೇ ?"

"ಹೌದು. ಅವನು ನನ್ನ ಅಣ್ಣ. ಈಗ ಊರಲ್ಲಿಲ್ಲ."

"ನೀವೆಲ್ಲಾ ಸ್ವಲ್ಪ ಹೀಗೆ ನಿಲ್ಲಿರಿ. ಒಳಗೆ ಹೆಂಗುಸರಿದ್ದರೆ ಹೊರಗೆ ಬಂದು ನಿಲ್ಲುವಂತೆ ಹೇಳಿರಿ. ನಿಮ್ಮ ಮನೆಯೊಳಗೆ ಸ್ವಲ್ಪ ಪರಿಶೋಧನೆ ಮಾಡಬೇಕಾಗಿದೆ. ಇಗೋ ಡಿ. ಎಸ್. ಪಿ. ಯವರ ಆಜ್ಞೆ." ಎಂದು ಇನ್ಸ್‌ಪೆಕ್ಟರು, ಒಂದು ಕಾಗದವನ್ನು ತೋರಿಸಿದರು.

ಏಕೋ ಕೃಷ್ಣನಿಗೆ ಎದೆ ಬಡೆದುಕೊಳ್ಳತೊಡಗಿತ್ತು. "ಇಲ್ಲಿ ಏನೂ ಅಂತಹ—" ಎಂದು ಅವನು ಏನೋ ಹೇಳಲಿಕ್ಕಿರಲು, ಇನ್ಸ್‌ಪೆಕ್ಟರು,— "ಅದೆಲ್ಲಾ ಮಾತಾಡಬೇಡಿ. ಹೇಳಿದ್ದು ಕೇಳಿ ಹೋಗಲಿಕ್ಕೆ ಬಂದವರು ನಾವಲ್ಲ."

ದೊಡ್ಡಮ್ಮನೂ ಮಲ್ಲಿಕೆಯೂ ಏನಪ್ಪಾ ಎಂದುಕೊಂಡು ಭಯದಿಂದ ಹೊರಗೆ ಬಂದರು ಪೋಲೀಸರು ಒಳಗೆ ಹೊಕ್ಕರು.

"ಅಯ್ಯೋ! ದೇವರೇ! ಇದೇನು ಅನ್ಯಾಯ! ಏನೂ ಮಾಡದ ನಮ್ಮ ಮನೆಯಲ್ಲಿಯೂ ಪೋಲೀಸರ ಲೂಟಿ? ಕೇಳುವವರಿಲ್ಲವೆ? ಏನೋ ಇದು ಕೃಷ್ಣಾ!—" ಎಂದು ದೊಡ್ಡಮ್ಮ ಬಾಯಿತೆರೆದು ಕೂಗಿದಾಗ, ಇನ್ಸ್‌ಪೆಕ್ಟರು ಎರಡು ಗದರಿಕೆ ಹಾಕಿ ಅವಳ ಬಾಯಿ ಮುಚ್ಚಿಸಿದರು.

ಪೋಲೀಸರು ಮನೆಯೊಳಗೆ ನಿರ್ಭಯರಾಗಿ, ನಿಃಶಂಕರಾಗಿ ಹೊಕ್ಕರು ಕೃಷ್ಣನೂ ಅವರೊಂದಿಗೆ ಹೊಕ್ಕನು. ಕೃಷ್ಣನ ಕೈಯಿಂದಲೇ ಅಲಮಾರಿಗಳ ಬಾಗಿಲನ್ನು ತೆಗೆಸಿದರು. ಒಳಗಿದ್ದ ಅಲ್ಪಸ್ವಲ್ಪ ನಗಗಟ್ಟುಗಳನ್ನೂ, ಚಿಲ್ಲರೆ ಮಡಕ್ಕುಗಳನ್ನೂ ಕೆಳಗೆ ಚೆಲ್ಲಿದರು; ದೇವರ

ಮುಂದಾಸನವನ್ನು ಎಳೆದು, ಮೂರ್ತಿ ಸಂಪುಷ್ಟಗಳನ್ನೆಲ್ಲ ಎತ್ತಿ ಎತ್ತಿ, ಮೂಲೆ ಮುಡುಕು, ಎಡೆ ಸಂದುಕಗಳಲ್ಲೆಲ್ಲಾ ತಡವಿ ತಡವಿ, ಕತ್ತಲೆಗೆ ಟಾರ್ಚ್ ಲೈಟ್ ಹೊಡೆದು ಹುಡುಕಿದರು. ಮೂರು ನಾಲ್ಕು ಕೊಟಡಿಗಳೊಳಗೆಲ್ಲಾ ಸುತ್ತಾಡಿ, ಹಾಸುಗೆ, ದುಪ್ಪಟಿ, ಅರುವೆ ಅಂಚಡಿಗಳನ್ನೆಲ್ಲಾ ಚೆಲ್ಲಾಪಿಲ್ಲಿ ಮಾಡಿದರು. ಕೈಗೆ ಸಿಕ್ಕಿದ ಕಾಗದ ಪತ್ರಗಳನ್ನೆಲ್ಲಾ ನೋಡಿ ನೋಡಿ ಕೆಳಗೆ ಹಾಕಿದರು. ಅಡುಗೇ ಮನೆಗೂ ಹೊಕ್ಕು ಸೇರಿನ ಪಾತ್ರೆಯೊಳಗೂ ಕೈಹಾಕಿ ಕಲಕಿದರು· ಒಲೆದಂಡೆಯಲ್ಲಿ ಮುಚ್ಚಿಟ್ಟಿದ್ದ ಕೃಷ್ಣನ ಕಾಫೀ ಲೋಟಿಯೊಳಗೆ ಅವರ ಬೆತ್ತದ ತುದಿಯನ್ನು ಹಾಕಿ ತಿರುಗಿಸಿ ನೋಡಿದರು ಹೊಗೆ ಹಲಗೆಯಲ್ಲಿದ್ದ ಹಪ್ಪಳ ಸಂಡಿಗೆಗಳ ಡಬ್ಬಿಗಳನ್ನು ಕೆದಕಿ ಹುಡುಕಿದರು. ಉಪ್ಪಿನಕಾಯಿಯ ಜಾಡಿಯೊಳಗೆ ತಮ್ಮ ಕೋಲನ್ನು ಹಾಕಿ ಕುತ್ತಿ ಕುತ್ತಿ ನೋಡಿದರು. ಕಂಬಗಳನ್ನೂ ಗೋಡೆಗಳನ್ನೂ ತಟ್ಟಿ, ಬೆಟ್ಟಿ-ಬಡೆದು-ಹೊಡೆದು ನೋಡಿದರು. ಮೋರಿಯೊಳಗೆ ಕಣ್ಣುಹಾಯ್ಸಿ, ಲೈಟಿಸೆದು ಪರೀಕ್ಷೆ ಮಾಡಿದರು. ಆ ಮೇಲೆ ಅವರು ಅಟ್ಟಕ್ಕೇರುವುದನ್ನು ನೋಡಿ ಕೃಷ್ಣನು— "ಅಲ್ಲೇನಿಲ್ಲ ಸಾರ್! ಅಲ್ಲೆನಿಲ್ಲ!" ಎಂದು ಚೀರಿದನು

ಪೋಲೀಸರಿಗೆ ಇನ್ನಷ್ಟು ಸಂದೇಹವಾಗಿ ಅವನನ್ನು ಲಕ್ಷ್ಯವೇ ಮಾಡದೆ, ಅಟ್ಟದೊಳಗೆಲ್ಲಾ ಟಾರ್ಚ್ ದೀಪವನ್ನು ಹಾಕಿ ಹುಡುಕುತ್ತ, ಕುತ್ತಟ್ಟನ್ನು ನುಗ್ಗಿದರು. ಆಗ ಕೃಷ್ಣನ ಮುಖವು ಕಪ್ಪಿಟ್ಟು ಹೋಯಿತು. ಎದೆ ಜೋರಾಗಿ ಹೊಡೆದುಕೊಂಡಿತು. ತೊಡೆಗಳು ನಡುಗಿದುವು. ಹಾಗೇನಿತ್ತು ಕುತ್ತಟ್ಟದಲ್ಲಿ ?

ಅಗೋ! ಆ ಮೂಲೆಯಲ್ಲಿ ಅಟ್ಟಿಯಟ್ಟಿಯಾಗಿ ಅಕ್ಕಿಯ ಮುಡಿಗಳು ಕುಳಿತಿವೆ. ಈ ಮೂಲೆಯಲ್ಲಿ ನಾಲ್ಕಾರು ಚಿಮಣಿಯೆಣ್ಣೆ ಡಬ್ಬಿಗಳು ಹೊಳೆಯುತ್ತಿವೆ ! ಅವುಗಳ ಹಿಂದಿರುವುದೇನದು ? ಎರಡು ಗೋಣಿಗಳಲ್ಲಿ ಸಕ್ಕರೆ ! ಪೋಲೀಸರು ಅಕ್ಕಿ ಮುಡಿಗಳನ್ನು ಎಣಿಸಿದರು. ಸರೀ ೨೫ ಮುಡಿಗಳು ! ಕಂಟ್ರೋಲ್-ರೇಶನ್ನುಗಳು ಅಮಲಿನಲ್ಲಿರುವಾಗ, ೩-೪ ಜನರಿರುವ ಒಂದು ಮನೆಯಲ್ಲಿ ಇಷ್ಟು ಸಂಗ್ರಹಹೆಂದರೆ!..................

"ಓಹೋ !——" ಎಂದು ಇನ್ಸ್ಪೆಕ್ಟರು ಗೆಲುವಿನ ಉದ್ಗಾರ ಗರೆದರು.

ಕೃಷ್ಣನು ನಾಲಗೆ ಒಣಗಿಕೊಂಡು ಹಿಂದೆ ಮುಂದೆ ಎಳೆಯುತ್ತಿರಲು, ಇನ್ಸ್‌ಪೆಕ್ಟರಿಗೆ ಕೈಮುಗಿದು— "ಇವೆಲ್ಲಾ ನನ್ನ ಸ್ವಂತದ್ದಲ್ಲ ಸಾರ್. ನಾನು ಕೆಲಸಮಾಡುವ ಬಂಡಸಾಲೆಯ ಯಜಮಾನರಾದ ಕೋಟಿ ಶೆಟ್ಟರದು. ಅವರ ಒತ್ತಾಯದಿಂದ ನಾನು ಇವುಗಳನ್ನು ನನ್ನ ಮನೆಯಲ್ಲಿಟ್ಟುಕೊಳ್ಳಬೇಕಾಯಿತು................" ಎನ್ನಲಾರಂಭಿಸಿದಾಗ

ಇನ್ಸ್‌ಪೆಕ್ಟರು— "ಎಲ! ಇದೆಲ್ಲಾ ಈಗ ನಿಮ್ಮನ್ನು ಯಾರಯ್ಯ ಕೇಳಿದ್ದು? ಯಾರು ಎಲ್ಲಿ ಕೇಳುವರೋ ಅಲ್ಲಿ ಹೇಳಿ. ಇಷ್ಟೇನೋ. ಅಲ್ಲ ಇನ್ನೂ ಏನಾದರೂ ಸಾಮಾನು ಗುಟ್ಟಾಗಿವೆಯೊ?"

"ಇನ್ನೇನಿದೆ? ಇಷ್ಟೆ. ಇದಕ್ಕೆಲ್ಲಾ ಆ ಕೋಟಿಶೆಟ್ಟರೇ ಜವಾಬ್ದಾರರು ಸಾರ್!" ಕೃಷ್ಣನೆಂದನು

"ಅದನ್ನು ನಿಶ್ಚಯ ಮಾಡಲು ನೀವಾರು? ನಾನಾರು? ಇರಲಿ. ಅಂತೂ ನಮ್ಮ ಹುಡುಕಾಟ ವಿಫಲವಾಗಲಿಲ್ಲ. ಓಹೋ! ಹಟ್ಟಿ—ಹಟ್ಟಿಯ ಅಟ್ಟ ಬಾಕಿ ಇದೆಯಲ್ಲ?" ಎಂದು ಇನ್ಸ್‌ಪೆಕ್ಟರು ಅತ್ತ ನೋಡಿ— "ಅದೇನು ಹುಲ್ಲು ಛಾವಣಿ ಕಟ್ಟಡ?"

"ಅದು ಶೀನಣ್ಣನ ಖಾಸಗೀ ಗ್ರಂಥಾಲಯ"

"ಹೊ! ಅದೇ ಬಹುಮುಖ್ಯ!—"

ಪೋಲೀಸರು ಆ ಗ್ರಂಥಭಾಂಡಾರಕ್ಕೆ ಹೋಗಿ, ಅಲ್ಲಿದ್ದ ಅಲುಮಾರಿ ಮೇಜಿಯ ಅರೆ—ಮೊದಲಾದುವನ್ನು ಹುಡುಕಾಡಿದರು. ಕಾಗದ ಪತ್ರಗಳನ್ನೂ ಬಿಡಿಸಿ ಬಿಡಿಸಿ ನೋಡಿದರು ಎರಡು ಮೂರು ಕ್ರಾಂತಿಕಾರಕ ಪುಸ್ತಕಗಳನ್ನು, ಕೈವಶಪಡಿಸಿಕೊಂಡರು ಮತ್ತೇನೂ ಅವರಿಗೆ ಸಿಕ್ಕಲಿಲ್ಲ. ಆ ಸ್ಥಳದಲ್ಲಿ ಇನ್ಸ್‌ಪೆಕ್ಟರ ಮುಖವು ಅರೆಸಪ್ಪೆಯಾದರೂ, ಹಟ್ಟಿಯನ್ನು ಕಂಡು ಮತ್ತೆ ಅವರ ಮುಖವು ಅರಳಿತು.

ಹಟ್ಟಿಯೊಳಗೂ ಹೊಕ್ಕರು ಪೋಲೀಸರು. ಅಲ್ಲಿದ್ದೆರಡು ದನಗಳೂ, ಒಂದು ಎಮ್ಮೆಯೂ, ಕರುಗಳೂ ಹೆದರಿ ಚಡಪಡಿಸಿ ಕೂಗಿದುವು.

ಬೊಳ್ಳುನಾಯಿ ಬೊಗಳಿ ಬೊಗಳಿ ಹೈರಾಣಾದರೂ, ಉಸಿರು ನಿಂತು ಹೋಗುವವರೆಗೂ ಬೊಗಳಿಯೇನೆಂದು ಪ್ರತಿಜ್ಞೆಯೇ ಮಾಡಿಬಿಟ್ಟಂತೆ ಬೊಗಳುತ್ತಿತ್ತು. ಅದರ ಬೊಗಳುವಿಕೆಯನ್ನು ಕೇಳಿ ಅಕ್ಕಪಕ್ಕದ

ನಾಯಿಗಳೂ, ಅದನ್ನು ಕೇಳಿ ಓಡಿಬರುತ್ತ ಇತರ ನಾಯಿಗಳೂ, ಹೀಗೆ ಊರ ನಾಯಿಗಳೆಲ್ಲಾ ಬೊಗಳಲಾರಂಭಿಸಿದ್ದುವು. ಜನರೂ ವಿಶೇಷಾವಲೋಕನಕ್ಕಾಗಿ ಇಲ್ಲಿಗೆ ಬಂದು ಸೇರುತ್ತಿದ್ದರು ವಿಶೇಷವೇ ಇತ್ತು.

ಹಟ್ಟಿಯ ಅಟ್ಟದಲ್ಲಿ ಒಣಹುಲ್ಲು ಬಿಗಿಯಾದ ರಾಶಿಯನ್ನೆಲ್ಲ ಕೆದಕುವಾಗ, ಅಲ್ಲಿಯೂ ೧೨ ಅಕ್ಕಿ ಮುಡಿಗಳು ಪ್ರತ್ಯಕ್ಷವಾಗಿದ್ದುವು!

ಮಧ್ಯಾಹ್ನದವರೆಗೂ ಹೀಗೆ ಪೋಲೀಸು ದಾಳಿ ನಡೆಯಿತು. ಇನ್ಸ್ಪೆಕ್ಟರು ಕೃಷ್ಣನನ್ನು ಕರಿತು-- "ಏನಯ್ಯಾ ಇದು? ಕಂಟ್ರೋಲ್ ಕಾನೂನು ಗೊತ್ತಿಲ್ಲವೆಯಷ್ಟೆ? ನಿಮ್ಮನ್ನು ನಾವೀಗ ಕೈದು ಮಾಡಿದ್ದೇವೆ" ಎಂದು ಕೃಷ್ಣನನ್ನು ಕೈದುಮಾಡಿ ಕರೆದುಕೊಂಡು ಹೋಗಿಬಿಟ್ಟರು.

"ಹು" ಎಂದರೆ "ಹುಲೀ--" ಎನ್ನುವ ಹಳ್ಳಿ! ಎಲ್ಲಾ ಜನರೂ ಬಂದು ಅಲ್ಲಿ ಗುಂಪುಗೂಡಿ ಬಿಟ್ಟಿದ್ದರು ಪಟೇಲರು, ಶ್ಯಾನುಭಾಗರು ಕೂಡಾ ಬಂದಿದ್ದರು ಅಕ್ಕಿ ಮುಡಿಗಳು, ಚಿಮಣಿಯೆಣ್ಣೆ ಡಬ್ಬಗಳು, ಸಕ್ಕರೆ ಮೂಟೆಗಳು, ಇನ್ನೂ ಕೆಲವು ಕಂಟ್ರೋಲ್ ಕಾನೂನಿಗೆ ವಿರೋಧವಾದ ಸಾಮಾನುಗಳು, ಎಲ್ಲವನ್ನೂ ಅಂಗಳದಲ್ಲಿ ರಾಶಿ ಹಾಕಿ, ಸರಕಾರೀ ಸ್ಟೋರಿಗೆ ಸಾಗಿಸಲಾಯಿತು.

ನೋಡಿದವರೆಲ್ಲರೂ ಅವರವರ ಸ್ವಭಾವಕ್ಕೆ ತಕ್ಕಂತೆ ನಾನಾವಿಧವಾಗಿ ಮಾತಾಡುತ್ತಾ ಹೋದರು.

ದೊಡ್ಡಮ್ಮನೂ ಮಲ್ಲಿಕೆಯೂ ಪಾಪ, ಏನು ತಾನೇ ಮಾಡುವರು? ಒಬ್ಬರಿಗೊಬ್ಬರು ಏನೇನೋ ಹೇಳಿಕೊಂಡು ಅತ್ತರು. ನೆರೆಹೊರೆಯವರು ವಾಡಿಕೆಯಂತೆ ಸಮಾಧಾನ ಹೇಳಲು ಇದ್ದಾರಲ್ಲವೆ?

ಕೃಷ್ಣನ ಈ 'ಕೇಸ'ನ್ನು ಪೋಲೀಸರು ಸಿದ್ಧಪಡಿಸಿ, ವಿಚಾರಣೆ ಪ್ರಾರಂಭವಾಗಿ, ಕಡೆಯ ತೀರ್ಪು ಹೊರಡುವಾಗ ಎರಡು ಮೂರು ತಿಂಗಳು ಕಳೆದು ಹೋದುವು ಕೃಷ್ಣನ ವಾಙ್ಮೂಲವು-- "ಆ ಸಾಮಾನುಗಳೆಲ್ಲಾ ನನ್ನದಲ್ಲ ಕೋಟೆಶೆಟ್ಟರು ಒತ್ತಾಯಮಾಡಿ ಅವುಗಳನ್ನು ನನ್ನ ಮನೆಯೊಳಗಿಡಿಸಿದ್ದು ಅವುಗಳ ವ್ಯಾಪಾರದಲ್ಲಿ ನನಗೆ ಸ್ವಲ್ಪ ಕಮಿಷನ್ ಕೊಡುವುದಾಗಿಯೂ ಅವರು ಹೇಳಿದ್ದಾರೆ. ಅದ್ದರಿಂದ ತನ್ನನ್ನು ಮನ್ನಿಸಬೇಕು." ಎಂಬ ರೀತಿಯಲ್ಲಿತ್ತು

ಇದು ನಿಜವೂ ಹೌದು. ಕೋಟಿಶೆಟ್ಟರ ಮಳಿಗೆಯಲ್ಲಿ ಇಂತಹ ಸಾಮಾನುಗಳನ್ನಿಡುವುದು ಅಪಾಯಕಾರಿಯಾದುದರಿಂದ, ಅವರು ಕೃಷ್ಣನಿಗೆ ಸ್ವಲ್ಪ ಕಮಿಷನ್ನಿನ ಆಶೆ ಹಚ್ಚಿ ಈ ಒಳಗೆಲಸ ಮಾಡಿಸಿಬಿಟ್ಟಿದ್ದರು ದುಡ್ಡಿನ ಆಶೆಗೆ ಅವನೂ ಒಪ್ಪಿದ್ದನು. ಊರೊಳಗೆ ಯಾರಾದರೂ ಹಗೆಯವರಿದ್ದರೆ ಕೃಷ್ಣನು ಭಯಪಡುತ್ತಿದ್ದ. ಅಂತಹರಾರೂ ಅವನಿಗಿಲ್ಲದುದರಿಂದ, ತನ್ನ ಬಡಮನೆಗೆ ಯಾರೂ ಶೋಧಕ್ಕೆ ಬಾರಲಾರರೆಂಬ ನಂಬಗೆಯಿಂದ ಹಾಗೆ ಇಂಬುಗೊಟ್ಟಿದ್ದನು

ಆದರೆ ಕಷ್ಟದಲ್ಲಿ ಶೆಟ್ಟರು ಅವನಿಗೆ ಕೊಂಚವೂ ಕೈಕೊಡದೆ ಹೋದರು. "ಕೃಷ್ಣನು ನಮ್ಮ ಮಳಿಗೆಯಲ್ಲಿ ಗುಮಾಸ್ತನಾಗಿದ್ದು, ಲೆಕ್ಕಪತ್ರಗಳಲ್ಲಿ ಮೋಸಮಾಡಿ ಆ ಸಾಮಾನುಗಳಷ್ಟೂ ಕದ್ದೊಯ್ದಿದ್ದಾನೆ" ಎಂದು ಶೆಟ್ಟರು ಹೆಚ್ಚುಕಡಮೆಯಾದೊಂದು ಲೆಕ್ಕವನ್ನು ಹುಟ್ಟಿಸಿ, ಇಬ್ಬರು ಮೂವರು ಸಾಕ್ಷಿಗಳನ್ನು ಸೃಷ್ಟಿಸಿ, ಹಾಗೆಂದೇ ಸಾಧಿಸಿಬಿಟ್ಟರು. ದುಡ್ಡಿನ ಬಲವು ನ್ಯಾಯವನ್ನು ಅನ್ಯಾಯವಾಗಿ ಸಾಧಿಸಿಬಿಟ್ಟಿತು

ಕೃಷ್ಣನಿಗೆ "೨೦೦೦ ಅಪರಾಧ, ಇಲ್ಲವೇ ೩ ವರ್ಷ ಕಡುಂಕಾವಲು" ಎಂದು ತೀರ್ಪಾಯಿತು.

ಕೃಷ್ಣನಲ್ಲಿ ಅಷ್ಟು ಹಣವೆಲ್ಲಿದೆ ? ಅವನ ಮಾವ ರಾಮಾ ಜೋಯಿಸರು ಮನಸ್ಸು ಮಾಡುತ್ತಿದ್ದರೆ ೨೦೦೦ ಕಟ್ಟಿ ಅಳಿಯನನ್ನು ಬಿಡಿಸಬಹುದಿತ್ತು ದುಡ್ಡೆಂದರೆ ಜೀವ ಬಿಡುತ್ತಿದ್ದ ರಾಮಾ ಜೋಯಿಸರು, ಅಷ್ಟು ತನ್ನಲ್ಲಿಲ್ಲವಲ್ಲಾ ಎಂದು ಮುಖಬಾಡಿಸಿಕೊಂಡು ಮಲ್ಲಿಕೆಗೆ ಒಣಸಮಾಧಾನವಷ್ಟೇ ಮಾಡುತ್ತಿದ್ದರು ತನ್ನ ಈ ಸಮಾಚಾರವೊಂದನ್ನೂ ಶೀನಣ್ಣನಿಗೆ ತಿಳಿಸಲೇಕೂಡದೆಂದು ಕೃಷ್ಣನು ರಾಮಾ ಜೋಯಿಸರೊಡನೆ ಖಂಡಿತವಾಗಿ ಹೇಳಿಕಳುಹಿಸಿದ್ದನು.

ಆದರೆ ಮಲ್ಲಿಕೆಗೆ ಭಾವನಮೇಲೆ ತುಂಬಾ ವಿಶ್ವಾಸವಲ್ಲವೆ ? ಜೈಲಿನಲ್ಲಿರುವ ಶೀನೂ ಭಾವನಿಂದ ಏನು ಮಾಡಲಿಕ್ಕೂ ಸಾಧ್ಯವಿಲ್ಲವೆಂದು ಗೊತ್ತಿದ್ದರೂ, ಅವನಿಗೆ ಈ ಸಮಾಚಾರವನ್ನು ತಿಳಿಸದಿರಲು ಅವಳಿಂದಾಗಲಿಲ್ಲ.

ಈ ಸಮಾಚಾರಗಳೆಲ್ಲಾ ಊರಿನವರ ನಾಲಗೆಗೆ ಒಳ್ಳೇ ಸವಿಯಾದ ಹೊಸ ಹೊಸ ಮಿಠಾಯಿಯಾಗಿ ಹೊರಳತೊಡಗಿದುವು, ಮೊತ್ತಮೊದಲು

"ಶೀನುವನ್ನು ಹಂಪೆಯಲ್ಲಿ ಸೆರೆಹಿಡಿದರಂತೆ" ಎಂದು ಪತ್ರಿಕೆಯಲ್ಲಿ ಪ್ರಕಟವಾದ ವಾರ್ತೆ! ಅನಂತರ 'ಗೌರಿಯನ್ನು ಯಾರೋ ಮಿಲಿಟರಿಯವರು ಹೊತ್ತುಕೊಂಡು ಹೋದರಂತೆ!" ಎಂಬ ಸುದ್ದಿ ಮಂಗಳೂರ ಶ್ಯಾಮಸುಂದರರ ಕಡೆಯಿಂದ ಬಂತು! ಅನಂತರ ಕೃಷ್ಣನ ಖೈದು! ಅವನ ಮನೆಯಲ್ಲಿ ಹೊರಬಿದ್ದ 'ಬ್ಲ್ಯಾಕ್ ಮಾರ್ಕೆಟ್!"

ಶೀನುವಿನ ಸಂಬಂಧವಾಗಿ ಶೋಧಿಸಬಂದ ಪೋಲೀಸರು, ಕಾಳಸಂತೆಯನ್ನು ಹೊರಗೆ ಹಾಕಿ, ಯಾವುದೋ ಎರಡು ಮೂರು ವಿಪ್ಲವಕಾರಕ ಪುಸ್ತಕಗಳನ್ನು ಮಾತ್ರ ಬಳ್ಳಾರಿಗೆ ಕಳುಹಿಸಿ, "ಇನ್ನೇನೂ ಸಿಕ್ಕಲಿಲ್ಲ" ಎಂದು ತಿಳಿಸಿಬಿಟ್ಟರು

ಅಲ್ಲಿ ಶೀನುವಿನ ವಿಚಾರಣೆನಡೆಯಿತು ಶೀನು ಹೆಚ್ಚಿನಹೇಳಿಕೆಯೇನೂ ಕೊಡಲಿಲ್ಲ. "ಜನರನ್ನು ದಂಗೆ ಎಬ್ಬಿಸಿ ದೇಶಕ್ಕೆ ಹಾನಿತರಬೇಕೆಂದು ನಾನೇನೂ ಮಾಡಿಲ್ಲವೆಂದು ನಂಬುತ್ತೇನೆ" ಎಂದಷ್ಟೇ ಹೇಳಿದ್ದನು. ಇವನು ಹೊಸದಾಗಿ ದೇಶಸೇವೆಗೆ ಸೇರಿದವನೆಂದು ತಿಳಿದು ಬಂದುದರಿಂದಲೂ, ಇವನಿಗೆ ಗೋಪಾಲರಾಯನೆಂಬ ಪ್ರಚಂಡ ಕ್ರಾಂತಿಕಾರನೇ ಪ್ರೇರೇಪಕನೆಂದು ಗೊತ್ತಾದುದರಿಂದಲೂ, ಮ್ಯಾಜಿಸ್ಟ್ರೇಟರು ಶೀನುವನ್ನು ಬಿಡುಗಡೆ ಮಾಡೋಣವೆಂದುಕೊಂಡು ಇನ್ನು ಮೇಲೆ ಹೀಗೆ ಸಾರ್ವಜನಿಕ ಕಾರ್ಯ ಮಾಡುವುದಿಲ್ಲ, ಯಾವ ಸಭೆಯಲ್ಲಿಯೂ ಭಾಷಣ ಮಾಡುವುದಿಲ್ಲ ಎಂದು ಪ್ರಮಾಣಮಾಡಿದರೆ ಬಿಡುಗಡೆ ಮಾಡುವುದಾಗಿಯೂ, ಇಲ್ಲದಿದ್ದರೆ ಒಂದು ವರ್ಷ ಕಾವಲಿನಲ್ಲಿರಬೇಕೆಂದೂ ತೀರ್ಪಿತ್ತರು. ಶೀನು ಆ ಪ್ರಮಾಣವನ್ನು ನಿರಾಕರಿಸಿ, ಬಂದೀಖಾನೆಯನ್ನೆ ಒಪ್ಪಿಕೊಂಡನು.

---

## ೪೦

ಇದ್ದಕ್ಕಿದ್ದಂತೆ ಹಿಂದೂ ದೇಶದೊಳಗೆಲ್ಲಾ ಏನೋ ಒಂದು ಗುಸುಗುಸಾಟವು ನಡೆಯಲಾರಂಭಿಸಿತ್ತು ಅಲ್ಲಲ್ಲಿ ಜನರು ಗುಂಪುಗುಂಪಾಗಿ ಸೇರುತ್ತ, ಏನೇನೋ ಸನ್ನೆಸೈಗೆಮಾಡಿಕೊಂಡು ಮರೆಮರೆಯಾಗಿ ಅಡಗು

ತ್ತಿದ್ದರು ಪೋಲೀಸರೂ ಅಧಿಕಾರಿಗಳೂ ಬಹಳ ಸೂಕ್ಷ್ಮ ಕರ್ಣಗಳಾಗಿ
ಅನ್ವೇಷಣಮಾಡಲಾರಂಭಿಸಿದ್ದರು ಜನರೆಲ್ಲಾ ಯಾವುದೋ ಒಂದು
ಸಾಹಸಕಾರ್ಯಕ್ಕೆ ಸಿದ್ಧರಾಗುವಂತಿತ್ತು ಮಹಾ ಚಂಡಾವಾತವು
ಹುಟ್ಟುವ ಮೊದಲು, ಒಂದು ಭಯಂಕರ ಮೌನ ಶಾಂತತೆ ಪಸರಿಸುವಂತೆ
ಇಡೀ ಹಿಂದೂದೇಶವೇ ಒಂದು ಬಗೆಯ ಸ್ತಬ್ಧ ನಿರೀಕ್ಷಿತವಾಗಿತ್ತು.

ಏಕೆ? ಮಹಾತ್ಮಾ ಗಾಂಧಿ ಹೇಳಿಟ್ಟ ಗಡುದಿನವು ಸಮೀಪಿಸುತ್ತಿತ್ತು.
ಅವರ ಅಭಿಲಾಷೆ ಏನೆಂಬುದು ಊರಿಗೆಲ್ಲಾ-ದೇಶಕ್ಕೆಲ್ಲಾ ಗೊತ್ತಾಗಿತ್ತು.
ಅದು ಹಾಗೆ ಗೊತ್ತಾಗಲು ಬರಿಯ ನಮ್ಮ ಒಬ್ಬ ಶೀನು ಒಬ್ಬ ಗೋಪಾ
ಲರು ಮಾತ್ರವೇ ಕಾರಣರಲ್ಲ ಶೀನೂ–ಗೋಪಾಲರಂತಹ ಸಾವಿರಾರು
ಮಂದಿ ತ್ಯಾಗಿಗಳ ಪ್ರಸಾರದಿಂದ ಅಖಿಲ ಹಿಂದೂದೇಶವೇ ಮಹಾತ್ಮಾ
ಗಾಂಧಿಯ ಆಜ್ಞೆಯನ್ನು ಪಾಲಿಸಲು ಸಿದ್ಧವಾಗಿ ಬಿಟ್ಟಿತ್ತು ''ಹಾ!
ಕೊನೆಯಾಜ್ಞೆಯಾಗಲಿ!'' ಎಂದು ಎದೆಯುಬ್ಬಿಸಿ ನಿಂತಿತ್ತು!

ಸಿ ಐ. ಡಿ. ಗಳು ಚುರುಕಾಗಿ ಹೊಂಚುಹಾಕುತ್ತಿದ್ದರು. ಶೀನು
ವನ್ನು ಬಳ್ಳಾರಿಯ ಜೈಲಿನಲ್ಲಿ, ಹೊರಗಿನ ವಾತಾವರಣಕ್ಕೆ ಗೊತ್ತಾಗು
ವಂತೆ ಇರಿಸಿದ್ದು, ಜೈಲು ಕಟ್ಟಡಕ್ಕೇ ಅಪಾಯವೆಂದು, ಪೋಲೀಸು
ಅಧಿಕಾರಿಗಳಿಗೆ ಕೆಲವು ಸಂಶಯ ಸೂಚನೆಗಳು ತೋರಿದುವು.
ಯಾವುದೋ ಒಂದು ವ್ಯಕ್ತಿ ಬಳ್ಳಾರಿಯ ಜೈಲುಖಾನೆಗಳನ್ನೆ ಧ್ವಂಸ
ಮಾಡಿ, ಶೀನುವನ್ನು ಬಿಡಿಸಿಕೊಂಡು ಹೋಗಲಿರುವಂತೆ ಅನುಮಾನ
ತೋರಿತು. ಆ ವ್ಯಕ್ತಿಗೆ ತುಂಬಾ ಜನಬಲವಿರುವಂತೆಯೂ, ಅವನ
ಹೆಸರು ಗೋಪಾಲರಾಯನೆಂದೇ ಇದ್ದೀತೆಂತಲೂ ಪೋಲೀಸರು ಅನು
ಮಾನಿಸುತ್ತಿದ್ದರು. ಕೂಡಲೇ ಶೀನುವನ್ನು ಬಳ್ಳಾರಿಯಿಂದ ಬೇರೆ
ಕಡೆಗೆ ಒಯ್ಯುವ ಏರ್ಪಾಡಾಯಿತು. ಶೀನು ಎಲ್ಲಿಗೂ ಪತ್ರಬರೆಯ
ಕೂಡದೆಂದು ಕಟ್ಟುನಿಟ್ಟಾಯಿತು. ಆದರೆ ಶೀನು ಅಧಿಕಾರಿಗಳೊಡನೆ
ಮನಗರಗುವಂತೆ ಬೇಡಿಕೊಂಡಮೇಲೆ, ಒಂದೇ ಒಂದು ಪತ್ರವನ್ನು
ಮಾತ್ರ ಬರೆಯಬಹುದೆಂದು, ಅನುಮತಿ ಸಿಕ್ಕಿದುದು ಅವನ ಪುಣ್ಯ
ವಾಯಿತು. ಆ ಪ್ರಕಾರ ಅವನು ಸುಂದರಿಗೆ ಕಡೆಯ ಪತ್ರವೆಂದು
ಒಂದು ಪತ್ರವನ್ನು ಬರೆದು ಹಾಕಿದನು.

ನಾಳೆ ಬೊಂಬಾಯಿಯ ಮಹಾಸಭೆಯಲ್ಲಿ ಮಹಾತ್ಮಾಗಾಂಧಿಯು ಭಾಷಣಿಸಿದೆ ಈ ಬಾರಿಯು ಅವರ ಭಾಷಣವು ಶಾಂತಿಪಲ್ಲಿಯಿಂದ ಕೂಡಿರಲಿಕ್ಕಿಲ್ಲವೆಂದು ಊಹೆ ಕಟ್ಟುತ್ತಿದ್ದಾರೆ ಜನರು. ಅವರ ಶಾಂತಿ ಮಂತ್ರವನ್ನು ಕೇಳಿ ಕೇಳಿ ಜನರಿಗೆ ಸಾಕಾಗಿ ಹೋಗಿತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತಿತ್ತು ಒಂದು ಕಡೆ ಯುದ್ಧದಿಂದ ಜರ್ಜರಿತವಾಗುತ್ತಿರುವ ಸರಕಾರಕ್ಕೆ, ನಾಳೆ ಮಹಾತ್ಮರ ಭಾಷಣದಿಂದಾಗಿ, ದೇಶದೊಳಗೆಲ್ಲ ಏನು ಪರಿಣಾಮವಾದೀತೋ ಎಂದು ಈಗಲೇ ಕಳವಳ ನಡುಗಲಾರಂಭವಾಗಿತ್ತು ಇದಕ್ಕೆ ಸಂಬಂಧಪಟ್ಟ ಅನೇಕ ಕಡೆಯ ಅನೇಕ ಖೈದಿಗಳನ್ನೆಲ್ಲ, ಗುಪ್ತವಾಗಿ ಒಂದಾನೊಂದು ಗುಪ್ತ ಸ್ಥಳಕ್ಕೆ ಒಯ್ದುಬಿಡಬೇಕೆಂದು ಅಪ್ಪಣೆ ಹೊರಟಿತ್ತು ಆ ಪ್ರಕಾರ ಶೀನುವನ್ನು ಕೂಡಾ ಮುನ್ನಾದಿನವೇ ಹೊರಡಿಸಲಾರಂಭಿಸಿದರು ಆಗಲೇ ಅವನ ಪುಣ್ಯವಶಾತ್ ಸುಂದರಿಯ ಆಸರೆಯಲ್ಲಿರುವ ಗೌರಿ ಬರೆದ ಪತ್ರವು ಅವನ ಕೈಗೆ ಸಿಕ್ಕಿತು ಆದರಿಂದ ಅವನ ಜೆಟ್ಟಿದಾತಹ ವ್ಯಸನವು ಇದ್ದಕ್ಕಿದ್ದಂತೆ ಅಡಗಿಹೋಗಿ, ಸಂತೋಷದಿಂದ ಹಗುರಾದನು.

ಬಳ್ಳಾರಿ— ಹುಬ್ಬಳ್ಳಿ ಲೈನಿನಲ್ಲಿ, ಶೀನುವನ್ನು ಸಾಗಿಸಿಕೊಂಡು ರೈಲುಗಾಡಿ ಓಡುತ್ತಿತ್ತು. ಹೊಸಪೇಟೆ ಸ್ಟೇಶನ್ನು ದಾಟಿ. ತುಂಗಭದ್ರೆಯ ಸೇತುವೆಯನ್ನು ಕಳೆದು ಅಡವೀದಾರಿಯಲ್ಲಿ. ರೈಲುಗಾಡಿ ಧಕ್ಕಧಕ್ಕನೆ ಶಿಲಿಗೊಡುತ್ತ ಒಂದೇ ಸಮನೆ ಓಡುತ್ತಿತ್ತು

ಕತ್ತಲೆಯ ರಾತ್ರಿಯ ಹೊತ್ತು ಮುಂದೆ ಬಾವಾಗಿ ಒಳಸಿಕೊಂಡು ಹೋದ ಕಂಬೀದಾರಿಯಲ್ಲಿ ಮುಂದೆ ತಿರುಗಿದ ಆ ರೈಲು ಇದ್ದಕ್ಕಿದ್ದಂತೆ ವೇಗವನ್ನು ಕಡಮೆಮಾಡಿಕೊಂಡಿತು. ಮುಂದೆ ದೂರದಲ್ಲಿ ರೈಲುವೇ ಲೈನಿನಮೇಲೆ ಜಗಜಗಿಸುತ್ತಿತ್ತೊಂದು ಕೆಂಪು ದೀಪ ಸುತ್ತಾ ಕವಿದಿರುವ ಕತ್ತಲೆಯ ಅಪಾಯದ ಕಣ್ಣಿನಂತೆ ಕಾಣುತ್ತಿತ್ತು ಅದು! ಅದು ರೈಲುವೇ ಇಲಾಖೆಯ ಕಂಬದ ಕೆಂಪುದೀಪವಾಗಿರಲಿಲ್ಲ; ಅದಕ್ಕಿಂತಲೂ ತೀವ್ರ— ತೀಕ್ಷ್ಣ ಪ್ರಕಾಶಕಾರಿಯಾಗಿತ್ತು. ಕೆಂಪುದೀಪ ಕಣ್ಣಿಗೆ ಬಿದ್ದರೆ, ಎಂತಹ ಪ್ರಚಂಡ ಶಕ್ತಿಯ ರೈಲುಗಾಡಿಯಾದರೂ ಮುಂದೆ ಹೋಗಲು ಧೈರ್ಯ ಮಾಡೀತೆ? ಅದೂ ನೂರಾರು ಜನರ ಜೀವಗಳನ್ನು ಹೊತ್ತುಕೊಂಡು ಹೋಗುವ ಹೊಣೆಗಾರಿಕೆಯ ರೈಲು? ರೈಲು ಆ ಬಾವು ಬೀದಿಯಲ್ಲಿ

ಇದ್ದಕ್ಕಿದ್ದಂತೆ ನಿಧಾನವಾಗಿ ನಿಂತುಬಿಟ್ಟಿತು. ಪ್ರಯಾಣಿಕರು ಕತ್ತಲೆಯಲ್ಲಿ ಬಗ್ಗಿ ಬಗ್ಗಿ ನೋಡುತ್ತಿದ್ದರು

ನುಗ್ಗುನುರಿಯಾಗುವಂತೆ ಜನರು ತುಂಬಿದ್ದರು ಆ ರೈಲಿನೊಳಗೆ. ಅವರಲ್ಲಿ ಮುಕ್ಕಾಲು ಭಾಗವೆಲ್ಲಾ ಮಿಲಿಟರೀ ಸಿಪಾಯಿಗಳು !

ಏನು—ಏಕೆ ಎಂದು ನೋಡಿ ತಿಳಿಯಲಿಕ್ಕೂ ವ್ಯವಧಾನವಾಗಲಿಲ್ಲ. ರೈಲು ನಿಧಾನಿಸಿಕೊಂಡು ನಿಲ್ಲುನಿಲ್ಲುತ್ತಿರುವಾಗಲೇ ಯಾರಾರೋ ಹಲವಾರು ತುಂಟರು ರೈಲ ಜತೆಯಲ್ಲೇ ಓಡಿಕೊಂಡು ಹಾರಿಹಿಡಿದು ನೇತಾಡಿಕೊಂಡೇ ಏರತೊಡಗಿಬಿಟ್ಟಿದ್ದರು ರೈಲು ಪೂರಾ ನಿಂತಾಗ ನೂರಾರು ಮಂದಿಗಳು ರೈಲನ್ನು ಮುತ್ತಿಬಿಟ್ಟಿದ್ದರು ಯಾರವರು? ಆ ಗುಡ್ಡಗಾಡು ಪ್ರದೇಶದ ಕತ್ತಲೆಯೊಳಗಿನಿಂದ ಬಗೆದುಕೊಂಡೆದ್ದು ಬಂದವರೊ ?

ಇದಿರು ನೋಡದಂತೆಯೇ ಶೀನು ಇರುವ ಕಂಪಾರ್ಟ್‌ಮೆಂಟು, ಇರುವೆಗಳ ಹಾಗೆ ಏರಿದ ತುಂಟರ ತಂಡದಿಂದ ತುಂಬಿಹೋಯಿತು. "ಮಹಾತ್ಮಾ ಗಾಂಧೀ ಕೀ ಜೈ!" ಎಂಬ ಘೋಷಣವು ಆ ಕಂಪಾರ್ಟ್‌ಮೆಂಟಿನಿಂದೆದ್ದಿತು ಅಲ್ಲಿ ಎಂಟು ಮಂದಿ ಪೋಲೀಸರ ನಡುವೆ ಶೀನು ಕುಳಿತಿದ್ದನು. ಏರಿದ ತುಂಟರು ಆ ಪೋಲೀಸರಿಗಿಂತ ಮುಮ್ಮಡಿ ಮಿಗಿಲಾಗಿದ್ದರು ಒಮ್ಮೆಲೆ ಎಲ್ಲರೂ ಪೋಲೀಸರ ಮೈಮೇಲೆಯೇ ಏರಿಬಿಟ್ಟದರಿಂದ, ಅಲ್ಪಸ್ವಲ್ಪ ನುಗ್ಗಾಟ ಸಳ್ಳಾಟವಾದರೂ ಪೋಲೀಸರು ಕುಸಿದುಹೋದರು ಇದಿರು ನೋಡದ ಸಂಭವದಿಂದ ಒಮ್ಮೆಲೆ ಬೆರಗೇರಿ ಹೋಗಿತ್ತು ಆ ಪೋಲೀಸರಿಗೆ ! ಆ ಬೆರಗಿಳಿದು ನೋಡುವುದರೊಳಗಾಗಿ, ಖೈದಿ ಶೀನು ಆ ರೈಲಿನಲ್ಲಿರಲಿಲ್ಲ ಅವನನ್ನು ಎಳೆದುಕೊಂಡು ರೈಲಿನಿಂದಿಳಿಸಿ, ಹೊತ್ತುಕೊಂಡೇ ಹೋಗಿಬಿಟ್ಟಿದ್ದರು ಆ ತುಂಟರು !

"ಮಹಾತ್ಮಾ ಗಾಂಧೀ ಕೀ ಜೈ! ಭಾರತಮಾತಾ ಕೀ ಜೈ" ಎಂಬ ಘೋಷಣವು ಕತ್ತಲೆಯೊಳಗಿನಿಂದ ಎರಡು ಮೂರು ಬಾರಿ ಮೊಳಗಿತು. ಆ ಮೇಲೆ ಸದ್ದಿಲ್ಲ ಆ ನಿಶ್ಶಬ್ದತೆಯನ್ನು ಸೀಳಿಕೊಂಡು ಪೋಲೀಸರು ಆ ಕಡೆಗೆ ಹಾರಿಸಿದ ಎರಡುಮೂರು ಗುಂಡುಗಳು 'ಥ.ವೂಲ್' 'ಥ.ವೂಲ್' ಎಂದು ಸಿಡಿದು ಸಪ್ಪಳಿಸಿದವು. ಅನೇಕ ಮಿಲಿಟರೀಯವರೂ ರೈಲ್ವೇ ಪೋಲೀಸರು, ಕೆಳಗೆ ಜಿಗಿದು ಜಿಗಿದು, ಮೇಲೂ ಕೆಲವು ಗುಂಡುಗಳನ್ನು

ಹಾರಿಸಿ, ಗುಂಡೆಸೆದ ಕಡೆಗೆ, ತೀವ್ರ ಪ್ರಕಾಶದ ಟಾರ್ಚ್ ಲೈಟನ್ನೂ ಹಾರಿಸಿ, ಹುಡುಕಿ ನೋಡಿದರು. ಗುಂಡುತಾಗಿಬಿದ್ದ ಒಂದು ನರ ಹುಳವೂ ಅವರ ಕಣ್ಣಿಗೆ ಬೀಳಲಿಲ್ಲ !

ಎಲ್ಲರೂ ಹಿಂದಿರುಗಿ ಮತ್ತೆ ರೈಲನ್ನೇರಿದರು. ಅಪಾಯ ಸೂಚಕ ವಾದ ಆ ರಕ್ತದೀಪವೂ ಈಗ ಮಾಯವಾಗಿತ್ತು. ರೈಲು ಹೆದರುತ್ತ ಹೆದ ರುತ್ತ ಧಕ್ಕಧಕ್ಕನೆ ಮುಂದಡಿಯಿಟ್ಟಿತು.

ಶೀನುವನ್ನು ಹೊತ್ತುಕೊಂಡು ಹೋದವರು ಹಾಗೆಯೇ ಒಂದು ಒಂದೂವರೆ ಗಂಟೆಯುವರೆಗೂ ಮೌನವಾಗಿ ಹೊತ್ತುಕೊಂಡೇ ನಡೆದೋಡಿ ದರು. ತುಂಗಭದ್ರೆಯ ಮೊರ್ಮೊರ್ಗಳಗೂ ಶೀನುವಿನ ಕಿವಿಗೆ ಬೀಳತೊಡ ಗಿತು. ಮತ್ತೆ ಮೊರ್ಮೊರ್ಗಳಗು ಹೋಗಿ ಒಂದೇ ಭೋರ್ಮೊರ್ಗಳಗಾಗಿ ಕೇಳಿ ಸಿತು. ಅಲ್ಲೊಂದೆಡೆ ಶೀನುವನ್ನಿಳಿಸಿದರು.

ಸುತ್ತಲೂ ಗಂಡಶಿಲಾಶೈಲಗಳು; ಒಂದು ಬದಿಯಲ್ಲಿ ತುಂಗಭದ್ರೆ; ಮೇಲೆ ತಾರಾಮಯವಾದಾಕಾಶ ಕತ್ತಲೆಯಲ್ಲಿ ಸರಿಯಾಗಿ ಕಣ್ಣಿಟ್ಟು ನೋಡಿದಾಗ, ಅದೊಂದು ಪುರಾತನ ಕಾಲದ ಶಿಥಿಲ ಪ್ರದೇಶದಂತೆ ತೋರುತ್ತಿತ್ತು. ಶಿಥಿಲವಾದ ಕೋಟೆ-ಅರಮನೆಗಳ ಕುರುಹುಗಳು ಅಲ್ಲಿ ಸುತ್ತ ಕಾಣುತ್ತಿದ್ದುವು ಪಕ್ಕದಲ್ಲಿರುವ ಗುಡ್ಡದ ಮೇಲೆಯೂ ಹಾಳು ಕೋಟೆಯೊಂದು ನಿಂತಿತ್ತು.

ಶೀನು ಸುತ್ತೂ ನಿಂತಿರುವ ಜನರನ್ನು ನೋಡಿ ಏನೋ ಕೇಳ ಬೇಕೆಂದಿದ್ದಾಗ, ಅವನೊಂದಿಗೇ ನಡೆದು ಬಂದಿದ್ದ ಮುಂಡಾಸಿನ ಹುನುಷನೊಬ್ಬನು—"ಏನಪ್ಪ ಶೀನೂ! ಸೌಖ್ಯವೆ?" ಎಂದು ಕೇಳುತ್ತ ಅವನ ಭುಜದ ಮೇಲೆ ಕೈ ಹಾಕಿದನು. ಸ್ವರದ ಗುರುತು ಹಿಡಿದ ಶೀನು ಉಲ್ಲಾಸಗೊಂಡು—"ಹಾ! ಗೆಳೆಯ ಗೋಪಾಲ್!" ಎಂದು ಅವ ನನ್ನು ಆಲಿಂಗಿಸಿದನು

ಕೋಟೆಯ ಬದಿಯ ಶಿಥಿಲವಾದ ಕಲ್ಲರ ಮನೆಯ ಜರಿದ ಜಗುಲಿ ಯೊಂದರಲ್ಲಿ ಆ ಗೆಳೆಯರು ಆ ರಾತ್ರಿಯನ್ನು ಕಳೆದರು. ಅವರಿಗೆ ಬೇಕಾದ ಆಹಾರ ಪದಾರ್ಥಗಳೆಲ್ಲಾ—ಸಮೀಪದಲ್ಲಿರುವ ಹಳ್ಳಿಯ ಕಡೆ ಯಿಂದ ಬಂದುವು. ರಾತ್ರಿ ಬೆಳಗಾಗುವ ವರೆಗೂ ಶೀನೂ ಗೋಪಾಲರು

ಮಾತಾಡಿಕೊಂಡೇ ಇದ್ದರು. ಬೆಳಗಾದರೂ ಅವರ ಎಷ್ಟೋ ನೆನವರಿಕೆಯ ಮಾತುಕತೆಗಳು ಮುಗಿದಿಲ್ಲ.

ಗೋಪಾಲನು ಮಂಗಳೂರಿನಲ್ಲಿ ಶೀನನನ್ನು ಅಗಲಿದಮೇಲೆ, ಉತ್ತರ ಕನ್ನಡ ಮಾರ್ಗವಾಗಿ ಹೊರಟು, ಕೆಲವೆಡೆ ನಡೆದೂ, ಕೆಲವೆಡೆ ಬಸ್ಸೇರಿಯೂ, ಕೆಲವೆಡೆ ಗಾಡಿಯಲ್ಲಿಯೂ, ಕೆಲವೆಡೆ ರೈಲಿನಲ್ಲಿಯೂ, ಪ್ರಯಾಣ ಮಾಡಿದ ಕಷ್ಟವನ್ನೂ, ಧರಿಸಿದ ಬಗೆಬಗೆಯ ವೇಷಗಳನ್ನೂ ಮಾಡಿದ ಭಾಷಣದ ಸಾರಗಳನ್ನೂ ಶೀನುವಿಗೆ ಹೇಳಿದನು. ಊರ ಜನರು ಅವನಿಗೆ ತೋರಿದ ಸಹಕಾರಾದರಗಳನ್ನು ಬಾಯಿತುಂಬ ಬಣ್ಣಿಸಿದನು. ಹಾಗೆ ಅವನು ಉತ್ತರ ಕನ್ನಡ ಪ್ರಾಂತದಲ್ಲಿ ಪ್ರಚಾರಮಾಡುತ್ತ ತಿರುಗಾಡುತ್ತಿದ್ದಾಗ, ಶೀನು ಹಂಪೆಯಲ್ಲಿ ಖೈದಿಯಾದ ವಾರ್ತೆ ಪತ್ರಿಕೆಯ ಮುಖಾಂತರವಾಗಿ ಅವನಿಗೆ ಗೊತ್ತಾಯಿತು. ಆಮೇಲೆ ಅಲ್ಲಲ್ಲಿಯ ಉಪಕೇಂದ್ರಗಳ ಗುಪ್ತವಾರ್ತೆಯಿಂದ ಶೀನು ಬಳ್ಳಾರಿಯ ಜೈಲಿನಲ್ಲಿರುವ ಸಂಗತಿಯೂ ಅವನಿಗೆ ತಿಳಿಯಿತು. ಆನಂತರ ಶೀನುವನ್ನು ಹೇಗಾದರೂ ಬಿಡುಗಡೆ ಮಾಡಿ ಅವನೊಂದಿಗೇ ಬೊಂಬಾಯಿಗೆ ಹೋಗಬೇಕೆಂದು ಗೋಪಾಲನಿಗೆ ತೋರಿತು. ಆಗ ಗೋಪಾಲನು ಹುಬ್ಬಳ್ಳಿ, ಧಾರವಾಡ ಮೊದಲಾದ ಪ್ರಾಂತಗಳಲ್ಲಿ ಸುತ್ತುತ್ತಿದ್ದನು. ಅಲ್ಲಿಂದ ಬಳ್ಳಾರಿಗೆ ತಿರುಗಿದನು. ಬಳ್ಳಾರಿಯ ಜೈಲು ವಠಾರದ ಸುತ್ತಲೂ ಗೋಪಾಲನ ಕೈಯಾಳುಗಳು ತಿರುಗಲಾರಂಭಿಸಿದರು. ಶೀನುವನ್ನು ರಾತ್ರಿಯ ರೈಲಿನಿಂದ ಎಲ್ಲಿಗೋ ಕರೆದೊಯ್ಯುವರೆಂಬ ಸುಳಿವೂ ಗೋಪಾಲನಿಗೆ ಗೊತ್ತಾಯಿತು. ಮುಂಚಿನ ದಿನವೇ ಶೀನುವನ್ನು ಸ್ಥಳ ಪಲ್ಲಟಮಾಡಿ ಬಳ್ಳಾರಿಯ ಕೋಟೆಯೊಳಗೆ ಇಟ್ಟುದನ್ನು ಅವನು ನೋಡಿದ್ದನು. "ಈ ಖೈದಿಯನ್ನು ಇಂದು ರಾತ್ರಿಯ ರೈಲಿನಲ್ಲಿ ಪೂನಾಕ್ಕೆ ಒಯ್ಯಬೇಕಂತೆ. ನಾನು ಅವನೊಂದಿಗೇ ಹೋಗಬೇಕು" ಎಂದು ಒಬ್ಬ ಪೋಲಿಸನು ಇನ್ನೊಬ್ಬ ಪೋಲೀಸನೊಂದಿಗೆ ತಮಾಷೆಯಾಗಿ ಮಾತಾಡುತ್ತಿದ್ದಾಗ ಗೋಪಾಲನು ಕೇಳಿಕೊಂಡಿದ್ದನು. ಕೂಡಲೇ ಗೋಪಾಲನು ಚತುರನಾದ ತನ್ನ ಸಹಚರನೊಬ್ಬನನ್ನು ಬಳ್ಳಾರಿಯಲ್ಲಿ ಬಿಟ್ಟು, "ಇವರಿಗೆ ಸಂದೇಹಬಾರದಂತೆ ಇವರನ್ನೇ ನೋಡುತ್ತಿದ್ದು, ಇವರು ರಾತ್ರಿಯ ರೈಲಿನಲ್ಲಿ ಯಾವ ಕಂಪಾರ್ಟಮೆಂಟಿನಲ್ಲಿ ಖೈದಿಯನ್ನು ಸಾಗಿಸುವರೋ ಅದರ ಪಕ್ಕದ

ಕಂಪಾರ್ಟಮೆಂಟಿನಲ್ಲಿ ನೀನು ಏರಿಕೊ. ತುಂಗಭದ್ರೆಯ ಆಚೆಯ ಕಡೆ ಯಲ್ಲಿ ರೈಲನ್ನು ನಿಲ್ಲಿಸಲು ನಾನು ಏರ್ಪಾಡು ಮಾಡುವೆನು ” ಎಂದು ಹೇಳಿಟ್ಟು, ಗೋಪಾಲನು ಬಸ್ಸೇರಿ ಹೊಸಪೇಟೆಗೆ ಬಂದನು. ಅಲ್ಲಿಂದ ಕಾಲ್ನಡೆಗೆಯಿಂದಲೇ ಹೋಗಿ, 'ದೇಶೀಯ ಸೇನೆ'ಗೆ ಸೇರಿ ಸಿದ್ಧರಾಗುವ, ಹಳ್ಳಿಯ ವೀರಯುವಕ ಪಡೆಯೊಂದಿಗೆ, ಮೇಲೆ ಹೇಳಿದ ಆ ಅಡವೀದಾರಿ ಯಲ್ಲಿ ರೈಲನ್ನು ನಿಲ್ಲಿಸಿ ಶೀನುವನ್ನು ಪಾರುಮಾಡಿಸಿದನು. ಗೋಪಾಲನ ಜನರನ್ನೂ ಅವರ ಕಾರ್ಯಕುಶಲತೆಯನ್ನೂ ಕಂಡು ಕೇಳಿ ಶೀನು ಬೆರ ಗಾದನು ಅವನ ಹೃದಯವು ಮೆಚ್ಚುಗೆಯಿಂದ ತುಂಬಿತು.

ಗೌರಿಯ ಮೊದಲಿನ ಸಮಾಚಾರಗಳೆಲ್ಲಾ ಗೌರಿಯೇ ಅವನಿಗೆ ಬರೆದಿದ್ದೊಂದು ಪತ್ರದಿಂದ ಗೊತ್ತೇ ಇದ್ದಿತು. ಆ ಪತ್ರದಲ್ಲಿ ಗೌರಿ ವರದನನ್ನು 'ಆಪದ್ಬಂಧು'ವಿನಂತೆ ಚಿತ್ರಿಸಿದ್ದರೂ, ಅವಳ ಹೃದಯ ದೊಳಗೆ ಅಡಗಿದ್ದ ನೋವು ಆ ಪತ್ರದ ಶೈಲಿಯಲ್ಲಿ ಒಡಮೂಡಿಕೊಂಡು ಗೋಪಾಲನ ಹೃದಯಕ್ಕೂ ತಟ್ಟಿತ್ತು ಅವಳು ಸಹಿಸಲಾರದ ಒಂದು ಸಂಕಟವನ್ನು ಸಹಿಸಿಕೊಂಡಿರುವಂತೆ ಅವನಿಗೆ ಭಾಸವಾಗಿತ್ತು. ಸಿನಿಮಾ ಸ್ಟೂಡಿಯೋಗಳೆಲ್ಲಾ ಬಹಳವಾಗಿ, ವಿಟೀ-ವಿಟ-ಕುಡಿಗಾರರ ವಿಲಾಸ ಮಂದಿರದಂತಹವುಗಳೆಂದು ಅವನು ಕೇಳಿದ್ದನು. ಅಂತಹ ಸ್ಥಳದಲ್ಲಿ ಸಿಕ್ಕಿಬಿದ್ದ ಗೌರಿ ವ್ಯಸನವಿಲ್ಲದೆ ಹೇಗಿದ್ದಾಳು ? ಏನೋ ಮಾತು ಕೊಟ್ಟು ಸಿಕ್ಕಿಬಿದ್ದಂತೆ ಬಿದ್ದಿದ್ದಾಳಲ್ಲವೆ ? ಇದನ್ನು ನೆನೆಯುವಾಗ, ಮದರಾಸಿಗೆ ಹೋಗಿ ಗೌರಿ ಇರುವ ಸ್ಥಳವನ್ನು ಹುಡುಕಿ ಹಿಡಿದು ಅವಳಿಗೆ ತಕ್ಕ ಸಮಾ ಧಾನ ಹೇಳಬೇಕೆಂದು ಗೋಪಾಲನ ಮನಸ್ಸಿಗೆ ತೋರುತ್ತಿತ್ತು. ಸ್ಟೂಡಿಯೋದಲ್ಲಿ ಕುಲೀನ ಸ್ತ್ರೀಯರಿಗೆ ಸಲ್ಲತಕ್ಕ ಗೌರವ ಮರ್ಯಾದೆ ಗಳು ಗೌರಿಗೂ ಸಲ್ಲುವುದಾದರೆ ಅವಳು ಸಿನಿಮಾದಲ್ಲಿ ನಟಿಸುವುದರಿಂದ ತಪ್ಪೇನಿಲ್ಲವೆಂದೂ ಅವನು ಭಾವಿಸಿದ್ದನು. ಸಿನಿಮಾದಲ್ಲಿ ನಟಿಸಬೇಕೆಂಬ ನಿರ್ಬಂಧವೇನೋ ಅವಳಿಗೆ ಬಂದಿರಬೇಕು ಎಲ್ಲಿ ಗೋಪಾಲನಿಗೆ ಸಿಟ್ಟಾಗುವುದೋ ಎಂಬ ಅಂಜಿಕೆಯಿಂದಲೇ ಅವಳು ಅವನಲ್ಲಿ ಕ್ಷಮಾ ಯಾಚನೆ ಮಾಡಿದ್ದಾಳೆ. ಅಲ್ಲದೆ ಅವಳಿಗೆ ಪತ್ರಬರೆಯಲು, ಅವಳು ವಿಳಾಸವನ್ನು ಕೂಡ ತಿಳಿಸಿಲ್ಲ ಅದರ ರಹಸ್ಯವೇನಿರಬಹುದು ? ಮದ ರಾಸಿಗೆ ಹೋಗಿ ಎಲ್ಲವನ್ನೂ ವಿಚಾರಿಸಿ ಅವಳ ಅಂಜಿಕೆಯನ್ನು ಹೋಗ

ಲಾಡಿಸಬೇಕು. ಹೀಗೆ ಗೌರಿಯನ್ನು ಕುರಿತು ಗೋಪಾಲನ ಯೋಚನೆ ಹರಿದಿತ್ತು.

ಬಳ್ಳಾರಿಗೆ ಹೋಗಿ ಶೀನುವನ್ನು ಹೇಗಾದರೂ ಸೆರೆಯಿಂದ ತಪ್ಪಿಸಿ, ಅವನೊಂದಿಗೆ ಮದರಾಸಿಗೆ ಹೋಗಿ ಗೌರಿಯನ್ನು ಕಾಣುವುದೆಂದು, ಅವನು ಇತ್ತ ತಿರುಗಿ ಬಿಟ್ಟಿದ್ದನು.

ಗೆಳೆಯರಿಬ್ಬರೂ ಹೀಗೆ ಪರಸ್ಪರ ಬಿಚ್ಚು ಮನದಿಂದ ಮಾತಾಡಿಕೊಂಡರು. ಈಗೇನೂ ಅವಸರವಾಗಿ ಮದರಾಸಿಗೆ ಹೋಗಿ ಗೌರಿಯನ್ನು ಹುಡುಕಬೇಕಾಗಿರಲಿಲ್ಲ. ಅವಳು ಸೇರಬೇಕಾದಲ್ಲಿ ಸೇರಿ ಸುಖವಾಗಿರುವಳೆಂಬ ವಾರ್ತೆ, ಅವಳೇ ಬರೆದ ಕಾಗದದಿಂದ ಸ್ಪಷ್ಟವಾಯಿತಷ್ಟೇ? ಆದುದರಿಂದ ಕೈಗೊಂಡ ದೇಶಸೇವೆಯ ಕಾರ್ಯವನ್ನು ಪಾಲಿಸುತ್ತ ನಿಧಾನವಾಗಿ ಹೋದರೆ ಸಾಕಾಗಿತ್ತು.

ಈ ಸಮಾಚಾರಗಳನ್ನು ಪತ್ರಮೂಲಕವಾಗಿ ಗೌರೀ ಸುಂದರಿಯರಿಗೆ ತಿಳಿಸುವುದು ಉಚಿತವಲ್ಲವೆಂದು ಅವರಿಗೆ ತೋರಿತು. ಗೋಪಾಲನು ವಾರಂಟಿಗೆ ಸಿಕ್ಕದೆ ತಪ್ಪಿಸಿಕೊಂಡು ತಿರುಗುತ್ತಿರುವ ವಿಪ್ಲವಕಾರ. ಶೀನು ತಪ್ಪಿಸಿಕೊಂಡ ಖೈದಿ. ಯುದ್ಧಕಾಲವಾದುದರಿಂದ ಪತ್ರಗಳೆಲ್ಲಾ 'ಸೆನ್ಸಾರ್' ಆಗಿ ಹೋಗುತ್ತಿದ್ದುವು. ಆಗ ಏನಾದರೂ ಅಪಾಯವಾದರೂ ಆದೀತಲ್ಲವೆ ?

ಇಬ್ಬರೂ ಪೋಲೀಸರಿಗೆ ಗುರುತು ಹತ್ತದಂತೆ ಮಾರು ವೇಷದಿಂದಲೇ ನಡೆಯಬೇಕಾಗಿತ್ತು. ಗೋಪಾಲನು ಈ ಮೊದಲೇ ಹಳ್ಳಿಯ ಗೌಡನಂತೆ ವೇಷ ಹಾಕಿಕೊಂಡಿದ್ದನು ಶೀನು ನುಣ್ಣಗೆ ತಲೆಬೋಳಿಸಿಕೊಂಡು, ಮೀಸೆಗೀಸಿಕೊಂಡು, ಕಾವೀಶಾಟಿಯನ್ನುಟ್ಟುಕೊಂಡು, ಹಣೆ ತುಂಬ ವಿಭೂತಿ ಬಡಿದುಕೊಂಡು, ಕೈಯಲ್ಲಿ ದಂಡಕಮಂಡಲಗಳನ್ನು ಹಿಡಿದುಕೊಂಡು, ಗೋಪಾಲನೊಂದಿಗೆ ಹೊರಟನು

ಇವರಿಬ್ಬರು 'ಗುಪ್ತ ದೇಶೀಯ ಸೇನೆಯ' ನಾಯಕರೆಂದು ಪರಿಗಣಿಸಲ್ಪಟ್ಟಿದ್ದುದರಿಂದ, ಇವರು ಎಲ್ಲಿಗೆ ಹೋದರೂ, ಇವರಿಗೆ ಜನರ ಗುಪ್ತಸಹಕಾರವಿದ್ದೇ ಇತ್ತು. ಈ ಸಂಬಂಧವಾಗಿ ದೇಶದೊಳಗೆಲ್ಲಾ ಸಾಕಷ್ಟು ಪ್ರಚಾರವು ಮೊದಲೇ ನಡೆದಿತ್ತು; ನಡೆಯುತ್ತಲೂ ಇತ್ತು. ಇವರಂತಹ ಗುಪ್ತಪ್ರಚಾರಕರು ದೇಶದ ತುಂಬಾ ಹಬ್ಬಿಹರಡಿದ್ದರು.

ಸರಕಾರವು ಆಗಾಗ ಅವರನ್ನು ಹಿಡಿಹಿಡಿದು ಹಾಕುತ್ತಲೇ ಇದ್ದಿತು. ಮತ್ತೆ ಮತ್ತೆ ಅವರು ಹುಟ್ಟಿಕೊಳ್ಳುತ್ತಲೇ ಇದ್ದರು.

---

# ೪೧

ಹೊಸಪೇಟೆಯ ಹೊರಗೆ ಒಂದು ಛತ್ರದಲ್ಲಿ ಸನ್ಯಾಸಿ ಶೀನು ಇಳಿದು ಕೊಂಡನು ಗೌಡಗೋಪಾಲನು ಊರೊಳಗೆ ಹೋದನು ಹೋದವನು ಮರಳಿ ಛತ್ರಕ್ಕೆ ಬರುವಾಗ ಅವನ ಜತೆಯಲ್ಲಿ ನಾಲ್ಕಾರು ಮಂದಿ ಸ್ವಯಂಸೇವಕರಿದ್ದರು ಗೋಪಾಲನ ಕೈಯಲ್ಲಿದ್ದ ಪತ್ರಿಕೆಯಲ್ಲಿ "ಯಾರೋ ತುಂಟರು ಓಡುವ ರೈಲನ್ನು ನಿಲ್ಲಿಸಿ, ಒಬ್ಬ ರಾಜಕೀಯ ಖೈದಿಯನ್ನು ಹಾರಿಸಿಕೊಂಡು ಹೋದರು" ಎಂಬ ವಾರ್ತೆ ಪ್ರಕಟವಾಗಿತ್ತು ಮತ್ತೇನೂ ವಿಶೇಷ ಸತ್ಯವಾರ್ತೆ ಕಾಣಲಿಲ್ಲ.

ಮರುದಿನ ಪತ್ರಿಕೆಯಲ್ಲಿ ಖಂಡಿತವಾಗಿ ವಿಶೇಷ ವಾರ್ತೆ ಬಂದೀತೆಂದು ಶೀನೂ–ಗೋಪಾಲರು ನಿರೀಕ್ಷಿಸಿದರು ಬರಲಿಲ್ಲ. ಅದು ಪತ್ರಿಕೆಯಲ್ಲೆಲ್ಲ ಬರಲಾರದೆಂಬ ಅರಿವೂ ಅವರಿಗಿತ್ತು

ಮತ್ತೇನೂ ಅಲ್ಲ; ಬೊಂಬಾಯಿಯಲ್ಲಿ ೧೯೪೨ ಆಗೋಸ್ಟ್ ೭–೮ ತಾರೀಖುಗಳಲ್ಲಿ 'ಅಖಿಲ ಭಾರತ ಕಾಂಗ್ರೆಸ್' ಕಮಿಟಿ ಕೂಡಿ, ಎಪ್ರಿಲ್‌ನಲ್ಲಿ ನಡೆದ ಠರಾವನ್ನು ಊರ್ಜಿತಗೊಳಿಸಿತ್ತು ಬ್ರಿಟಿಷ್ ಚಕ್ರಾಧಿಪತ್ಯವು ಭಾರತವನ್ನು ಬಿಟ್ಟುಕೊಟ್ಟು ಹೋಗಲೇಬೇಕೆಂದು ಕೋರಿತ್ತು. ಭರವಸೆಗಳೂ ವಾಗ್ದತ್ತಗಳೂ ಪ್ರಯೋಜನವಿಲ್ಲವೆಂದು ಸಂದೇಹಕ್ಕೆಡೆಯಿಲ್ಲದಂತೆ ಸ್ಪಷ್ಟವಾಗಿ ತಿಳಿಸಿ ಬಿಟ್ಟಿತ್ತು. ನಡೆಯಲಿರುವ ಚಳುವಳಿಯನ್ನು ಕುರಿತು ಪಾಸಾದ ಠೀವರ್ಮಾನದ ವಾಚಕದ ಸಾರವು ಹೀಗಿತ್ತು–

"ಸ್ವಾತಂತ್ರ್ಯ ಲಾಭಕ್ಕಾಗಿ ಅಖಿಲ ಭಾರತಕ್ಕಿರುವ ಸ್ಥಿರವಾದ ಹಕ್ಕನ್ನು ಸಾಧಿಸಲಿಕ್ಕಾಗಿ, ಅಹಿಂಸೆಯ ಮಾರ್ಗದಲ್ಲಿ ಗಾಂಧೀಜಿಯ ನಾಯಕತ್ವದಲ್ಲಿ ಮಹಾಜನ ಚಳುವಳಿ ಆರಂಭಿಸಲಾಗುತ್ತೆ. ಇದ

ರಿಂದುಂಟಾಗುವ ಕಷ್ಟನಷ್ಟಗಳನ್ನು ಪ್ರಜೆಗಳು ಮನಸ್ಥೈರ್ಯದಿಂದಲೂ ತಾಳ್ಮೆಯಿಂದಲೂ ಸಮಾಳಿಸಿಕೊಳ್ಳಬೇಕು "

ಈ ಠೀರ್ಮಾನವು ಸರ್ವಾನುಮತದಿಂದ ನೆರವೇರಿತ್ತು ಅನಂತರ ಮಾಡಿದ ಮಹಾತ್ಮರ ಅಮೂಲ್ಯ ಭಾಷಣವು ಎಲ್ಲೆಲ್ಲಿಯೂ ಕೇಳಿಬಂತು. ಮೊದಲು ವಯರ್‌ಲೆಸ್ ಮೂಲಕವಾಗಿ ಮುಖ್ಯಮುಖ್ಯ ನಗರಗಳಿಗೆಲ್ಲಾ ಕೇಳಿಸಿತು. ಅಲ್ಲಿಂದ ಊರಿಂದೂರಿಗೆ ಹರಡಿತು. ಅವರ ವಾಕ್ಯಗಳು ಕಾಗದ—ಕರಪತ್ರಗಳಲಿ, ಎಲ್ಲಾ ಭಾಷೆಗಳಲ್ಲಿಯೂ ರಾತಾರಾತ್ರಿಯೇ ಪ್ರಿಂಟಾಗಿ ಊರೂರು ದೇಶದೇಶವೆಲ್ಲಾ ಚೆದರಿತು ಪತ್ರಿಕೆಗಳಲ್ಲಿ ಬಾರ ದಿದ್ದರೇನು ? ಮಹಾತ್ಮರು ಬೊಂಬಾಯಿಯ ಮಹಾಜನ ಸಮುದ್ರದಲ್ಲಿ ಮಾಡಿದ ಅದ್ಭುತ ಭಾಷಣವು ಮಹಾಶಕ್ತಿಯಾಗಿ ಸಮುದ್ರದಲ್ಲೆದ್ದ ತುಫಾನಿನಂತೆ ವಾಯುವೇಗದಿಂದ ಹಿಂದೂದೇಶವೆಲ್ಲಾ ಹರಡಿತು. ಹಳ್ಳೀಮೂಲೆಗಳಲ್ಲಿ ವಾಸಮಾಡುತ್ತಿದ್ದವರ ಕಿವಿಗಳಿಗೂ ಕೇಳಿಸಿತು. ಕಿವುಡರಿಗೂ ಕೇಳಿಸುವಷ್ಟು ಪ್ರಬಲ ಸಿಂಹ ಗರ್ಜನೆಯಾಗಿ ಕೇಳಿಸಿತು. ವೃದ್ಧ ಗಾಂಧೀಯ ಧೀರವಾಣಿಯ ಸಾರಾಂಶವಿದು:—

......................ನಾನೊಬ್ಬ ಶಿರೋನಾಯಕನೆಂಬ ರೀತಿಯಲ್ಲಿ ನಿಂತಿರುವದಲ್ಲ; ನಿಮ್ಮೆಲ್ಲರ ಊಳಿಗದವನೆಂಬ ರೀತಿಯಲ್ಲಿ ಈಗ ನಡೆಯ ಲಿರುವ ಚಳುವಳಿಗೆ ನಾಯಕನೆಂಬ ಹೊಣೆಯ ಭಾರವನ್ನು ಹೊರುತ್ತಿ ದ್ದೇನೆ. ದೇಶದ ಮೊದಲನೆಯ ಸೇವಕನು ನಾನಾಗಿದ್ದೇನೆ ನೀವೆಲ್ಲಾ ಅನುಭವಿಸಲಿರುವ ಕಷ್ಟಗಳಲ್ಲಿ ನಾನೂ ಸಮಭಾಗಿಯಾಗಲು ಇಚ್ಛಿಸುತ್ತಿ ದ್ದೇನೆ

'ಪರಮಾತ್ಮನಲ್ಲಿ ನಂಬುಗೆಯಿಟ್ಟು ಅಂಜದೆ ಮುಂದುವರಿ' ಎಂದು ನನ್ನ ಅಂತರಾತ್ಮವು ಹೇಳುತ್ತದೆ..................ನಾನು ನೂರು ವರ್ಷ ಬದುಕಬೇಕೆಂದಿದ್ದೇನೆ ಆದರೆ ಅದುವರೆಗೆ ಜೀವದೊಂದಿಗಿದ್ದೇನೆಂದು ನನಗೆ ತೋರುವುದಿಲ್ಲ.

ಪ್ರಪಂಚದ ದೇಶಗಳೆಲ್ಲಾ ನನ್ನನ್ನಿದಿರಿಸಿ ನಿಂತರೂ, ನಾನು ಹೇಳು ವುದು ದಪ್ಪೆಂದು ಭಾರತದೇಶವೆಲ್ಲಾ ನಯವಾಗಿ ತಿಳಿಸಿದರೂ, ನಾನು ಯೋಚನೆಮಾಡಿ ಮುಂದಿಟ್ಟ ಈ ಅಡಿಯನ್ನು ಹಿಂದಿಡುವುದಿಲ್ಲ ಭಾರತ

ದೇಶಕ್ಕಾಗಿ ಮಾತ್ರವಲ್ಲ, ಇಡಿಯ ಪ್ರಪಂಚಕ್ಕಾಗಿಯೇ ಮುಂದುವರಿಯು ವೆನು...............

ಕಾಂಗ್ರೆಸು ಈಗ ಕೃತಿಯಲ್ಲಿಳಿಯಬೇಕು; ಇಲ್ಲವೇ ಸತ್ತು ನಾಶವಾಗಿ ಹೋಗಬೇಕು!... ............"

ಆಹಾ! ಎಂತಹ ವೀರ ಭಾಷಣವಿದು! ಭೀಷ್ಮ ಪಿತಾಮಹನೇ ಗಾಂಧಿಯ ವ್ಯೆಮನಗಳನ್ನು ಆಕ್ರಮಿಸಿಕೊಂಡನೇನೊ! ಶಾಂತಿ ಮಂತ್ರೋಪದೇಶಕರಾದ ಮಹಾತ್ಮರ ಮುಖದಿಂದ ಎಂತಹ ವೀರಾವೇಶದ ಮಾತುಗಳು ಹೊರಟುವು! ಇಂತಹ ಆಣತಿಯನ್ನೆ ದೇಶವು ಇದಿರು ನೋಡಿಕೊಂಡಿತ್ತು

ದೇಶವೆಲ್ಲಾ ಉತ್ಸಾಹದಿಂದ ತುಂಬಿ ತುಳುಕಿತು. "ಮಹಾತ್ಮಾ ಗಾಂಧೀ ಕೀ ಜೈ!" ಎಂದು ಗ್ರಾಮ-ಗ್ರಾಮ, ನಗರ-ನಗರ, ದೇಶ-ದೇಶ ವೆಲ್ಲಾ ಮಾರ್ಮೊಳಗಿತು.

ಮಹಾತ್ಮರ ಮುನಿಸೆಂದರೆ ಯಾರಿಗೆ ಭಯವಾಗದು? ತಾಳ್ಮೆಗೂ ಒಂದು ಎಲ್ಲೆಯುಂಟು. ತಾಳ್ಮೆಯು ಎಲ್ಲೆಯವರೆಗೂ ಬಂದ ಸಾಧು, ಮತ್ತೆ ತಾಳ್ಮೆಗೆಟ್ಟು ಎಲ್ಲೆ ಮೀರಿದನೆಂದರೆ ಏನಾದೀತೋ ಏನಾಗದೋ ಹೇಳಲು ಸಾಧ್ಯವೆ? ಅಂತೆಯೇ ಮಹಾತ್ಮರ ಆ ವೀರವಾಣಿಯನ್ನು ಕೇಳಿ ಬ್ರಿಟಿಷ್ ಅಧಿಕಾರವು ಗದಗದಿಸಿತು!

ಮತ್ತೆ ಒಂದೇ ಒಂದು ದಿನ ಕೂಡ ಕಳುವದೇ ರಾತ್ರಾರಾತ್ರಿಯ ಲ್ಲಿಯೇ ಮಹಾತ್ಮರನ್ನೂ ದೇಶದೇಶದೊಳಗಿರುವ ಎಲ್ಲಾ ಸ್ವದೇಶೀ ನಾಯಕರನ್ನೂ ಬ್ರಿಟಿಷ್ ಸರಕಾರವು ದಸ್ತಗಿರಿ ಮಾಡಿಬಿಟ್ಟಿತು! ಮಾತ್ರ ವಲ್ಲ ಅತಿಗುಪ್ತವಾಗಿ ಎಲ್ಲಿಗೋ ಸಾಗಿಸಿಯೂ ಬಿಟ್ಟಿತು!

ಅಯ್ಯೋ! ಏನು ಅಕ್ರಮ! ಮಹಾತ್ಮರ ನಾಯಕತ್ವವನ್ನ ಕಂಡೂ ಕಾಣದೆ ಹೋದ, ಸೇತು ಹಿಮಾಚಲಪರ್ಯಂತ ಅಖಿಲ ಭಾರತದ ಸಕಲ ಪ್ರಜೆಗಳೂ ತುಡಿತುಡಿಸಿದರು. ಅದುವರೆಗೆ ಅಡಗಿ ನಿಗಿನಿಗಿಸಿಕೊಂಡಿದ್ದ ದಾವಾಗ್ನಿಯ ಕಣಗಳು ಅಲ್ಲಲ್ಲಿ ಭಗ್ಗಭಗ್ಗನೆ ಸ್ಫೋಟ ವಾಗಿ ಹೊತ್ತತೊಡಗಿದವು. "............... ಕೃತಿಯಲ್ಲಿಳಿಸಿರಿ. ಇಲ್ಲವೇ ಸತ್ತು ಸ್ವರ್ಗ ಪಡೆಯಿರಿ................" ಎಂಬರ್ಥದ ಮಹಾತ್ಮರ ಅಮರ

ಗೀತಾ ವಾಕ್ಯವು ಮಹಾಜನತೆಗೆ ಮಹಾಬಲವನ್ನೂಡಿತು. ಹೆದರಿ ನಡುಗಿದ ಸರಕಾರವು ಮುಖ್ಯ ಮುಖ್ಯ ಮಹಾನಾಯಕರನ್ನು ಕೂಡ ಕೂಡಲೇ ಹಿಡಿಹಿಡಿದು ಸೆರೆಗೂಡಿಸಿದರೂ ಹೊರಗಿದ್ದ ನಾಯಕೋಪ ನಾಯಕರು ಹೋರಾಟದ ಸೂತ್ರವನ್ನು ಕೈಕೊಂಡು, ಒಬ್ಬರಿಗಿಬ್ಬರಾಗಿ ಇಬ್ಬರಿಗೆ ನಾಲ್ವರಾಗಿ ಜನತೆಯನ್ನು ಹುರಿದುಂಬಿಸಿದರು

ಇದರ ಮೇಲೆ ಗಾಂಧೀ, ನೆಹರೂ ಮುಂತಾದ ದೇಶದ ಜೀವಾಳದ ಮುಖಂಡರ ಕ್ಷೇಮ ಸಮಾಚಾರವೇ ತಿಳಿಯದೇ ಹೋದ ಸಂತಾಪವು, ಉರಿಯುವ ಬೆಂಕಿಗೆ ಎಣ್ಣೆ ಸುರಿದಂತೆ ಸೇರಿತು. ಅನೇಕ ವರ್ಷಗಳಿಂದ ಸೈರಿಸಿಕೊಂಡ ರೋಷ-ದ್ವೇಷಗಳೆಲ್ಲಾ ಒಮ್ಮೆಗೇ ಕಟ್ಟೊಡೆದು ಉಕ್ಕ ತೊಡಗಿತ್ತು.

ಆ ಪ್ರಾರಂಭದ ಮಹಾಭರದಲ್ಲಿ ಅನೇಕ ಪೋಲೀಸು ಸ್ಟೇಶನ್ನುಗಳು ಕೈಹಿಡಿಯಲ್ಪಟ್ಟುವು. ಪರದೇಶದಲ್ಲಿ ನಡೆಯುವ ಯುದ್ಧಕ್ಕೆ ಸಹಾಯಕವಾಗಿರುವ ರೈಲ್ವೇ ಲೈನುಗಳು ಅಲ್ಲಲ್ಲಿ ಕಿತ್ತುಹಾಕಲ್ಪಟ್ಟುವು. ಯುದ್ಧ ಸಪ್ಲಾಯಗಳನ್ನು ಅಲ್ಲಲ್ಲಿ ತಡೆದು ಹಿಡಿಯಲ್ಪಟ್ಟುವು. ಅನ್ಯರಾಳಿಕೆಯ ಕೇಂದ್ರ ಸ್ಥಾನಗಳಲ್ಲೊಂದಾದ ಅನೇಕ ಕೋರ್ಟು ಕಛೇರಿ ಆಫೀಸುಗಳನ್ನು ದೇಶಿಯ ನಾಯಕರು ಕೈವಶಪಡಿಸಿಕೊಂಡರು; ಅಥವಾ ದಹನ ಮಾಡಿಬಿಟ್ಟರು. ಪೋಲೀಸರಿಂದಲೂ, ಪ್ರತ್ಯಪ್ರತ್ಯೇಕವಾದ ಸೈನಿಕರಿಂದಲೂ, ಅಪರಿಮಿತವಾದ ಆಯುಧಗಳನ್ನು ಅಪಹರಿಸಲ್ಪಟ್ಟುವು. ಕೆಲವು ಕಡೆ ರೈಲ್ವೆ ಸ್ಟೇಶನ್ನುಗಳೂ, ಪೋಸ್ಟಾಫೀಸುಗಳೂ ಅಗ್ನಿಭಗವಾನನಿಗೆ ಆಹುತಿಯಾದುವು

ಮೊದಲಿನಿಂದಲೇ ಯೋಚನೆ ಮಾಡಿಟ್ಟ ಕಾರ್ಯಕ್ರಮಗಳಂತೆಯೇ ಬಹುಮಟ್ಟಿಗೆ ಹೋರಾಟವು ನಡೆದಿತ್ತು. ಆ ಬಗೆಯ ಕಾರ್ಯಕ್ರಮಗಳ ಸೂತ್ರಬಂಧವಿಲ್ಲದೇ ಹೋಗಿದ್ದರೆ, ಸಂತಾಪಾತಿಶಯದಿಂದ ಹುಚ್ಚೆದ್ದು ಹೋಗಿದ್ದ ಪ್ರಜೆಗಳು, ಇದಕ್ಕಿಂತಲೂ ಹೆಚ್ಚಾದ ವಿಪರೀತ ಕಾರ್ಯಗಳನ್ನೆಲ್ಲ ಮಾಡಿಬಿಡುತ್ತಿದ್ದರು.

ಆದರೆ ಇಷ್ಟರಿಂದಲೇ ಬಹಳ ವರ್ಷದಿಂದ ಭಾರತದಲ್ಲಿ ಬೇರುಬಿಟ್ಟು ನೆಲೆನಿಂತ, ಬ್ರಿಟಿಷ್ ಸಾಮ್ರಾಜ್ಯ ಮಹಾವೃಕ್ಷದ ತಾಯಿಬೇರೇ ಕದಲಿ ಹೋಯಿತು. ಅಡಿಗಲ್ಲು ಕದಲಿ ಜರಿದು ಬೀಳಲಾರಂಭಿಸಿದ ಸಾಮ್ರಾಜ್ಯ ಕಟ್ಟಡವನ್ನು ಅಲ್ಲಲ್ಲಿ ಹಿಡಿಹಿಡಿದು ನಿಲ್ಲಿಸಲಾರಂಭಿಸಿದ್ದರು. ಸರಕಾರವು

ತಮ್ಮಿಂದ ಸಾಧ್ಯವಾದಷ್ಟು ವಿರುದ್ಧ ಪ್ರಚಾರವನ್ನು ನಡೆಸಿದರು. ಈ ಹೋರಾಟಗಾರರಿಗೆಲ್ಲ " ಗೂಂಡಾಗಳು " " ಗೂಂಡರ ಪುಂಡಾಟ " ಎಂದು ಹೆಸರು ಕೊಟ್ಟು ಪಾಮರ ಪ್ರಜೆಗಳನ್ನು ಭ್ರಮೆಪಡಿಸಿದರು. "ಈ ಗೂಂಡಾಗಳು ನೆರೆಯಲ್ಲಿರುವ ಕಟುಶತ್ರುಗಳಾದ ಜಾಪಾನಿಗರ ಕೈಯಾಳುಗಳು; ಅಲ್ಲಿಯ ಗೂಢಚಾರ ಸಂಬಂಧಿತರು. ಆ ಶತ್ರುಗಳ ತಂತ್ರದಿಂದಲೇ ಇಂಡಿಯಾದಲ್ಲಿ ಈ ಬಗೆಯ ಗುಂಡಾಗಳು ಸೃಷ್ಟಿಯಾಗಿದ್ದಾರೆ. ಅವರನ್ನು ಹಿಡಿದು ಹಿಡಿದು ಹಾಕಲು ಜನರು ಸರಕಾರಕ್ಕೆ ಸಹಾಯ ಮಾಡಬೇಕು. ಯಾರೂ ಅವರ ಬೋಧನೆಗೆ ಕಿವಿಗೊಡಬೇಡಿರಿ. ಕಂಡಲ್ಲಿ ಹಿಡಿಯಿರಿ! ಪೋಲೀಸಿಗೆ ಸಹಾಯಮಾಡಿರಿ... ... ..." ಎಂದು ಎಲ್ಲೆಲ್ಲಿಯೂ ಪ್ರಚಾರಿಸಲಾಯಿತು ನಗರ ಬೀದಿಗಳ ಗೋಡೆಗಳಲ್ಲಿ, ದಿನಪತ್ರಿಕೆಗಳಲ್ಲಿ, ರೈಲ್ವೇ ಸ್ಟೇಶನ್‌ಗಳಲ್ಲಿ, ಪೋಸ್ಟಾಫೀಸುಗಳಲ್ಲಿ " ಫೈಟ್ ಗುಂಡಾಸ್!—" ಎಂಬ ಎಚ್ಚರಿಕೆಯ ಜಾಹೀರ ನೋಟೀಸುಗಳು ಕಾಣತೊಡಗಿದುವು

ಎಷ್ಟೋ ಮಂದಿಗಳನ್ನು ಹಿಡಿದರು; ಹಿಡಿಯುತ್ತಲೇ ಇದ್ದರು. ರೈಲುರಸ್ತೆಗಳೆಲ್ಲಾ ಅಲ್ಲಲ್ಲಿ ತುಂಡುತುಂಡಾಗಿ ಹೋದುದರಿಂದ, ತಂತಿ, ಟಪ್ಪಾಲು, ಪ್ರಯಾಣ, ಮೊದಲಾದವುಗಳಿಗೆಲ್ಲಾ ಅಡಚಣೆಯಾಯಿತು. ಈ ಕಷ್ಟಗಳನ್ನು ತಾಳ್ಮೆಯಿಂದ ಸೈರಿಸಿಕೊಳ್ಳಬೇಕೆಂದು ಮಹಾತ್ಮರೇ ಉಪದೇಶಿಸಿದ್ದುದರಿಂದ, ಯಾರೂ ಆ ಕಷ್ಟಗಳನ್ನೆಲ್ಲಾ ಲಕ್ಷ್ಯಮಾಡಲಿಲ್ಲ.

ಈ ವಿಪ್ಲವದ ಉತ್ಸಾಹದಲ್ಲಿ ನಮ್ಮ ಶೀನೂ ಗೋಪಾಲರು, ಪ್ರಾಮುಖ್ಯವಾದ ಭಾಗವನ್ನು ಕೈಗೊಂಡಿದ್ದರೆಂದು ಹೇಳಬೇಕಾಗಿಲ್ಲವಷ್ಟೆ? ಇಬ್ಬರೂ ಗ್ರಾಮದಿಂದ ಗ್ರಾಮಕ್ಕೆ ಸಾಗುತ್ತ ಮಹಾತ್ಮರ ಬೋಧನೆಯನ್ನು ಪ್ರತಿಧ್ವನಿಗೈದರು ಸಾವಿರಾರು ಕರಪತ್ರಗಳನ್ನೊಯ್ದು, ಹೋದಲ್ಲೆಲ್ಲಾ ಚೆಲ್ಲಾಡಿದರು ಅವುಗಳಲ್ಲಿ "ಮಹಾತ್ಮಾ ಗಾಂಧಿಯ ಆಜ್ಞೆ! ಇದೇ ಕೊನೆಯ ಹೋರಾಟ! ವಿಜಯವೋ— ವೀರ ಸ್ವರ್ಗವೋ! ಕಡಿಯಿರಿ ತಂತಿ ಕಂಬಗಳನ್ನು! ಕೀಳಿರಿ ರೈಲ್ವೇ ಲೈನುಗಳನ್ನು! ಖಜಾನೆಯನ್ನು ಹಿಡಿಯಿರಿ! ಯುದ್ಧ ಸಪ್ಲೈಗಳನ್ನು ತಡೆಯಿರಿ! ಆಯುಧಗಳನ್ನು ಕೈವಶಪಡಿಸಿಕೊಳ್ಳಿರಿ! ನಮಗೆ ಬ್ರಿಟಿಷ್ ಆಳಿಕೆ ಸಾಕು! ಬೇಡ! ಬ್ರಿಟಿಷ್ ಆಧಿಪತ್ಯವು ಭಾರತವನ್ನು ಬಿಟ್ಟು ತೊಲಗಲಿ!

ಮಹಾತ್ಮಾ ಗಾಂಧೀ ಕೀ ಜೈ! ಭಾರತಮಾತಾ ಕೀ ಜೈ!" ಎಂದೀರೀತಿಯಾಗಿ ದೇಶೀಯ ಭಾಷೆಗಳಲ್ಲಿ ಮಣಿಮಣಿಯಾಗಿ ಅಚ್ಚಾಗಿದ್ದವು ಅವುಗಳು ಊರೂರೆಲ್ಲಾ ಹಾರಾಡಿ ಉರಿಯುವ ಬೆಂಕಿಗೆ ಸಮಿಧೆಗಳಾದುವು.

ಈ ಉರಿಗೆ ಗಾಳಿ ಹಾಕುತ್ತಾ ಶೀನೂ-ಗೋಪಾಲರು ಮದರಾಸಿನ ಕಡೆಗೆ ನಡೆದಿದ್ದರು. ಕೆಲವು ಕಡೆ ಒಟ್ಟೊಟ್ಟಾಗಿ ನಡೆದರು. ಕೆಲವು ಕಡೆ ಬೇರೆಬೇರಾಗಿ ನಡೆದು ಸಂಕೇತ ಸ್ಥಳದಲ್ಲಿ ಒಟ್ಟಾದರು. ಅವರು ಹೋದಲ್ಲೆಲ್ಲಾ ಹುರುಪುಗೊಂಡ ತರುಣರು ಅವರ ಸುತ್ತಾ ಕೂಡುತ್ತಿದ್ದರು. ಅಲ್ಲಿಯ ನಾಯಕರೂ ಇವರೂ ಒಂದಾಗಿ ಜನರನ್ನು ಹುರಿದುಂಬಿಸುತ್ತಿದ್ದರು. ಪೋಲೀಸರು ಇವರನ್ನು ಅಟ್ಟಿಸಿಕೊಂಡು ಬರುವುದರೊಳಗೆ, ಇವರು ಇನ್ನೊಂದೂರಿಗೆ ಮುಟ್ಟಿ, ಅಲ್ಲಿ ಉರಿ ಎಬ್ಬಿಸುತ್ತಿದ್ದರು.

ಈ ಉತ್ಸಾಹಭರದಲ್ಲಿ ಶೀನುವಿಗೂ ಗೋಪಾಲನಿಗೂ ತುಂಬಾ ವ್ಯತ್ಯಾಸವಿತ್ತು ಗೋಪಾಲನು ತೀವ್ರವಾದಿ ಇದಿರಿಸಿದವರನ್ನು ಕೊಂದೇ ಚೆಲ್ಲಬಹುದೆಂಬಷ್ಟು ಭೀಮಗುಣದವನು ಶೀನುವಾದರೋ ಶಾಂತಿಪ್ರಿಯ. ಮಹಾತ್ಮರು ಹೇಳಿದ್ದೇನು? ಈಗ ನಡೆಯುವುದೇನು? ಅವರು ಅಹಿಂಸೆಯ ಮಾರ್ಗದಲ್ಲಿಯೇ ಹೋರಾಟವು ನಡೆಯಬೇಕೆಂದು ಹೇಳಿದ್ದಾರೆ ಧೈರ್ಯದಿಂದ ಮುನ್ನುಗ್ಗಬೇಕು; ಇದಿರಿಸಿದವರನ್ನು ಕೊಲ್ಲಬಾರದು. ತಾನು ಮಣಿಯಲೂಬಾರದು ಸಾಯುವುದಾದರೂ ಶಾಂತಧೈರ್ಯವನ್ನು ಬಿಡಬಾರದು ಪ್ರತಿಧ್ವಂದಿಗಳು ಸೆರೆಹಿಡಿದರೆ, ಸೆರೆಯಾಳಾಗಬೇಕು, ಇಡಿಯ ದೇಶದ ಮೂವತ್ತೈದು ಕೋಟಿ ಪ್ರಜೆಗಳೂ ಸೆರೆಯಾಳುಗಳಾಗಿ ಬಿಡಬೇಕು ಯಾರೂ ಯಾವ ಕೆಲಸ ಬೆಳೆಸುಗಳನ್ನೂ ಮಾಡಬಾರದು. ಇದೇ ಮಹಾತ್ಮರ ಬೋಧನೆಯ ತತ್ವವಿರಬೇಕಲ್ಲವೆ?

ಗೋಪಾಲನು ಆ ತತ್ವಕ್ಕೆ ವಿರುದ್ಧವೇ ಆಗಿದ್ದನು ಅನೇಕವಾಗಿ ಎಲ್ಲರೂ ಹಾಗೆಯೇ. ಮಹಾತ್ಮರ ವಾಣಿಯನ್ನು ತಮ್ಮ ತಮ್ಮ ಗುಣಾನುಸಾರವಾಗಿ ಅರ್ಥಮಾಡಿಕೊಳ್ಳುವವರೇ! ಶೀನು ಹೇಳುತ್ತಿರುವ ಅಹಿಂಸೆಗೆ ಗೋಪಾಲನು, ಹೀಗೆ ಸಮಾಧಾನ ಹೇಳುತ್ತಿದ್ದನು. ''ನೀನು ಹೇಳುವ ರೀತಿಯಾದ ಅಹಿಂಸೆಯಿಂದ, ಹಿಂಸಾಪ್ರಿಯ ಶತ್ರುವಿನ ಕೈಯಿಂದ ಸ್ವರಾಜ್ಯವು ಸಿಕ್ಕಲಿಕ್ಕೇ ಇಲ್ಲ. ಇದು ಹಿಂದಿನಂತೆ ಶಾಂತ ಚಳುವಳಿ ಹೂಡಿ

ಸೆರೆಮನೆ ಹೊಕ್ಕು ಸುಮ್ಮನಿರುವ ಕಾಲವಲ್ಲ. ಇದನ್ನೆಲ್ಲಾ ಮಹಾತ್ಮರು ಅರಿತುಕೊಂಡೇ ಈ ಬಗೆಯಾಗಿ ಅಪ್ಪಣೆಕೊಟ್ಟಿದ್ದಾರೆ. ಏನೂ ಕಂಗೆಡ ಬೇಡ ಶೀನೂ!"

ಅವನು ಹೀಗನ್ನುತ್ತಿದ್ದರೂ, ಆ ಪ್ರಚಂಡ ವಿಪ್ಲವವು ಶೀನುವಿಗೆ ಅಸಮಾಧಾನಕಾರಿಯಾಗಿಯೇ ಇತ್ತು. ಹೇಗಾದರೂ ಶತ್ರುವು ಬೇಗನೇ ಹಣ್ಣಿಗಾದರೂ ಬಂದು, ಈ ಅಲ್ಲೋಲ ಕಲ್ಲೋಲವು ನಿಲ್ಲಲೆಂದು ಅವನು ದೇವರನ್ನು ಪ್ರಾರ್ಥಿಸುತ್ತಾ ನಡೆದಿದ್ದನು. ಈ ಚಂಡಮಾರತಡಿಡಿಯಲ್ಲಿ ಅದು ದೂಡಿದ ಕಡೆಗೇ ಅವನು ನಡೆಯಬೇಕಾಯಿತಲ್ಲದೆ, ಅವನ ಸಮಾಧಾನ ವಾಕ್ಯಗಳನ್ನು ಯಾರು ತಾನೇ ಕೇಳಿಯಾರು?

ಮಹಾತ್ಮರೇ ಊದಿಬಿಟ್ಟ ಗಾಳಿಯಿದು; ಅದು ಮರಳಿ ಹಿಂದೆ ಹೋಗಲು ಮಹಾತ್ಮರ ವಾಣಿಯೇ ಕೇಳಿಸಬೇಕಾಗಿತ್ತು. ಕಡೆಗೆ ಉದ್ವಿಗ್ನರಾದ ಪ್ರಜೆಗಳಿಗೆ ಅವರ ಕ್ಷೇಮವಾರ್ತೆಯನ್ನಾದರೂ ಕೇಳಬೇಕಾಗಿತ್ತು "ನಮ್ಮ ಗಾಂಧಿ ಎಲ್ಲಿ?" "ನೆಹರೂ ಎಲ್ಲಿ?" "ಅವರನ್ನೇನು ಮಾಡಿದಿರಿ?" ಎಂದು ಅಲ್ಲಲ್ಲಿ ಗರ್ಜನೆಗಳೇಳುತ್ತಿದ್ದುವು.

ಇನ್ನೂ ಮಹಾತ್ಮರನ್ನು ಮುಚ್ಚಿಟ್ಟರೆ ಕಾರ್ಯವು ಕೆಡುವುದೆಂದು ಕೆಲವೇ ದಿನಗಳಲ್ಲಿ ಬ್ರಿಟಿಷ್ ಮುತ್ಸದ್ದಿಗಳಿಗೆ ತೋರಿತು! "ಇದೋ! ಮಹಾತ್ಮರೇ ಮೊದಲಾದ ನಿಮ್ಮ ಮುಖಂಡರೆಲ್ಲಾ ಕ್ಷೇಮವಾಗಿದ್ದಾರೆ." ಎಂಬ ಶುವಾರ್ತೆಯನ್ನು ಊರೂರಿಗೆಲ್ಲಾ ಹರಡಿತು. ಸರಕಾರವು ಮಹಾತ್ಮರ ಕಾಲಿಗೆಬಿದ್ದು ಬೇಡಿಕೊಂಡಿತೋ ಏನೋ! ಮಹಾತ್ಮರ ವಾಣಿಯೇ ಜನರ ಕಿವಿಗೆ ಕೇಳಿಸಿತು.

"ಪ್ರಿಯ ಬಾಂಧವರೆ! ಇನ್ನು ಸಾಕು ಮಾಡಿರಿ! ನಿಮ್ಮ ಉತ್ಸಾಹದಿಂದ ಹಿಂಸಾಪೀಡನೆಗಳು ಹೆಚ್ಚುವುದನ್ನು ನನ್ನಿಂದ ನೋಡಲಾಗುವುದಿಲ್ಲ. ಸಹಿಸಲಾಗುವುದಿಲ್ಲ ಇದು ನನ್ನ ವ್ರತವಲ್ಲ. ಇಷ್ಟೇ ಸಾಕು. ಈ ರೀತಿಯಾಗಿ ಶತ್ರುವನ್ನು ಸೋಲಿಸಿ, ನಿರಂತರ ಶತ್ರುವಾಗಿಯೇ ಉಳಿಯಬಿಡುವುದಕ್ಕಿಂತಲೂ, ಸ್ವಲ್ಪ ಅವಕಾಶವನ್ನು ಕೊಟ್ಟು, ಮೈತ್ರಿಯನ್ನೆ ಉಳಿಸಿಕೊಳ್ಳಲೆತ್ನಿಸುವುದು ಮೇಲಾದ ವಿಜಯವಾಗಿದೆ. ಆದ್ದರಿಂದ ಸದ್ಯ ಶಾಂತರಾಗಿರಿ!"

ಮಹಾತ್ಮರ ಈ ಶಾಂತವಾಣಿ ಊರು ಪೂರಾ ಪ್ರತಿಧ್ವನಿತವಾಗು ತ್ತಿತ್ತು ಹೋರಾಟವು ಅಲ್ಲಲ್ಲಿ ನಿಲ್ಲಲಾರಂಭವಾಗುತ್ತಿತ್ತು. ಅಲ್ಲಲ್ಲಿ ಮುಖಂಡೋಪ ಮುಖಂಡರು ಮಹಾತ್ಮರ ಆಜ್ಞೆಗೆ ತಲೆವಾಗಿ, ಪ್ರಜೆ ಗಳನ್ನು ಶಾಂತಗೊಳಿಸಲಾರಂಭ ಮಾಡಿದರು

ಆದರೂ ಒಮ್ಮೆಗೇ ಪೂರಾ ನಿಂತುಹೋಗಲಿಲ್ಲ. ಅಲ್ಲಲ್ಲಿ ಸಣ್ಣ ಸಣ್ಣ ರಗಳೆಗಳು ಏಳುತ್ತಲೇ ಇದ್ದುವು ಸರಕಾರದವರು "ಗೂಂಡಾ" ಗಳನ್ನು ಹುಡುಕಿ ಹುಡುಕಿ ಹಿಡಿದು ಹಿಡಿದು ಹಾಕುತ್ತಲೇ ಇದ್ದರು.

————

## ೪೨

ಮಹಾತ್ಮರ ಶಾಂತಿವಾಣಿ ಹೊರಟಾಗ ಶೀನೂ ಗೋಪಾಲರು ಅನಂತಪುರದಲ್ಲಿದ್ದರು. ಮಹಾತ್ಮರ ಆಜ್ಞೆಯಾಗತ್ತಲೇ ಗೋಪಾಲನೂ ಶಾಂತನಾದನು ಇನ್ನು ಸೀದಾ ಮದರಾಸಿಗೆ ಹೋಗಿ ಗೌರೀ-ಸುಂದರಿ ಯರನ್ನು ಕಂಡು, ಮುಂದಿನ ಕಾರ್ಯವನ್ನು ನಿರ್ಧರಿಸೋಣವೆಂದು, ಅವರಿಬ್ಬರೂ ಯೋಚಿಸಿಕೊಂಡರು.

ಶೀನೂ ಗೋಪಾಲರು ದೇಶೀಯ ದಳಪತಿಗಳೆಂದು ತಿಳಿದು ಬರು ತ್ತಲೇ, ಅನಂತಪುರದ ಕಾಂಗ್ರೆಸ್ ನಾಯಕರು, ಅವರನ್ನು ತುಂಬಾ ಗೌರವಾದರಗಳಿಂದ ಸ್ವಾಗತಿಸಿದ್ದರು. ಅಲ್ಲಿಯ ನಾಯಕರ ಸಹಾಯ ವಿಲ್ಲದಿರುತ್ತಿದ್ದರೆ, ಗೋಪಾಲನು ಬದುಕುವುದೇ ಕಷ್ಟವಾಗಿತ್ತು.

ವಿಪ್ಲವಕಾರರು ಅಲ್ಲಿಯ ಪೋಲೀಸು ಸ್ಟೇಶನ್ನನ್ನು ಆಕ್ರಮಿಸುತ್ತಿ ದ್ದಾಗ, ಗೋಪಾಲನೂ ಅದರಲ್ಲಿ ಮುಖ್ಯ ಪಾತ್ರವನ್ನು ವಹಿಸಿದ್ದನು. ಅಲ್ಲಿ ಪೋಲೀಸರಿಗೂ ದೇಶೀಯ ವೀರರಿಗೂ ಕೈಕೈ ಕಲೆತಿತ್ತು. ಪೋಲೀ ಸರು ಒಮ್ಮೆಗೇ ಗುಂಡು ಹಾರಿಸಲಾರಂಭಿಸಿಬಿಟ್ಟರು. ಒಂದು ಗುಂಡು ಗೋಪಾಲನ ತೋಳಿನೆಡೆಯಲ್ಲಿ ತೂರಿತ್ತು. ಅದರ ವೇದನೆಯೊಂದಿಗೇ ಆತನು ತಪ್ಪಿಸಿಕೊಂಡಿದ್ದನು. ನಾಯಕರು ಅವನನ್ನು ತಮ್ಮ ಮನೆಯಲ್ಲಿ

ಅಡಗಿಸಿಟ್ಟು, ರಹಸ್ಯವಾಗಿ ಚಿಕಿತ್ಸೆ ಮಾಡಿಸಿ ಗುಣಪಡಿಸಿದ್ದರು. ಎಂಟು ದಿನ ಆತನು ಅವರ ಮನೆಯೊಳಗೇ ಮಲಗಿದ್ದನು.

ಆ ಸಮಯದಲ್ಲಿ ಆ ಮನೆಯೊಳಗೆ ಒಬ್ಬ "ಗೂಂಡಾ" ಇರುವುದಾಗಿ, ಒಬ್ಬ ಸಿ ಐ ಡಿ ಗೆ ಸಂದೇಹವಾಗಿತ್ತು. ಹೊರಗೆ ಬೀದಿಯ ಬದಿಯಲ್ಲಿ ಮರದ ಬುಡದಲ್ಲಿ ತಂಗಿರುವ ಆ ಸಂನ್ಯಾಸಿಗೂ, ಇದಿರಿನ ಮನೆಯೊಳಗೆ ಅಡಗಿರುವ ಯಾವುದೋ ಒಂದು ವ್ಯಕ್ತಿಗೂ ಸಂಬಂಧವಿರವುದಾಗಿ ಆ ಸಿ ಐ ಡಿ ಗೆ ಭಾಸವಾಗಿತ್ತು. ಆದರೆ ಆ ಮನೆಯ ಯಜಮಾನನನ್ನೂ, ಶೀನೂ ಸಂನ್ಯಾಸಿಯನ್ನೂ ಮಾತಾಡಿಸಿ ನೋಡಿದಾಗ, ಅವನಿಗೇನೂ ಗುಟ್ಟು ಹೊರಡಲಿಲ್ಲ ಆದರೂ ಸಂದೇಹವು ನಿವಾರಣೆಯಾಗಲಿಲ್ಲ.

ಶೀನುವಿನ ಕಾಲಿನಲ್ಲಿ ಒಂದೆರಡು ಗಾಯಗಳಿದ್ದುವು ಅವು ಲಾಠೀ ಏಟಿನ ಗಾಯಗಳಂತಿದ್ದುವು. ಹಿಂದಿನ ಊರಿನಲ್ಲಿ ಶೀನೂ-ಗೋಪಾಲರು ಜನರನ್ನು ಸೇರಿಸಿ, ತಂತೀ ಕಂಬಗಳನ್ನು ಕೀಳಿಸುತ್ತಿದ್ದಾಗ, ಅಕಸ್ಮಾತ್ ಪೋಲೀಸ್ ವ್ಯಾನುಗಳು ಅಲ್ಲಿಗೆ ಬಂದು, ಪೋಲೀಸರು ಲಾಠೀ ಚಾರ್ಜು ಮಾಡಿದ್ದರು. ಆಗ ಶೀನು ಹತ್ತು ಸಮುಸ್ತರೊಂದಿಗೆ ತಾನೂ ಒಬ್ಬನಂತೆ ಕಾಣುತ್ತಿದ್ದನೇ ಹೊರತು. ಸಂನ್ಯಾಸಿ ವೇಷದಲ್ಲಿರಲಿಲ್ಲ ಲಾಠಿಯ ಏಟೆರಡು ಅವನ ಕಾಲಿಗೂ ಬಿದ್ದುವು ಅಲ್ಲಿಂದ ಗೋಪಾಲನೂ ಅವನೂ ತಪ್ಪಿಸಿಕೊಂಡರು; ಶೀನು ಮತ್ತೆ ಸಂನ್ಯಾಸಿ ವೇಷ ಹಾಕಿಕೊಂಡನು. ಹೀಗೆ ಅವರು ಅನಂತಪುರಕ್ಕೆ ಬಂದಿದ್ದರು.

ಅನಂತಪುರದಲ್ಲಿ ಆ ಸಿ. ಐ ಡಿ ಯಿಂದ ಅವರಿಗೇನೂ ಕೆಡುಕಾಗಲಿಲ್ಲ. ಇಬ್ಬರೂ ಅಲ್ಲಿಂದ ಬಸ್ಸು ಹತ್ತಿ ತಿರುಪತಿಗೆ ಹೊರಟರು ಆಗ ಶೀನು ಸನ್ಯಾಸಿಯಾಗಿ ಕಾಣಿಸುತ್ತಿರಲಿಲ್ಲ ತಲೆಗೊಂದು ಮುಂಡಾಸು; ಮೈಗೊಂದು ಜಿಬ್ಬಾ, ಕಚ್ಚೆಹಾಕಿ ಉಟ್ಟ ಒಂದು ಮೊರಟು ಪಂಚೆ, ಹೀಗಿತ್ತು ಅವನ ವೇಷ

ಬಸ್ಸಿನಲ್ಲಿ ಅವರ ಜತೆಯಲ್ಲಿದ್ದವರೊಂದಿಗೆ ಒಬ್ಬ ಸಿ ಐ ಡಿ ಯೂ ಇದ್ದ. ಅವನು ಈ ಮೊದಲು ಸಂನ್ಯಾಸಿ ಶೀನುವನ್ನು ಮಾತಾಡಿಸಿದವನಾಗಿರಲಿಲ್ಲ; ಆದರೆ ಅವನಿಂದಲೇ ಪ್ರೇರಿತನಾದ ಇನ್ನೊಬ್ಬನು. ಅವನು ಹಳ್ಳಿಯ ಕುರುಬನ ಹಾಗೆ ವೇಷಹಾಕಿಕೊಂಡು ಶೀನೂ ಗೋಪಾಲರ

ಪಕ್ಕದಲ್ಲೇ ಕುಳಿತಿದ್ದ. ಅವನೂ ತಿರುಪತಿಗೆ ಹೋಗುವನಂತೆ. ಅಲ್ಲಿ ಅವನಿಗೆ ಒಂದೂ ಪರಿಚಯವಿಲ್ಲವಂತೆ ಬಸ್ಸಿನಲ್ಲಿದ್ದವರೆಲ್ಲ ಅವನಿಗೆ ಗೇಲಿಮಾಡಲಾರಂಭಿಸಿದ್ದರು. ಶೀನೂವನ್ನೂ ಅವನು ಬಡ್ಡುಭಾಷೆಯಿಂದ ಅವನು ಮಾತಾಡಿಸಲಾರಂಭಿಸಿದನು ಶೀನು ತಿರುಪತಿಗೆ ಹೋಗುವುದನ್ನು ತಿಳಿದು, "ಶ್ವಾಮಿ! ನನಗೂ ನಿಮ್ಮ ಪುಣ್ಯದಿಂದ ದೇವರ ಧರುಷಣ ಮಾಡಿಸಿಬಿಡೀ! ನನ್ನೊಡನೆ ಚಿಕ್ಕಾಸು ಕೂಡಾ ಇಲ್ಲ. ನಿಮ್ಮ ಜತೇಲೇ ಬರ್ತೇನೆ. ನಂಗೆಲ್ಲಾ ತೋರಿಸಿಬುಡಿ" ಎಂದನು. ಮತ್ತೂ ಆ ಬಸ್ಸಿನಲ್ಲಿರುವ ಬೇರೆಯವರಿಗೂ ಕೈಮುಗಿದು— "ಶಾಮಿ! ನನ್ನೊಡನೆ ಹಿಂದೆ ಬರಲಿಕ್ಕೂ ದುಡ್ಡಿಲ್ಲ ಏನಾರೂ ಸಾಯಮಾಡಿ" ಎಂದು ಕೈಬೇಡಿದನು ಒಬ್ಬಿಬ್ಬರು ಎರಡಾಣೆ ನಾಲ್ಕಾಣೆಗಳನ್ನು ಅವನಿಗೆ ಕೊಟ್ಟರು. ಹಳ್ಳಿಯ ಗೌಡನಂತೆ ಕುಳಿತಿದ್ದ ಗೋಪಾಲನು ಅವನಿಗೆ ಒಂದು ರೂಪಾಯಿ ಧರ್ಮಮಾಡಿಬಿಟ್ಟನು. ಬಸ್ಸಿನಲ್ಲಿ ಶೀನೂ ಗೋಪಾಲರು ಪರಸ್ಪರ ಸಂಬಂಧವಿಲ್ಲದವರಂತೆಯೇ ನಡೆದುಕೊಂಡಿದ್ದರು.

ತಿರುಪತಿಯ ಮಹಾಛತ್ರದ ರಿಜಿಸ್ಟ್ರಿಯಲ್ಲಿ, ಅಲ್ಲಿ ತಂಗುವವರ ಹೆಸರುಗಳನ್ನು ಬರೆದುಕೊಳ್ಳುವ ವಾಡಿಕೆಯುಂಟು. ಗೋಪಾಲನೇನೋ ಮಾರುಹೆಸರನ್ನು ಕೊಟ್ಟಿದ್ದನು. ಆದರೆ ಶೀನು ದೇವರ ಸಾನ್ನಿಧ್ಯದಲ್ಲಿ ಸುಳ್ಳು ಹೆಸರನ್ನು ಹೇಳುವುದು ನ್ಯಾಯವಲ್ಲವೆಂದು ಭಾವಿಸಿ ತನ್ನ ಸತ್ಯವಾದ ಹೆಸರನ್ನೆ "ಶೀನು" ಎಂದು ಸ್ವಲ್ಪ ಮಾರ್ಪಡಿಸಿ ಹೇಳಿದ್ದ. ಆಗ ಆ ಸಿ ಐ ಡಿ ಹಳ್ಳಿಯ ಕುರುಬನಂತೆ ಶೀನುವಿನ ಬಳಿಯಲ್ಲೇ ಇದ್ದನು. ಅವನ ನೋಟುಬುಕ್ಕಿನಲ್ಲಿ, ಬಳ್ಳಾರಿ ಜೈಲಿನಿಂದ ರೈಲಿನಲ್ಲಿ ಸಾಗಿಸುವಾಗ, ರೈಲು ನಿಲ್ಲಿಸಲ್ಪಟ್ಟು ಪಾರಾಗಿಸಲ್ಪಟ್ಟ ರಾಜಕೀಯ ಖೈದಿಯ ಹೆಸರು ಕೆ. ಶ್ರೀನಿವಾಸರಾವ್ ಎಂದು ಅದರಲ್ಲಿ ಗುರುತಿಸಿತ್ತು. ಆತನನ್ನು ಹಾಗೆ ಪಾರಾಗಿಸಿದವರು "ಗೂಂಡಾ"ಗಳೆಂದೂ, ಆದುದರಿಂದ ಆ ಖೈದಿಯೂ ಒಬ್ಬ "ಗೂಂಡಾ"ನೇ ಸರಿಯೆಂದೂ, ಅನಂತರ ನಡೆದ ಸಂಭವಗಳಿಂದ ತೀರ್ಮಾನಿಸಲಾಗಿತ್ತು.

ಅನಂತರ ಆ ಸಿ ಐ. ಡಿ. ಯಾರೋ ಇನ್ನೊಬ್ಬರ ಸ್ನೇಹಮಾಡಿಕೊಳ್ಳುವವನಂತೆ ಶೀನೂ—ಗೋಪಾಲರನ್ನಗಲಿ, ತಂತೀ ಆಫೀಸಿಗೆ ಹೋದನು. ಶೀನೂ— ಗೋಪಾಲರು ತಿರುಪತಿ ಬೆಟ್ಟವೇರಿ, ದೇವರ

ದಿವ್ಯ ದರ್ಶನವನ್ನಾಡಿಕೊಂಡು, ಹಿಂದಿರುಗುವಾಗಲೂ, ಎರಡು ಮೂರು ಬಾರಿ ಆ ಕುರುಬನು ಅವರ ಕಣ್ಣಿಗೆ ಬಿದ್ದನು

ಬೆಟ್ಟದಿಂದ ಹಿಂದಿರುಗುವಾಗ, ದೇವರದರ್ಶನದ ಹರಕೆಯ ವಾಡಿಕೆಯಂತೆ ಗೋಪಾಲನೂ ತಲೆಬೋಳಿಸಿಕೊಂಡಿದ್ದನು. ದಿವ್ಯ-ದರ್ಶನದಿಂದ ಮನೋನ್ನೈರ್ಮಲ್ಯವನ್ನು ಹೊಂದಿದ ಅವರಿಬ್ಬರೂ, ತಿರುಪತಿಯಿಂದ ಬಸ್ಸಿನಲ್ಲಿಯೇ ಮದರಾಸಿಗೆ ಹೊರಟರು. ಇವರು ಹೀಗೆ ಮದರಾಸಿಗೆ ಹೊರಟುದನ್ನು ನೋಡಿದ ಆ ಸಿ. ಐ ಡಿ ಮತ್ತೆ ತಂತೀ ಆಫೀಸಿಗೆ ಹೋಗಿ ಮದರಾಸಿಗೂ ಏನೋ ತಂತಿಕೊಟ್ಟು ಇಟ್ಟುಬಿಟ್ಟನು !

ಮದರಾಸಿನ 'ಮಿಂಟ್' ಬಸ್ ಸ್ಟ್ಯಾಂಡಿನಲ್ಲಿ ತಿರುಪತಿಯ ಬಸ್ಸು ಬಂದು ನಿಂತಾಗ ಸಾಯಂಕಾಲವಾಗಿ ಹೋಗಿತ್ತು. ವಿದ್ಯುದ್ದೀಪಗಳಿಂದ ಜಗಜ್ಜಗಾಯಮಾನವಾಗಿ ಬೆಳಗಬೇಕಾಗಿದ್ದ ಮದರಾಸು ನಗರವು 'ಬ್ಲ್ಯಾಕ್‌ಔಟ್'ನಿಂದಾಗಿ ಕತ್ತಲೆ ಬೆಳಕುಗಳ ಮರೆಯಲ್ಲಿ ಮಸಕಾಗಿ ಕಾಣುತ್ತಿತ್ತು. ಶೀನೂ ಗೋಪಾಲರು ಏರಿಬಂದ ಬಸ್ಸಿನಿಂದ ಸುಮಾರು ಇಪ್ಪತ್ತುಮಂದಿ ಪ್ಯಾಸೆಂಜರರು ಕೆಳಗಿಳಿದರು.

ಕೂಡಲೇ ಒಬ್ಬರು ಪೋಲೀಸ್ ಇನ್ಸ್‌ಪೆಕ್ಟರರೂ, ನಾಲ್ವರು ಪೋಲೀಸರೂ ಮುಂದೆ ಬಂದು ಆ ಬಸ್ಸಿನಿಂದಿಳಿದವರು ಮುಂದೆ ಹೋಗದಂತೆ ತಡೆದರು.

---

## ೪೩

ಪೋಲೀಸ್ ಇಸ್ಸ್‌ಪೆಕ್ಟರು— "ಬಸ್ಸಿನಲ್ಲಿಳಿದವರೆಲ್ಲ ಹಾಗೆ ನಿಲ್ಲಿ!" ಎಂದು ಆಜ್ಞಾಪಿಸಿದರು. ಇದು ಎಲ್ಲರಿಗೂ ಒಂದು ಆಕಸ್ಮಾತ್ ಭಯಸಂಚಾರವಾದಂತಾಯಿತು ಎಲ್ಲರೂ ತಟಸ್ಥರಾಗಿ ನಿಂತರು.

"ಯಾಕೆ ? ಯಾಕೆ ? " ಎಂಬ ಪ್ರಶ್ನೆ ಕೆಲವರ ಬಾಯಿಯಿಂದ ಹೊರಟವು. "ಯಾಕೆ?" ಎಂಬ ಪ್ರಶ್ನೆ ಗೋಪಾಲನ ಬಾಯಿಯಿಂದ ಗಟ್ಟಿಯಾಗಿ ಹೊರಟಿತು.

ತಟ್ಟನೆ ಪೋಲೀಸರ ಉತ್ತರವೇನೂ ಬಾರದಿರಲು, ಗೋಪಾಲನು ಏರ್ವಟ್ಟದ ದನಿಯಲ್ಲಿ— "ಯಾಕಯ್ಯಾ ನಿಲ್ಲಿಸುವಿರಿ ನಮ್ಮನ್ನು ? ಈ ಬಸ್ಸಿನಲ್ಲಿ ನಜ್ಜುಗುಜ್ಜಾಗಿ ಬಂದ ಶ್ರಮದಿಂದ ನಾವೆಲ್ಲಾ ಕಷ್ಟಬಟ್ಟಿರುವಾಗ, ಸುಮ್ಮನೇ ನಿಲ್ಲಬೇಕೆಂದರೆ ನಾವೇನೂ ಮಿಲ್ಟ್ರೀಜವಾನರೆ ?" ಎಂದನು ಅಚ್ಚ ತಮಿಳು ಭಾಷೆಯಲ್ಲಿ !

"ಅಲ್ಲವೆ ? ಅಲ್ಲವೆ ?" ಎಂದು ಹಲವರ ಸ್ವರವು ಅವನ ಸವಾಲನ್ನು ಘೋಷಣೆ ಮಾಡಿದುವು.

"ಯಾರಯ್ಯ ಅದು ಅಧಿಕಪ್ರಸಂಗಿ?"— ಇನ್ಸ್‌ಪೆಕ್ಟರು ಗೋಪಾಲನ ಮುಖಕ್ಕೆ ಟಾರ್ಚ್ ದೀಪವನ್ನು ಹಾಕಿದರು.

ಆಗ ಶೀನು ಶಾಂತ ಸ್ವರದಿಂದ— "ಇನ್ಸ್‌ಪೆಕ್ಟರ್ ಸಾಹೇಬರೆ! ಸ್ವಲ್ಪ ಶಾಂತರಾಗಿ ನಮ್ಮನ್ನೆಲ್ಲಾ ನಿಲ್ಲಿಸಿದ ಕಾರಣವನ್ನು ಬೇಗನೇ ತಿಳಿಸಿರಿ. ನಮ್ಮಲ್ಲಿ ಯಾರಾದರೂ ಅಪರಾಧಿಗಳಿರುವರೆ?"

"ಬೇಗನೇ ತಿಳಿಸಬೇಕೆ ನಿನಗೆ ? ನೀನಾರ್ರೆಯ ಅಷ್ಟು ದೊಡ್ಡ ಮನುಷ್ಯ?"— ಎಂದು ನುಡಿದು ಇನ್ಸ್‌ಪೆಕ್ಟರು ಶೀನುವಿನ ಮುಖಕ್ಕೂ ಟಾರ್ಚ್ ಹೊಡೆದು,— "ಎಲ್ಲಿ ಕಳಚಯ್ಯ ನಿನ್ನ ತಲೆಯಲ್ಲಿರುವ ಮುಂಡಾಸು !"

ಹಾಗೆಯೇ ಇನ್ಸ್‌ಪೆಕ್ಟರು ಎಲ್ಲರಮೇಲೆಯೂ ಟಾರ್ಚ್ ಹೊಡೆದು, ಆರೇಳು ಮಂದಿಯ ಮುಂಡಾಸುಗಳನ್ನು ನೋಡಿ,— "ಹುಂ, ಮುಂಡಾಸಿನವರೆಲ್ಲ ಮುಂಡಾಸು ತೆಗೆಯಿರಿ!" ಎಂದು ಆಜ್ಞಾಧೋರಣೆಯಲ್ಲಿ ಗುಡುಗಿದರು

ಮುಂಡಾಸಿನವನೇ ಆದ ಗೋಪಾಲನು— "ಎಲೆಲ ! ಹೆಸರೇನೆಂದರೆ ಮುಂಡಾಸು ಮೂವತ್ತುಮೊಳ ಅಂದ ಹಾಗೆ, ಕಾರಣ ಕೇಳಿದರೆ ಮುಂಡಾಸು ತೆಗೆಯಬೇಕೆ ? ನೀವೇನು ದೇವರೇ ನಾವು ಮುಂಡಾಸು ಕಳಚಿ ನಿಲ್ಲಲಿಕ್ಕೆ?" ಎಂದನು.

ಎಲ್ಲರಿಗೂ ಸ್ವಾಭಿಮಾನವನ್ನು ಮುಗುಚಿಕೊಟ್ಟ ಹಾಗಾಯಿತು ಅವನ ಮಾತು. ಪೋಲೀಸಾಜ್ಞೆಯಾಗುತ್ತಲೇ ಮುಂಡಾಸು ಬಿಚ್ಚಲು ಸಿದ್ಧರಾದ ಕೆಲವರು, ಗೋಪಾಲನ ಮಾತು ಕೇಳಿ ನಾಚಿ ಹಾಗೆಯೇ

ನಿಂತುಬಿಟ್ಟರು. ಗೋಪಾಲನು ಜನರನ್ನು ನೋಡಿ— “ ನೋಡಿದಿರಾ ಗೆಳೆಯರೆ! ಅನಾವಶ್ಯಕವಾಗಿ ಹೀಗೆ ಅಪಮಾನಮಾಡಬೇಕೇ ನಮ್ಮನ್ನು? ನಮ್ಮ ಹಾಗೆಯೇ ಈ ಪೋಲೀಸರೂ ಮನುಷ್ಯರಲ್ಲವೆ? ಇದು ತಿರುಪತಿಯಿಂದ ಬರುವ ಬಸ್ಸು; ದೇವರ ಹರಕೆಯಿಂದ ಮುಂಡನ ಮಾಡಿದ ತಲೆಯವರಿರಬಹುದು ಅದನ್ನು ನೋಡಿ ಗೇಲಿಗೀಡುಮಾಡಬೇಕೆಂಬ ಕುತೂಹಲವೇನೋ ಈ ಪೋಲೀಸರಿಗೆ! ”

“ಏಯ್! ಗೌಡಾ! ಬಾಯಿ ಮುಚ್ಚಯ್ಯ! ನೀವೇನು ಮುಂಡಾಸು ಕಳಚುವಿರಾ, ನಾವೇ ಹಾರಿಸಬೇಕೋ? ” ಎಂದು ಇನ್ಸ್ಪೆಕ್ಟರು ಗರ್ಜಿಸಿದರು

“ದೇವರ ಇದಿರಿನಲ್ಲಿಯೇ ಮುಂಡಾಸು ತೆಗೆದೇವಲ್ಲದೆ, ನಿಮ್ಮಿದಿರಿನಲ್ಲಿ ತೆಗೆಯಲಾರೆವು! ನಿಮಗೂ ನಮ್ಮ ಮುಂಡಾಸಿಗೂ ಸಂಬಂಧವೇನಯ್ಯಾ? ” ಎಂದನು ಏರ್ದನಿಯಲ್ಲಿ ಶೀನು.

“ಈಗ ಮುಂಡಾಸು ತೆಗೆಯುವುದು ಹೇಡಿತನ! ಯಾರೂ ತೆಗೆಯಬೇಡಿ!” ಎಂದು ಗಂಭೀರ ಧ್ವನಿಯಿಂದ ಕೂಗಿದನು ಗೋಪಾಲ.

ಅವರಿಬ್ಬರ ಧೀರವಾಣಿಯನ್ನು ಕೇಳಿ ಪೋಲೀಸರು ಮುಂದಡಿಯಿಡಲು ಶಂಕಿಸುತ್ತಿದ್ದರು

ಮದರಾಸು ಪಟ್ಟಣದಲ್ಲಿ ವಿಪರೀತ ಜನಸಂಖ್ಯೆಯಲ್ಲವೆ? ಇಷ್ಟೊಂದು ವೇಳೆಯೊಳಗೆ ಅಲ್ಲಿ ಜನರು ಗಿಜಗಿಜನೆ ಗುಂಪುಗೂಡಲಾರಂಭಿಸಿದರು.

ಇಬ್ಬರು ಪೋಲೀಸರು ಆ ಗುಂಪಿನ ಕಡೆಗೆ ತಿರುಗಿ— “ ನಿಮಗೆಲ್ಲ ಇಲ್ಲೇನು ಕೆಲಸ? ನಡೆಯಿರಾಚೆ! ” ಎಂದು ತಮ್ಮ ಲಾಠಿಯನ್ನೆತ್ತಿ ಹೀಗೂ ಹಾಗೂ ಬೀಸಿ ಹೇಳಿದನು

ಚದುರುವವರನ್ನು ನೋಡಿ ಧೀರನಾದ ಗೋಪಾಲನು ಗಟ್ಟಿಯಾಗಿ— “ನೋಡಿದಿರಾ! ನೋಡಿದಿರಾ! ಬಸ್ಸಿನಲ್ಲಿ ಬಂದಿಳಿದ ಜನರನ್ನು ವೃಥಾ ಅಡ್ಡಗಟ್ಟಿ ನಿಂತವರೂ ಪೋಲೀಸರು; ಜನರು ಗುಂಪುಗೂಡುವಂತೆ ಮಾಡುವವರೂ ಪೋಲೀಸರು; ಆ ಗುಂಪಿನ ಮೇಲೆ ತಮ್ಮ ಲಾಠೀ ಕರಾಮತಿಯನ್ನು ತೋರಿಸುವವರೂ ಪೋಲೀಸರು!” ಎಂದು ಕೂಗಿದನು.

“ತೀರ ಅನ್ಯಾಯ! ತೀರ ಅನ್ಯಾಯ!” ಎಂದು ಶೀನು ಕೂಗಿದನು

“ಎಲ್ಲಾ ರಗಳೆಯನ್ನೂ ಪೋಲೀಸರೇ ಬೇಕೆಂತ ಹುಟ್ಟಿಸುತ್ತಾರೆ!” ಎಂದು ಯಾರೋ ಒಬ್ಬ ಕೂಗಿದ.

ಕೂಡಲೇ ಪೋಲೀಸ್ ಇನ್ಸ್‌ಪೆಕ್ಟರು ಬದಿಯಲ್ಲಿದ್ದ ಪೋಲೀಸನಿಗೆ— “ಏ! ನೋಡುತ್ತಿಯೇನೋ ಗೂಗೇ ಹಾಗೆ! ಎಲ್ಲರ ಮುಂಡಾಸನ್ನೂ ಹಾರಿಸು! ತೋಳಿನಲ್ಲಿಯೂ, ಕಾಲಿನಲ್ಲಿಯೂ ಗಾಯಗಳಿರುವ ಎರಡು ಬೋಳು ಮಂಡೆಗಳನ್ನು ಖೈದು ಮಾಡು!” ಎಂದು ಅಣತಿಯಿತ್ತರು.

“ಏನು! ಏನು! ಅನ್ಯಾಯವಾಗಿ ನಮ್ಮೆಲ್ಲರ ಅಂಗ ಝಡತಿಯೆ?” ಎಂದು ಬನ್ನಿನಲ್ಲಿ ಬಂದೊಬ್ಬ ಧನಿಕ ಗೃಹಸ್ಥನು ಕೂಗಿ ಹೇಳಿದನು

ಗೋಪಾಲನು ತನ್ನೆದಿರು ನಿಂತ ಪೋಲೀಸನ ಎದೆ ನಡುಗುವಂತೆ ಉಚ್ಚಕಂಠದಿಂದ— “ಅಹಾ! ಈ ಪೋಲೀಸರ ಅನ್ಯಾಯಕ್ಕೆ ಇತಿಮಿತಿಯೇ ಇಲ್ಲ! ಇವರ ದುರಹಂಕಾರದಿಂದಲೇ ಈ ಇಂಡಿಯಾ ದೇಶದ ಗತಿ ಹೀಗಾಯಿತು! ಮಹಾತ್ಮರ ಶಾಂತಿವಾಕ್ಯವನ್ನು ಚೆನ್ನಾಗಿ ಕಲಿಯಬೇಕಾದವರು ಈ ಪೋಲೀಸರೇ!”

ಒಡನೆಯೇ ಶೀನುವೆಂದ “ಹೌದು! ಹೌದು! ಈ ಪೋಲೀಸರು ವ್ಯರ್ಥವಾಗಿ ಜಗಳ ಕೆದರಿ, ಜನರ ಗುಂಪುಗೂಡಿಸಿ, ಮತ್ತೆ ಮೃಗಗಳನ್ನು ಓಡಿಸುವಂತೆ ಅವರನ್ನು ಓಡಿಸುತ್ತಾರಲ್ಲ! ಅದಕ್ಕೆ ಇದೇ ಸಾಕ್ಷಿ ಸಾಕಲ್ಲ!”

ಪೋಲೀಸರು ಗೋಪಾಲನ ಮುಂಡಾಸಿನ ಕಡೆಗೆ ಕೈ ಚಾಚಿದರು.

“ನನ್ನ ಜೀವ ಹೋದರೂ ಮುಂಡಾಸು ತೆಗೆಯಲು ಬಿಡಲಿಕ್ಕಿಲ್ಲ!” ಎಂದೆಂದು ಗೋಪಾಲ ಹಿಂದಕ್ಕೆ ಹಾರಿದನು.

“ಜನರೆಲ್ಲಾ ಹೆದರಿದ ನಾಯಿಯಂತೆ ಮುದುಡಿಕೊಳ್ಳುವುದರಿಂದಲೇ ಈ ಪೋಲೀಸರು ಇಷ್ಟು ಜೋರು ಮಾಡುತ್ತಾರೆ! ಏನಯ್ಯಾ! ಅನ್ಯಾಯವಾಗಿ ನಿಮ್ಮ ಅಂಗ ಝಡತೀ ಮಾಡುವಾಗ ನೀವು ಹೇಗಯ್ಯಾ ಸಹಿಸುತ್ತೀರಿ?” ಎಂದು ಶೀನು ಸುತ್ತೂ ನಿಂತವರನ್ನು ಕುರಿತು ಗರ್ಜಿಸಿ ಕೇಳಿದನು.

ಮುಂಬಾಯ್ದು ರಟ್ಟೆಹಿಡಿದ ಪೋಲೀಸನನ್ನು ಗೋಪಾಲನು ಪೈಕು ಲುಕಿ ತಳ್ಳುತ್ತ— "ಮಹಾತ್ಮಾ ಗಾಂಧೀ ಕೀ ಜೈ!" ವೀರ ಭಾರತ ಮಾತಾ ಕೀ ಜೈ!" ಎಂದು ಮಹಾಬಲದಾಯೀ ಗರ್ಜನೆಯನ್ನುಗೈದನು.

ಕೂಡಲೇ ಆ ಗುಂಪಿನಲ್ಲಿ "ಜೈ! ಜೈ!" ಎಂದ ಗರ್ಜನೆ ಮಾರ್ಮೊಳಗಿತು ಪೋಲೀಸರು ಹೆದರಿ ಬೆಪ್ಪಾದರು. ಮೇಲೆ ಮೇಲೆ ಜನರು ಗುಂಪುಗೂಡುತ್ತಲೇ ಇದ್ದರು

ಇನ್ಸ್ಪೆಕ್ಟರು— "ಇಬ್ಬರು ಇಲ್ಲೇ ನಿಂತು ಈ ವಂಡಾಸಿನವರನ್ನು ಕಾಯಿರಿ ಉಳಿದವರು ಗುಂಪನ್ನು ಚದರಿಸಿರಿ" ಎಂದು ಆಜ್ಞೆ ಮಾಡಿದರು

"ನಾವಿಲ್ಲಿ ಎಷ್ಟು ಹೊತ್ತು ನಿಂತಿರಬೇಕು? ಅಯ್ಯಾ! ಬಸ್ಸಿನಲ್ಲಿ ಬಂದ ನನ್ನ ಸಹೋದರರೆ! ನಡೆಯಿರಿ ನೋಡುವಾ ನಿಮ್ಮ ಸಿಮ್ಮ ಪಾಡಿಗೆ! ಮಹಾತ್ಮಾ ಗಾಂಧೀ ಕೀ ಜೈ!— ಎನ್ನುತ್ತಾ ನಡೆಯಿರಿ ಮುಂದೆ! ಈ ನಾಲ್ಕಾರುಮಂದಿ ಪೋಲೀಸರಿಗಂಜಿ ನಿಂತಿರುವುದೇಕೆ? ನಡೆಯಿರಯ್ಯಾ!" ಎನ್ನುತ್ತಾ ಮುಂದಕ್ಕೆ ಹಾರಿದನು.

"ಹುಂ, ನಡೆಯಿರಿ ಸಹೋದರರೇ ನಡೆಯಿರಿ!" ಎನ್ನುತ್ತಾ ಶೀನುವೂ ಗೋಪಾಲನ ಹಿಂದೆಯೇ ನಡೆದನು.

ಪೋಲೀಸರನ್ನು ದೂಡಿಕೊಂಡು ಉಳಿದವರೂ ಹಾಗೆಯೇ ನುಗ್ಗಿ ನುಗ್ಗಿ ನಡೆದರು.

ಪೋಲೀಸರು ಜಿಗಿಲೂದುತ್ತಾ, ಓಡಿದವರನ್ನು ಹಿಡಿಯಲೆತ್ನಿಸಿದರು. ಆರೆಂಟು ಮಂದಿ ಹೊಸ ಪೋಲೀಸರೂ ಓಡೋಡಿ ಬಂದು ಕೂಡಿದರು. ಕೆಲವರು ಲಾಠೀ ಪೆಟ್ಟನ್ನು ತಿಂದುಕೊಂಡೂ ತಪ್ಪಿಸಿಕೊಂಡೂ ಓಡಿದರು.

'ಬ್ಲ್ಯಾಕ್‌ಔಟ್' ಕತ್ತಲೆ ಬೆಳಕು ನೆರಳುಗಳ ಕಾಟದಿಂದ ಎಲ್ಲಿ ಯಾರಿಗೆ ಏನಾಯಿತೆಂದು ಒಂದೂ ಸರಿಯಾಗಿ ಗೊತ್ತಾಗಲಿಲ್ಲ "ಬಸ್‌ಸ್ಟ್ಯಾಂಡಿನಲ್ಲಿ ಏನೋ ಹಾವಳಿ!" ಎಂಬ ಸುದ್ದಿ ಕಾಡುಗಿಚ್ಚಿನಂತೆ ಹಬ್ಬಿಬಿಟ್ಟಿತ್ತು. ಜನರೆಲ್ಲ ಪೋಲೀಸರ ಮೇಲೆ ಮುಗಿಬೀಳಲಾರಂಭಿಸಿದ್ದರು.

ಹೀಗೆ ತಪ್ಪಿಸಿಕೊಂಡ ಅನುಭವವು ಶೀನೂ–ಗೋಪಾಲರಿಗೇನೂ ಹೊಸದಲ್ಲ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿದ ಅವರಿಗೆ ಇಂತಹ

ಗಂಡಾಂತರಗಳೆಷ್ಟೋ ಬಂದಿದ್ದುವು. ದೈವ ಸಹಾಯದಿಂದ ಹೇಗೆಯೋ ಲೀಲಾಜಾಲವಾಗಿ ಅವುಗಳಿಂದ ಪಾರಾಗಿದ್ದರು.

ಅವರಿಬ್ಬರೂ ಕೈ ಕೈ ಹಿಡಿದುಕೊಂಡೇ ವೇಗವಾದ ನಡೆಯಿಂದ ಕಾಲೊಯ್ದತ್ತ ಸಾಗಿಬಿಟ್ಟರು. ಸಂದುಗೊಂದಿಗಳಲ್ಲೆಲ್ಲ ಸುತ್ತಿ ಹೋದರು. ಓಡುತ್ತಾ ಹೋದರೆ ಸಂದೇಹವಾದೀತೆಂದುಕೊಂಡು ನಡೆಯುತ್ತಲೇ ಹೋದರು. ಅವರ ಹಿಂದೆಯೇ ಪೋಲೀಸನೊಬ್ಬನು ಅನುಸರಿಸಿಕೊಂಡೇ ಬರುತ್ತಿರುವಂತೆ ಭಾಸವಾಗುತ್ತಿತ್ತು. ಮತ್ತೆ ಅದು ಬರಿಯ ಭಾಸಮಾತ್ರವೆಂದೂ, ಸತ್ಯವಲ್ಲವೆಂದೂ ತೋರಿತು. ಇಬ್ಬರೂ ಬಹುದೂರ ನಡೆದು ನಡೆದು ಒಂದು ಸೋಡಾ ಅಂಗಡಿಯ ಮುಂದೆ ತುಸು ನಿಂತರು.

ಅಲ್ಲಿ ಒಬ್ಬೊಬ್ಬರೂ ನಾಲ್ಕು ಬಾಳೆಹಣ್ಣುಗಳನ್ನು ಕೊಂಡುಕೊಂಡು ತಿಂದರು; ಒಂದೊಂದು 'ಲೆಮನ್‌ಕ್ರಶ್ಯಸ್ಸ್' ಕುಡಿದು ದಾಹಶಾಂತಿಮಾಡಿಕೊಂಡರು.

ಇಬ್ಬರಿಗೂ ಮದರಾಸು ಹೊಸತು. ಅದು ಯಾವ ಬೀದಿ ಯಾವ ಸ್ಥಳ ಎಂಬುದೊಂದೂ ಅವರಿಗೆ ತಿಳಿಯದು.

"ತಾಂಬರಂ ಎಲ್ಲಿಗೆ ಹೋಗಬೇಕು; ಅದೆಲ್ಲಿದೆ? ಹೇಗೆ ಹೋಗಬೇಕು?" ಎಂದು ಶೀನು ಆ ಅಂಗಡಿಯವನೊಡನೆ ವಿಚಾರಿಸಿದನು.

ಅವನು ಹೇಳಿದಂತೆಯೇ 'ಪಾರ್ಕ್' ಸ್ಟೇಶನ್ನು ಸಮೀಪದಲ್ಲೇ ಇತ್ತು. ಇಬ್ಬರೂ ಅಲ್ಲಿಗೆ ಹೋಗಿ 'ತಾಂಬರಂ'ಗೆ ಟಿಕೆಟ್ ಪಡೆದು ಎಲೆಕ್ಟ್ರಿಕ್ ರೈಲಿನಲ್ಲಿ ಕುಳಿತರು.

ಅವರ ಬೆನ್ನ ಹಿಂದೆಯೇ ಒಬ್ಬ ಪೋಲೀಸನು ಬರುತ್ತಿದ್ದುದೇನೂ ಸುಳ್ಳಲ್ಲ. ಅವರು ಯಾವ ಸೋಡಾ ಅಂಗಡಿಯ ಮುಂದೆ ಸ್ವಲ್ಪ ನಿಂತಿದ್ದರೋ, ಅದನ್ನು ನೋಡಿ ಅದೇ ಅಂಗಡಿಗೆ ಆ ಪೋಲೀಸನೂ ಬಂದನು. ಅಂಗಡಿಯವನೊಡನೆ ವಿಚಾರಿಸಲಾಗಿ, ತಾಂಬರಂ ಗೆ ಹೋಗುವ ದಾರಿ ಕೇಳಿದರೆಂದು ಗೊತ್ತಾಯಿತು.

ಶೀನೂ ಗೋಪಾಲರು ತಾಂಬರಂ ದಲ್ಲಿ ರೈಲಿನಿಂದಿಳಿಯುವಾಗ, ಪಕ್ಕದ ಕಂಪಾರ್ಟ್‌ಮೆಂಟಿನಿಂದ ಇಬ್ಬರು ಪೋಲೀಸರೂ ಕೆಳಗಿಳಿಯುವುದನ್ನು ನೋಡಿದರು. ಕೂಡಲೇ ಇಬ್ಬರೂ ಮಿಂಚಿನಂತೆ ಸ್ಟೇಶನ್ನಿನ ಹೊರಗೆ ಕತ್ತಲೆಯಲ್ಲಿ ನುಸುಳಿದರು.

"ಇದೇನು ಗೋಪಾಲ! ಈ ಪೋಲೀಸರು ಹೀಗೆ ನಮ್ಮ ಬೆನ್ನು ಹತ್ತಿದರಲ್ಲ! ತಪ್ಪಿಸಿಕೊಳ್ಳುವುದು ಕಷ್ಟವೆಂದು ಕಾಣುತ್ತೆ"— ಶೀನುವೆಂದ.

"ಜನರು ಸೇರಿದಲ್ಲಾದರೆ ಕಷ್ಟವೇನೂ ಇಲ್ಲ. ಇಲ್ಲಿ ಜನಸಂಖ್ಯೆ ತೀರ ಕಡಮೆ. ಮೇಲೆ ರಾತ್ರಿ!"

"ಇಲ್ಲಿ ಮಹಿಳಾಭ್ಯುದಯ ಮಂಡಲಿ ಎಲ್ಲಿಂದೂ ನಮಗೆ ಗೊತ್ತಿಲ್ಲ."

ಆಗ ರಾತ್ರಿ ೧೦॥ ಗಂಟೆಯಾಗಿತ್ತು. ಬೀದಿಯಲ್ಲಿ ಜನರು ಬಲು ವಿರಳವಾಗಿ ಸುಳಿದಾಡುತ್ತಿದ್ದರು. ಇದಿರು ಹಾದುಹೋಗುವ ಒಬ್ಬನನ್ನು ನೋಡಿ ಶೀನು— "ಇಲ್ಲಿ ಮಹಿಳಾಭ್ಯುದಯ ಮಂಡಲಿ ಎಲ್ಲಿ?" ಎಂದು ಕೇಳಿದನು.

"ಮುಂದೆ ಹೋಗಿ ಬಲಕ್ಕೆ ತಿರುಗಿ ಸೀದಾ ಹೋದರೆ ಎದುರೇ ದೊಡ್ಡ ಗೇಟು ಕಾಣುತ್ತದೆ ವಾಚ್‌ಮೇನ್ ಇದ್ದಾನೆ ಅದೆ " ಎಂದು ಉತ್ತರ ಬಂತು.

ಅವರು ಹಾಗೆಯೇ ಮುಂದೆ ಹೋಗಿ ಬಲಕ್ಕೆ ತಿರುಗಿದರು. ಅಲ್ಲಿ ಜನಸಂಚಾರವೇ ನಿಂತು ಹೋಗಿತ್ತು ಆ ಬೀದಿಯಲ್ಲಿ ಸ್ವಲ್ಪ ಮುಂದೆ ಹೋಗುತ್ತಲೇ, ಹಿಂದಿನಿಂದ ಟಾರ್ಚ್ ಲೈಟಿನ ಪ್ರಕಾಶವೊಂದು ಅವರ ಮೇಲೆ ಹಾಯ್ದಿತು. ಅದರೊಂದಿಗೆ "ನಿಲ್ಲಿರಲ್ಲಿ" ಎಂಬ ಗರ್ಜನೆಯೂ ಕೇಳಿಬಂತು.

ಕೂಡಲೇ ಗೋಪಾಲನು ವಿದ್ಯುದ್ವೇಗದಿಂದ, ಬೀದಿಯ ಬದಿಗೆ ನೆಗೆದನು ಬೀದಿಗಿಂತ ತಗ್ಗಾಗಿ ಕರಡುಮೊರಡಾಗಿತ್ತು ಆ ಸ್ಥಳ. ಆಗ ಅವನು ಶೀನುವನ್ನು ಕೂಡಾ ಎಳೆದುಕೊಂಡುದರಿಂದ ಶೀನು ಕಾಲು ಜಾರಿ ಬಿದ್ದುಬಿಟ್ಟ. ಆಗ ಗೋಪಾಲನೂ ಬೀಳಲಿಕ್ಕಿದ್ದರೂ, ಲಾಘವದಿಂದ ನಿಂತುಬಿಟ್ಟಿದ್ದ

"ಶೀನು, ಪೆಟ್ಟಾಯಿತೆ?"

"ತಲೆಗೆ ಸ್ವಲ್ಪ ಕಲ್ಲು ತಗಲಿದಂತಿದೆ ಗೋಪಾಲ! ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಮತ್ತು ಅದು ಹೇಡಿತನ ಕೂಡಾ." ಎಂದು ನೋವನ್ನು ಸೈಸಿಕೊಂಡು ಶೀನು ನುಡಿದನು.

"ಆದರೂ ಕಡೇವರೆಗೆ ಪ್ರಯತ್ನಮಾಡಬೇಡವೆ? ಅಗೋ-ಸಮೀಪದಲ್ಲಿ ಏನೋ ಒಂದು ದಿಣ್ಣೆಯಂತೆ ಕಾಣುತ್ತದೆ. ಅದರಾಚೆಗೆ ಹೋಗಿ ಸ್ವಲ್ಪ ಕೂತುಕೊಳ್ಳುವ. ನಡೆಯಲಾರೆಯಾ ?"

"ನಡೆನಡೆ—" ಎಂದು ಶೀನು ಬೇಗಬೇಗನೇ ಮುಂದೆ ನಡೆದನು. ಹಣೆಯಿಂದ ರಕ್ತ ಸುರಿಯುತ್ತಿರಬೇಕು; ಒಂದು ಕೈಯಿಂದ ಅದನ್ನು ಒತ್ತಿ ಹಿಡಿದಿದ್ದನು.

ಅಲ್ಲಿ ದಿಣ್ಣೆಯಂತೆ ಕಾಣುತ್ತಿದ್ದುದ್ದು ದಿಣ್ಣೆಯಲ್ಲ; "ಎ. ಆರ್. ಪಿ. ಶೆಲ್ಟರ್."

ಅವರಿಬ್ಬರೂ ಅದರ ಒಳಕ್ಕೆ ಹೋಗಲಿಲ್ಲ ಅದನ್ನು ತಡವುತ್ತಾ ಅದರ ಹಿಂಬದಿಗೆ ನಡೆದರು. ಅಷ್ಟರಲ್ಲಿ ಅದರ ಇನ್ನೊಂದು ಬದಿಗೆ ಬೀದಿಯ ಕಡೆಯಿಂದ ಟಾರ್ಚ್ ಪ್ರಕಾಶವು ಬಿದ್ದಿತು. ಆ ಪೋಲೀಸರು ಖಂಡಿತ ಈ ಗೂಡಿನೊಳಗೆಲ್ಲಾ ಹುಡುಕಾಡುವರೆಂದು ಭಾವಿಸಿ ಇಬ್ಬರೂ ಅಲ್ಲಿಂದ ಕದಲಿ ಅತ್ತತ್ತ ನಡೆದರು

ಅಲ್ಲೊಂದು ದೊಡ್ಡ ಮರವೂ ಅದರ ಬುಡದಲ್ಲಿ ಕರಾಳ ಕತ್ತಲೆಯ ರಾಶಿಯೂ ಕಾಣುತ್ತಿತ್ತು. ಹಿಂದಿನಿಂದ ಮತ್ತೆ ಟಾರ್ಚ್ ಪ್ರಕಾಶವು ಬಿತ್ತು. ಅದರೊಂದಿಗೆ "ಡಂ—ಡಂ - ಡಂ" ಮೂರು ಗುಂಡುಗಳು ಸಿಡಿದುವು. ಗುರಿ ತಪ್ಪದೆ ಒಂದು ಶೀನುವಿನ ಕಾಲಿಗೆ ತಾಗಿತು. ಇನ್ನೆರಡು ಗೋಪಾಲನ ಒಂದೇ ಕಾಲಿಗೆ ಬಡೆದುವು

ಗೋಪಾಲನು ನೋವಿನಿಂದ ತತ್ತರಿಸುತ್ತ "ಹಾ ! ಶೀನೂ !" ಎಂದು ಶೀನುವನ್ನು ತನ್ನೊಂದಿಗೆಳೆದುಕೊಂಡೇ ಬಿದ್ದನು. ಗ್ರಹಚಾರದಿಂದ ಅವನು ಬಿದ್ದ ಸ್ಥಳವು ಕಸಗುಪ್ಪೆಗಳನ್ನು ಸುರಿಯುವ ಸ್ಥಳವಾಗಿತ್ತು. ಅಲ್ಲಿದ್ದ ಗಾಜಿನ ಚೂರುಗಳೂ ಕಲ್ಲುಗಳೂ ಅವನ ಮೈ-ಕೈಗಳಿಗೆ ಚುಚ್ಚಿದುವು. ಶೀನುವೂ ಕೈಯೂರಿ ಬಿದ್ದುದರಿಂದ ಕೈಗಳಿಗೆ ಏನೇನೋ ಕಂತಿಕೊಂಡುವು

ಹೀಗೆ ತಪ್ಪಿಸಿಕೊಳ್ಳುವ ಯತ್ನಮಾಡುವುದರಿಂದಲ್ಲವೇ ಇಷ್ಟೆಲ್ಲ ಬಾಧೆ? ಶೀನೂ ಒಬ್ಬನೇ ಆಗಿರುತ್ತಿದ್ದರೆ ಹೀಗೆ ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದಿಲ್ಲ. ಗೋಪಾಲನಿಂದಲೇ ಇಷ್ಟು ದೂರಕ್ಕೆ ಬಂತು.

———

## ೪೪

ಇಬ್ಬರು ಪೋಲೀಸರು ಕೂಡಲೇ ಅವರ ಬಳಿಗೆ ಬಂದು ನಿಂತರು. ಗೋಪಾಲನು ಮೂರ್ಛಿತನೇ ಆಗಿದ್ದ. ಶೀನು ಅವನನ್ನು ಎತ್ತಲು ಪ್ರಯತ್ನಿಸುತ್ತಿದ್ದ. ಅವನಿಗೂ ಬಹಳ ಘಾಸಿಯಾಗಿತ್ತು. ಪೋಲೀಸರು ಅವರ ಮೇಲೆ ಬೆಳಕು ಬಿಟ್ಟು— "ಈಗ ಓಡಿ ನೋಡೋಣ ಮೂರ್ಖರು! ಪೋಲೀಸರ ಕೈಯಿಂದ ಓಡಿ ತಪ್ಪಿಸಿಕೊಳ್ಳಲಾದೀತೆಂದು ಭಾವಿಸಿದಿರಾ?" ಎಂದು ಮೂದಲಿಸಿದರು.

ಶೀನು— "ಅದಿರಲಯ್ಯಾ. ನಿನ್ನ ಈ ಹೆಮ್ಮೆಗೂ ಮೂದಲಿಕೆಗೂ ಅಂತಾ ಮಹತ್ವವೇನೂ ಇಲ್ಲ. ಓಡುವುದೂ ಓಡಿಸುವುದೂ ಮನುಷ್ಯರ ಸ್ವಭಾವವೇ. ಇನ್ನೇನೂ ನಾವು ಓಡಲಾರೆವಷ್ಟೆ? ನೋಡು ನನ್ನ ಗೆಳೆಯ ಮೂರ್ಛೆ ಹೋಗಿದ್ದಾನೆ. ಇಲ್ಲಿ ಸಮೀಪದಲ್ಲಿ ಡಾಕ್ಟರರಿದ್ದರೆ ಮೊದಲು ನಮ್ಮನ್ನು ಅಲ್ಲಿಗೆ ಕರೆದೊಯ್ಯುವ ಏರ್ಪಾಡು ಮಾಡಯ್ಯ" ಎಂದನು.

ಹತ್ತ ಪಕ್ಕದಲ್ಲಿಯೇ ಬೃಹೋನ್ನತವಾಗಿ ಕಾಣುವ ಪೌಳೀಗೋಡೆ ಮಹಿಳಾಭ್ಯುದಯ ಮಂಡಲಿಯ ವಠಾರಾವರಣವಾಗಿತ್ತು. ಮುಖ ದ್ವಾರದ ಒಳಯಲ್ಲಿಯೇ ಈ ಸಂಭವವು ನಡೆದುದರಿಂದ, ಅಲ್ಲಿದ್ದ ವಾಚ್‌ಮೇನನೂ, ತೋಟಗಾರನೂ, ಸದ್ದು ಕೇಳಿ ಇಲ್ಲಿಗೆ ಬಂದು— "ಯಾರು, ಏನು" ಎಂದು ನೋಡುತ್ತಿದ್ದರು.

"ಸದ್ಯ ಇವರಿಬ್ಬರನ್ನು ನಿಮ್ಮ ಚಿಕಿತ್ಸಾಲಯಕ್ಕೆ ಸಾಗಿಸಬೇಕು. ನಿಮ್ಮ ಮೇನೇಜರರಿಗೆ ತಿಳಿಸಿರಿ" ಎಂದು ಪೋಲೀಸನೊಬ್ಬನು ಅವನಿಗೆ ತಿಳಿಸಿದನು.

ಕೂಡಲೇ ತೋಟಗಾರನು ಹೋಗಿ ಚಿಕಿತ್ಸಾಲಯದ ಮೇನೇಜರರನ್ನು ಕರೆದುಕೊಂಡು ಬರುವಾಗ, ಶೀನುವೂ ವಾಚ್‌ಮೇನನೂ, ಪೋಲೀಸರೂ ಸೇರಿ, ಗೋಪಾಲನನ್ನು ಆ ಕೊಳಕು ಜಾಗೆಯಿಂದ ಎತಿ ತಂದು ಬೀದಿಯ ಬದಿಯಲ್ಲಿ ಮಲಗಿಸಿದ್ದರು

ಮಹಿಳಾಭ್ಯುದಯ ಮಂಡಲಿಯ ಚಿಕಿತ್ಸಾಲಯ ಮೆನೇಜರರು ಮಹಿಳೆಯಾಗಿರಲಿಲ್ಲ. ಮಧ್ಯಮ ವಯಸ್ಸಿನ ಪುರುಷರು. ಅವರು

ಎರಡು ತಳ್ಳುಬಂಡಿಗಳೊಂದಿಗೇ ಈ ಸ್ಥಳಕ್ಕೆ ನಡೆತಂದರು ಅವರನ್ನು ಕುರಿತು ಪೋಲೀಸರು— "ಇವರಿಬ್ಬರು ತಪ್ಪಿಸಿಕೊಂಡು ಬಂದ ಗೂಂಡಾಗಳು. ಹಾರಿಬಿದ್ದು, ಗುಂಡುತಾಗಿಯೂ ಗಾಯಗಳಾಗಿವೆ ಸದ್ಯ ನಿಮ್ಮ ಚಿಕಿತ್ಸಾಲಯದಲ್ಲಿ ಇರಿಸಬಹುದೆ?"

"ಅಗತ್ಯವಾಗಿ! ಏ, ಇವರನ್ನು ತಳ್ಳುಬಂಡಿಯಲ್ಲಿ ವೈದ್ಯಾಲಯಕ್ಕೆ ಸಾಗಿಸಿರಿ " ಎಂದು ಸೇವಕರಿಗೆ ಆಜ್ಞಾಪಿಸಿದರು ಮ್ಯಾನೇಜರ್.

ಗೋಪಾಲನನ್ನು ಎತ್ತಿ,ತಳ್ಳುಬಂಡಿಯಲ್ಲಿ ಒರಗಿಸಲಾಯಿತು. ಕುಂಟುತ್ತಿದ್ದ ಶೀನುವೂ ಇನ್ನೊಂದು ಬಂಡಿಯಲ್ಲಿ ಕುಳಿತ. ಹೀಗೆ ಅವರೆಲ್ಲ ಮಹಿಳಾಭ್ಯುದಯ ಮಂಡಲಿಯ ವಠಾರದೊಳಗೆ ಹೊಕ್ಕರು. ಒಬ್ಬ ಪೋಲೀಸನು ಮಾತ್ರವೇ ಅಲ್ಲಿ ಉಳಿದು, ಇನ್ನೊಬ್ಬನು ಪೋಲೀಸ್ ಸ್ಟೇಶನ್ ಕಡೆಗೆ ಹೊರಟುಹೋದನು.

ಮಹಿಳಾಭ್ಯುದಯ ಮಂಡಲಿಯ ವೈದ್ಯಾಲಯದಲ್ಲಿ ಅನುಭವ ವೃದ್ಧರಾದ ಡಾಕ್ಟರೊಬ್ಬರೂ, ಅವರಿಗೆ ಸಹಾಯಕಳಾಗಿ ಲೇಡೀ ಡಾಕ್ಟರೊಬ್ಬಳೂ ಇದ್ದರು. ಡಾಕ್ಟರು ಇವರ ಹೆಸರುದೆಸೆಗಳನ್ನು ಕೇಳಿದಾಗ ಶೀನು ತನ್ನ ಹೆಸರನ್ನೂ, ಗೋಪಾಲನ ಹೆಸರನ್ನೂ ಸರಿಯಾಗಿಯೇ ಒಪ್ಪಿಸಿದ ಆಗ ಪೋಲೀಸನು ಗುರುತು ಹೇಳಿದಂತೆ "ಗೂಂಡಾ ಖೈದಿಗಳು" ಎಂದೂ ಅದರೊಂದಿಗೆ ಸೇರಿಸಲಾಯಿತು

ಇಬ್ಬರನ್ನೂ ಒಂದೇ ಕೋಣೆಯೊಳಗೆ ಎರಡು ಮಂಚದಲ್ಲಿ ಮಲಗಿಸಲಾಗಿತ್ತು. ಲೇಡೀ ಡಾಕ್ಟರು ಶೀನುವನ್ನೂ ಪುರುಷ ಡಾಕ್ಟರು ಗೋಪಾಲನನ್ನೂ ಚಿಕಿತ್ಸಿಸತೊಡಗಿದರು.

ಡಾಕ್ಟರು ಗೋಪಾಲನಿಗೆ ಯಾವುದೋ ಒಂದು ಇನ್‌ಜೆಕ್ಷನ್ ಕೊಟ್ಟರು; ಗಾಯಗಳನ್ನು ತೊಳೆದರು ಕಾಲಿನಲ್ಲಿ ಸಿಕ್ಕಿದ್ದ ಗುಂಡುಗಳನ್ನು ತೆಗೆದರು ಔಷಧಗಳನ್ನಿಟ್ಟು ಕಟ್ಟುಕಟ್ಟಿದರು.

ಆಗ ಆ ಡಾಕ್ಟರಿಗೆ ಅದೂ ಇದೂ ಕೊಡುತ್ತ ತೆಗೆಯುತ್ತ. ಸಹಾಯ ಮಾಡುತ್ತಿದ್ದವಳು ನಮ್ಮ ಗೌರಿಯೇ !

ರಾತ್ರಿಯಲ್ಲಿ ಬಹು ವೇಳೆಯವರೆಗೆ ಎಚ್ಚತ್ತಿದ್ದು, ರೋಗಿಗಳ ಆರೈಕೆಯ ಕೆಲಸವನ್ನು ಗೌರೀ ಸುಂದರಿಯರು ಉತ್ಸಾಹದಿಂದ ವಹಿಸಿಕೊಂಡಿದ್ದರು. ಅಂತಹ ಕಠಿನವಾದ ರೋಗಿಗಳೇನೂ ಆಗ ಇಲ್ಲದ್ದರಿಂದ, ಕೆಲಸ

ವೇನೂ ಅಷ್ಟು ಕಷ್ಟವಾಗಿರಲಿಲ್ಲ ಒಬ್ಬಳು ಮಲಗಿದ್ದಾಗ ಒಬ್ಬಳು ಎಚ್ಚರಿದ್ದೇ ಕೆಲಸ ಸುಧಾರಿಸಿಕೊಳ್ಳಬಹುದಾಗಿತ್ತು. ಆ ಡಾಕ್ಟರುಗಳಿಗೂ ಗೌರಿಯ ಉತ್ಸಾಹಪೂರಿತವಾದ ಚಟುವಟಿಕೆಗಳನ್ನು ಕಂಡು ತುಂಬ ಮೆಚ್ಚಾಗಿತ್ತು.

ಡಾಕ್ಟರು ಚಿಕಿತ್ಸೆ ಮಾಡುತ್ತಿದ್ದಾಗ ಗೋಪಾಲನ ಗುರುತು ಗೌರಿಗೆ ಗೊತ್ತಾಗಲಿಲ್ಲ. ಗುರುತಿನವನೋ ಅಲ್ಲವೋ ಎಂದು ಅವಳು ಲಕ್ಷ್ಯ ವಿಟ್ಟು ನೋಡಲೂ ಇಲ್ಲ. ಕಣ್ಣು ಮುಚ್ಚಿಕೊಂಡು ಬಿದ್ದಿರುವ ಗೋಪಾಲನ ದೀನಾವಸ್ಥೆಯನ್ನು ಕಂಡು, ಅವಳಿಗೆ ಕರುಣೆಯೂ ಅನುತಾಪವೂ ಉಕ್ಕುಕ್ಕಿ ಬರುತ್ತಿತ್ತು "ಪಾಪ! ಯಾವ ಊರಿನವನೋ! ಇವನ ಕುಟುಂಬದವರಿಗೆ ಈ ವಿಷಯ ಗೊತ್ತಿವೆಯೋ ಇಲ್ಲವೋ!—" ಎಂದು ಮುಂತಾಗಿ ತನ್ನೊಳಗೆ ತಾನೇ ಕರಗುತ್ತಿದ್ದಳು.

ಆಚೆಯ ಮಂಚದಲ್ಲಿ ಲೇಡೀ ಡಾಕ್ಟರರು ಸುಂದರಿಯ ಸಹಾಯ ದಿಂದ ಶೀನುವಿನ ಗಾಯಗಳಿಗೆ ಚಿಕಿತ್ಸೆ ಮಾಡುತ್ತಿದ್ದರು ಆಗ ಸುಂದರಿ ಫಕ್ಕನೆ ಶೀನುವಿನ ಗುರುತು ಹಿಡಿದುಬಿಟ್ಟಳು ಆಶ್ಚರ್ಯ-ಆನಂದ-ಅನುತಾಪ-ಅನುರಾಗ ಇವೆಲ್ಲಾ ಒಟ್ಟಾಗಿ ಸಮಾವೇಶಗೊಂಡು ಅವಳ ಕಣ್ಣು ಗಳಲ್ಲಿ ತೇಲಿ ಹೋಳಿದುವು — "ನೀವು—ನೀವು—" ಎಂದು ಅವಳ ತುಟಿಗಳುದುರಿದು

ಅವಳನ್ನು ನೋಡಿ ಶೀನುವಿಗೂ ಸಂಶಯವೆದ್ದಿತ್ತು. ಇವಳು ಸುಂದರಿ ಹೌದೋ ಅಲ್ಲವೋ ಎಂದು ಶಂಕಿಸಿಕೊಂಡಿದ್ದನು. ಈಗ ಅವಳು ಮೊದಲಿನ ಆ ಸುಂದರಿಯಂತಿದ್ದಾಳೆಯೆ? ಸೊರಗಿದ ಮೈಯಿಂದ, ಮುಖದಲ್ಲಿ ಸೌಜನ್ಯಮಿಶ್ರವಾದ ಕಾಂತಿಯಿಂದ, ಉಟ್ಟಿರುವ ಸಾದಾ ಬಿಳೀ ಸೀರೆಯಿಂದ ವೀರಾಗಿಣಿಯಾಗಿ ಒಪ್ಪುತ್ತಿದ್ದಳು. ಇವಳು ಯಾವ ದೇವಿಯೋ—ಎಂದು ಶೀನು ನೋಡುತ್ತಿದ್ದನು.

ಅವಳು ತನ್ನ ಗುರುತು ಹಿಡಿದಳೆಂದು ಅವಳ ಕಣ್ಣುಗಳಿಂದ ಕಂಡು ಬರುತ್ತಲೇ ಅವನಿಗೆ ಸಂಶಯ ನಿರಸನವಾಯಿತು. ಸಸ್ನೇಹದ ಮುಗುಳ್ನಗೆಯನ್ನು ಅರಳಿಸಿದನು

ಶೀನುವಿನ ಪ್ರಥಮ ಚಿಕಿತ್ಸೆ ಬೇಗನೇ ಮುಗಿಯಿತು. ಲೇಡೀ ಡಾಕ್ಟರು ಸುಂದರಿಗೆ, ಅವನಿಗೆ ಏನೇನು ಮಾಡಬೇಕೆಂದು ಹೇಳಿಕೊಟ್ಟು ಹೊರಟುಹೋದರು.

ಇದ್ದಕ್ಕಿದ್ದ ಹಾಗೆ ಸುಂದರಿ ಏನೋ ಒಂದು ಭಕ್ತಿಭಾವದಿಂದ ತುಂಬಿದವಳಂದಳು. ದೇವರ ಪೂಜೆಗೆ ನೈವೇದ್ಯವನ್ನು ತರುವಂತೆ, ಮೊಸಂಬಿ ಹಣ್ಣಿನ ರಸವನ್ನು ಹಿಂಡಿ, ಒಂದು ಗ್ಲಾಸಿನಲ್ಲಿ ಎತ್ತಿಕೊಂಡು ಬಂದಳು ಶ್ರೀನುವಿನ ತಲೆಯನ್ನು ಎತ್ತಿ, ಅವನನ್ನು ದಿಂಬಿಗಾನಿಸಿ ಕುಳ್ಳಿರಿಸಿ, ಆ ರಸವನ್ನು ಕುಡಿಯಲಿಕ್ಕೆ ಕೊಟ್ಟಳು. ಶ್ರೀನು ಕುಡಿದನು. ಆಗ ಸುಂದರಿಯ ಕಂಗೊನೆಗಳಲ್ಲಿ ಪಳಪಳನೆ ಕಂಬನಿ ತುಂಬಿತ್ತು. ಅವಳು ಮುಖವನ್ನು ತಿರುಗಿಸಿಕೊಂಡು, ಸೆರಗಿನಿಂದ ಕಣ್ಣೊರೆಸಿಕೊಂಡಳು.

ಅವನು ಅವಳ ಸಾಕ್ಷಾತ್ಪತಿ! ಆದರೆ, ಮದುವೆಯಾಗಿ ಎಂಟೊಂಭತ್ತು ವರ್ಷಗಳು ಕಳೆದ ಬಳಿಕ, ಪತಿದೈವವು ಅವಳ ಸೇವೆಯನ್ನು ಸ್ವೀಕರಿಸಿದ್ದು ಇದೇ ಮೊದಲು! ಪತಿಯ ಸಾನ್ನಿಧ್ಯದಲ್ಲಿ ಅವಳು ಮಾಡಿದ ನಿಜವಾದ ಕೈಂಕರ್ಯವು ಇದೇ ಮೊದಲು!

ಮದುವೆಯಾದ ಹೊಸದರಲ್ಲಿ ಅವಳನ್ನು ಕಂಡು ಶ್ರೀನು ತುಂಬಾ ಜಿಗುಪ್ಸಿತನಾಗುತ್ತಿದ್ದ; ಅವನು ಯಾವ ಕೆಲಸವನ್ನೂ ಅವಳಿಗೆ ಮಾಡಗೊಟ್ಟಿರಲಿಲ್ಲ. ಏಕೆ? ಸುಂದರಿ ಕುರೂಪಿ ಹುಡುಗಿ; ಹೆಂಗುಸಿನಂತಹ ಹುಡುಗಿ ಅವಳಿಗೆ ಹೇಗಾದರೊಂದು ಮದುವೆ ಮಾಡಿದರಾಯಿತೆಂದು, ಮೋಸದಿಂದ ಅವಳನ್ನು ಶ್ರೀನುವಿನ ಕೊರಳಿಗೆ ಕಟ್ಟಿಬಿಟ್ಟಿದ್ದರು ರಾಮಾಜೋಯಿಸರು. ತನಗೆ ಮದುವೆಯೇ ಆಗಲಿಕ್ಕಿಲ್ಲವೆಂದು ನಿರಾಶಳಾಗಿದ್ದ ಸುಂದರಿಗೆ, ಹಾಗೊಂದು ಮದುವೆಯಾಗುತ್ತಲೇ, ತಾನೂ ಎಲ್ಲರಂತೆ ಸಂಸಾರಿಣಿಯಾಗಿರಬಹುದೆಂದು, ತನ್ನೊಳಗೆ ದೊಡ್ಡ ದೊಡ್ಡ ಆಕಾಶ ಮಂದಿರಗಳನ್ನು ಕಟ್ಟಿಕೊಂಡಿದ್ದಳು ಬಹಳ ಎಚ್ಚರಿಕೆಯವಳಾದ ಅವಳ ಅಜ್ಜಿ, ಗಂಡನನ್ನು ಹೇಗೆ ವಶಪಡಿಸಿಕೊಳ್ಳಬೇಕು, ಎಂಬ ಪಾಠವನ್ನೆಲ್ಲ ಅವಳಿಗೆ ಚೆನ್ನಾಗಿ ತಿಳಿಸಿ ಹೇಳಿದ್ದಳು. "ಗಂಡಸರು ಲಾವಣ್ಯದ ಕಡೆಗೇ ಹರಿಯುವ ಮನಸ್ಸುಳ್ಳವರು; ಆದರೆ ನಿನ್ನ ಪುಣ್ಯದಿಂದ ನಿನ್ನ ಗಂಡನಾದ ಶ್ರೀನು ಅಂತಹ ಚಂಚಲದವನಾಗಿ ಕಾಣುವುದಿಲ್ಲ. ನೀನು ಥಳುಕು ಬೆಳಕಾಗಿ ನುಲಿದಾಡಿ, ಅವನಿಗೆ ನಿನ್ನಲ್ಲಿ ಮೋಹ ಬರುವ ಹಾಗೆ ನೀನೇ ಪ್ರಯತ್ನಪಡಬೇಕು. ನಾಮುಂದೆ ನಾಮುಂದೆ ಎನ್ನುತ್ತ ಅವನ ಬಟ್ಟೆ ಒಗೆಯುವುದೇ ಮೊದಲಾದ ಕೆಲಸಗಳನ್ನು ನೀನಾಗಿ ಕೈಚಾಚಿ

ಚಾಚಿ ಮಾಡಬೇಕು. ಸಾಮಾನ್ಯ ಹೆಣ್ಣುಗಳ ಹಾಗೆ ಗಂಡನ ಮುಂದೆ ನಾಚಿ ನಾಚಿ ಮೂಲೆ ಸೇರಬೇಡ ನೀನು, ಅವನು ನಿನ್ನೊಡನೆ ಮಾತಾಡದೆ ಸುಮ್ಮನಿದ್ದರೂ ನೀನೇ ಸಮಯ ನೋಡಿ ಮೈಕೈತಟ್ಟಿ ಮಾತಾಡಿಸಬೇಕು....... ... ....'' ಎಂಬಲ್ಲಿಯವರೆಗೂ ಅವಳ ಅಜ್ಜಿ ಅವಳ ತಲೆ ತುಂಬ ತನ್ನ ಬೋಧನೆಯನ್ನು ತುಂಬಿಸಿದ್ದಳು. ಅಜ್ಜಿ ಹೇಳಿಕೊಟ್ಟ ನೀತಿಪಾಠಗಳನ್ನು ಅವಳು ಸಾಧ್ಯವಾದಷ್ಟು ಕೃತಿಯಲ್ಲಿಳಿಸಿ ನೋಡಿದ್ದಳು. ಅದರಿಂದ ಶೀನು ಇನ್ನಷ್ಟು ದೂರದೂರನಾಗುವಂತಾಯಿತು. ಅದು ಅದರಿಂದೆಂದು ಅವಳಿಗೆ ಆಗ ಗೊತ್ತಾಗಲಿಲ್ಲ. ಶೀನು ಅವಳನ್ನು ತನ್ನ ಮೈಮುಟ್ಟಲಿಕ್ಕೆ ಕೂಡಾ ಬಿಟ್ಟಿರಲಿಲ್ಲ

ಒಂದು ದಿನ ಅವಳು ವಿರಹತಾಪವನ್ನು ತಾಳಲಾರದೆ, ಉಪಾಯವಾಗಿ ರಾತ್ರಿ ಪತಿಯ ಕೋಣೆಯನ್ನು ಸೇರಿ, ಅವನನ್ನು ಪ್ರಸನ್ನೀಕರಿಸಲೆತ್ನಿಸಿ, ಪತಿಯನ್ನೇ ಕಳೆದುಕೊಳ್ಳುವಂತಹ ಮಹಾನಷ್ಟಕ್ಕೀಡಾದಳು ! ಮರುದಿನ ಬೆಳಗಾಗುವಾಗ ಶೀನು ಫರಾರಿಯಾಗಿದ್ದ ಇವಳು ದಿಕ್ಕಿಲ್ಲದ ಅನಾಥೆಯಾಗಿ ಸಿನಿಮಾ ರಂಗದೊಳಗೆ ಪ್ರವೇಶಮಾಡಿದಳು. ಅಜ್ಜಿಯ ಬೋಧನೆ ಕಾಸಿನ ಉಪಯೋಗವಿಲ್ಲದುದೆಂದು ಚೆನ್ನಾಗಿ ಮನವರಿಕೆಯಾಯಿತು. ''ಪ್ರೇಮವನ್ನು ಹಾಗೆಲ್ಲಾ ಬಾಹ್ಯಕೃತಿಗಳಿಂದ ಪಡೆಯಲಿಕ್ಕಾಗದು; ಈ ಜನ್ಮದಲ್ಲಿ ನನಗೆ ಪತಿ ಪ್ರೇಮವೂ ತನ್ಮೂಲಕ ಪತಿ ಸೇವೆಯೂ ದೊರೆಯುವಂತಿಲ್ಲ. ದೇವರೇ ನನ್ನನ್ನು ಆ ರೀತಿಯಾಗಿ ಹುಟ್ಟಿಸಿದ್ದಾನೆ." ಎಂದು ಅವಳು ದೃಢವಾಗಿ ನಂಬಿ, ಇತರ ಸತ್ಸೇವೆಗಳಿಂದ ಆ ಬಗೆಯ ಚಿಂತೆಯನ್ನೇ ಬಿಟ್ಟುಬಿಟ್ಟಿದ್ದಳು.

ಆದರೂ ಅವಳ ಹೃದಯಾಂತರಾಳದಲ್ಲಿ ಪತಿ ಶೀನುವಿನ ಮೇಲೆ ಅದೊಂದು ವಿಶಿಷ್ಟ ರೀತಿಯ ಭಕ್ತಿ-ಗೌರವ ಭಾವಗಳು ವಜ್ರದಂತೆ ಗಟ್ಟಿಯಾಗಿ ಅಡಗಿಕೊಂಡೇ ಇದ್ದುವು ಅವಳು ಶೀನುವನ್ನು ನೆನೆದುಕೊಳ್ಳದ ದಿನವೇ ಇರಲಿಲ್ಲ ಅವಳು ಫಿಲಿಂ ಚಕ್ರದೊಳಗೆ ನಾಟ್ಯಲೀಲೆಯಾಡುತ್ತಿದ್ದಾಗಲೂ, ಅವಳ ಹೃದಯದೊಳಗೆ ಶೀನು ಇದ್ದೇ ಇದ್ದ ಪತಿಗೆ ಎಷ್ಟೋ ಬಗೆಯಾಗಿ ಸೇವೋಪಚಾರಗಳನ್ನು ತನ್ನ ಸ್ವಂತ ಕೈಯಿಂದ ಮಾಡಬೇಕೆಂಬ ಬಯಕೆ ಕೂಡಾ ಇನ್ನು ನೆರವೇರಲಾರದೆಂದುಕೊಂಡು ಅದನ್ನು ತೊಡೆದು ಹಾಕಿದ್ದಳು ಈಗ ಅಕಸ್ಮಾತ್ತಾಗಿ ಆ ಬಯಕೆ

ಒಮ್ಮೆಗೇ ತುಂಬಿಕೊಂಡು ಬಂದಂತಾಯಿತು. ತನ್ನ ಕೈಮುಟ್ಟಿ ಹಣ್ಣಿನ ರಸವನ್ನು ತುಂಬಿ ತಂದು ಪತಿಗೆ ಕುಡಿಸುತ್ತಿದ್ದಾಳೆ; ಶೀನು ಪ್ರಸನ್ನತೆಯಿಂದ ಕುಡಿಯುತ್ತಿದ್ದಾನೆ. ಆಗ ಹಿಂದಿನ ನೆನಪೆಲ್ಲಾ ಅವಳ ಮನಸ್ಸಿನಲ್ಲಿ ಮೂಡಿ, ಕಂಬನಿದುಂಬಿಸಿತು. ಅವಳ ಆ ನಿಷ್ಕಲ್ಮಷ ಭಾವವು ಕನ್ನಡಿಯಂತೆ ಶೀನುವಿನ ಹೃದಯದಲ್ಲಿಯೂ ಪಡಿಮೂಡಿ, ಅವನ ಕಣ್ಣುಗಳೂ ಒದ್ದೆಯಾಗಿ ಹೊಳೆದುವು

ಆಗ ಸುಂದರಿ ತನ್ನ ಸೆರಗಿನಿಂದ ಅವನ ಕಂಗೊನೆಗಳನ್ನು ಒರೆಸಿದಳು ಅವನ ಕಾಲುಗಳನ್ನು ಮುಟ್ಟಿ ತನ್ನ ಕಣ್ಣಿಗೆ ಒತ್ತಿಕೊಂಡಳು. ಶೀನು ತನ್ನ ನೆನೆಗಣ್ಣುಗಳಿಂದ ಅವಳ ನೆನೆಗಣ್ಣುಗಳನ್ನು ನೋಡುತ್ತಿದ್ದನು. ಅವಳು ಅವನ ಪಕ್ಕದಲ್ಲಿ ಸ್ಟೂಲಿನ ಮೇಲೆ ಕುಳಿತು, ಬೀಸಣಿಕೆಯಿಂದ ಅವನಿಗೆ ಗಾಳಿ ಹಾಕುತ್ತಾ— "ಈಗ ನೋವು ಹೇಗಿದೆ? ಕಣ್ಣು ಮುಚ್ಚಿ ಸ್ವಸ್ಥ ಮಲಗಿ" ಎಂದಳು.

ಶೀನು ಮೆಲ್ಲದನಿಯಿಂದ ಮಾತಾಡಿದ:— "ನನಗೇನೂ ಅಂತಹ ಪೆಟ್ಟಾಗಿಲ್ಲ ಸುಂದರಿ; ಅತ್ತನೋಡು, ನನ್ನ ಗೆಳೆಯ ಗೋಪಾಲನಿಗೆ ಹೇಗಿದೆಯೊ? ಅವನಿಗೆ ತುಂಬಾ ಪೆಟ್ಟಾಗಿದೆ."

"ಅವರಿಗೂ ಗುಣವಾಗುತ್ತದೆ ಏನೂ ಚಿಂತಿಸಬೇಡಿ" ಎಂದಳು ಸುಂದರಿ.

———

೪೫

ಡಾಕ್ಟರು ಆಗ ತಾನೇ ಗೋಪಾಲನ ಚಿಕಿತ್ಸೆಯನ್ನು ಮುಗಿಸಿದ್ದರು ಅವನು ಕಣ್ಣು ಬಿಡಿಸಿದ ಮೇಲೆ ಕೊಡತಕ್ಕ ಒಂದು ಔಷಧವನ್ನೂ, ಅನುಪಾನವನ್ನೂ ಗೌರಿಗೆ ತಿಳಿಸಿ ಹೇಳಿ ಒಪ್ಪಿಸಿ ಡಾಕ್ಟರರು ಹೊರಟು ಹೋದರು. ಗೋಪಾಲನ ಮುಖದಲ್ಲಿ ಕೂಡಾ ಔಷಧದ ಕಟ್ಟುಗಳಿದ್ದುದರಿಂದ ಆವಳಿಗೆ ಅವನ ಗುರುತು ಸಿಕ್ಕಲೇ ಇಲ್ಲ.

"ಗೌರಿ. ಅವರಿಗೆ ಹೇಗಿದೆ? ಕೊಂಚ ಇತ್ತ ಬರುವಿಯಾ?" ಎಂದು ಕರೆದಳು ಸುಂದರಿ.

ಗೌರಿ ಶೀನುವಿನ ಮಂಚದ ಬಳಿಗೆ ಬರುವಾಗ— "ಗೌರಿ ಇವರನ್ನು ನೋಡಿ ಗಟ್ಟಿಯಾಗಿ ಬಾಯಿತೆರೆದು ಏನಾದರೂ ಹೇಳಿಬಿಡಬೇಡ ಹೊರಗೆ ಪೋಲೀಸನಿದ್ದಾನೆ!" ಸುಂದರಿ ಎಚ್ಚರಿಸಿದ್ದು ಕೇಳಿ ಗೌರಿ ಗಾಶ್ಚರ್ಯವಾಯಿತು

ಆಶ್ಚರ್ಯದೊಂದಿಗೇ ಮಂಚದಲ್ಲಿ ಮಲಗಿದ್ದ ಶೀನಣ್ಣನನ್ನು ನೋಡಿ— "ಹ! ಅಣ್ಣಾ! ಅಣ್ಣಾ!" ಎಂದು ಆನಂದದಿಂದ ಮೆಲ್ಲನೆ ದೆಗೆದಳು.

ಶೀನು ಮುಗುಳ್ನಗುತ್ತ ಅವಳ ತಲೆಯಮೇಲೆ ಕೈಯಾಡಿಸುತ್ತ— "ತಂಗಿ! ನೀನಿಲ್ಲಿ ಕ್ಷೇಮವಾಗಿದ್ದೀ ಎಂದು ತಿಳಿದು, ಬಹಳ ಸಮಾಧಾನವಾಯಿತು ನಿನ್ನನ್ನು ನೋಡಿ ಹೋಗಲಿಕ್ಕಾಗಿಯೇ ಹೀಗೆ ಬಂದದ್ದು!"

"ಅಯ್ಯೋ ಅಣ್ಣಾ! ನನ್ನ ಕಾಗದ ಸಿಕ್ಕಿತ್ತೆ?"

"ದೇವರ ದಯದಿಂದ ಸಿಕ್ಕಿತು ತಂಗಿ. ಗೋಪಾಲನಿಗೆ ಹೇಗಿದೆಯಮ್ಮ? ಕಣ್ಣು ತೆರೆದನೆ?

"ಎಲ್ಲಿದ್ದಾರೆ?—"

"ಓಹೋ! ನಿನಗೆ ಅವನ ಗುರುತೇ ಸಿಕ್ಕಲಿಲ್ಲವೊ?" ಗೌರಿ ಸ್ಫೂರ್ತಿಗೊಂಡವಳಂತೆ ಗೋಪಾಲನ ಮಂಚದೆಡೆಗೆ ಸಾಗಿದಳು. ಆನಂದಾನುತಾಪಗಳಿಂದ ಅವಳ ಮೈ ಪುಲಕಿತವಾಯಿತು

ಅನಂತರ ಅವರವರೊಳಗೆ ಪರಸ್ಪರ ಮಾತುಕತೆಗಳ ವಿನಿಮಯವು ಮೆಲ್ಲನೆ ನಡೆದುವು. ಇವರು ಸುಪರಿಚಿತರಾದ ನಿಕಟ ಸಂಬಂಧಿಕರೆಂಬುದನ್ನು ಬಹಿರಂಗ ಪಡಿಸುವುದು ಸಮಯೋಚಿತವಲ್ಲವೆಂದು ಶೀನು ಮೊದಲೇ ಎಚ್ಚರಿಸಿಟ್ಟಿದ್ದ. "ನಾವಿಬ್ಬರೂ ರಾಜಕೀಯ ಖೈದಿಗಳಾದುದರಿಂದ, ಸ್ವಲ್ಪ ಗುಣವಾದೊಡನೆಯೇ ಪೋಲೀಸರ ವಶವಾಗಿ ಹೋಗಬೇಕು. ಆದುದರಿಂದ ಈಗ ನಮ್ಮ ನಮ್ಮ ಪರಿಚಯಗಳು ಗುಪ್ತವಾಗಿಯೇ ಇರಲಿ. ನಮ್ಮೊಳಗಿನ ಸಂಬಂಧವು ಪೋಲೀಸರಿಗೆ ಕೊಂಚ ಮಾತ್ರವಾದರೂ ತಿಳಿದರೆ ನಿಮ್ಮಿಬ್ಬರನ್ನೂ ನಮ್ಮ ಬಳಿಯಿಂದ ಅಗಲಿಸಲಿಕ್ಕೂ ಸಾಕು" ಎಂದಿದ್ದನು.

ಇದನ್ನು ಕೇಳಿ ಗೌರೀ ಸುಂದರಿಯರು ಚಿಂತೆಗೆ ಬಿದ್ದಾಗ, ಶೀನು ಅವರನ್ನು ಕುರಿತು,— " ಈಗ ನಾವಿಬ್ಬರು ಮಾತ್ರವೇ ಹೀಗೆ ಖೈದಿಗಳಾದೆವೆಂದು ತಿಳಿಯುವಿರಾ ? ನಮ್ಮ ಹಾಗೆ ಸಾವಿರಾರು ಮಂದಿ ಖೈದಿಗಳಾಗಿದ್ದಾರೆ ಅವರಿಗಾಗುವಂತೆ ನಮಗೂ ಏನಾದರೊಂದು ಶಿಕ್ಷೆಯಾಗಿಯೇ ಆಗುವುದು ಆ ಮೇಲೆ ದೇವರು ನಡೆಸಿದರೆ,............... ಸುಂದರೀ ! ನೀನು ಒಪ್ಪುವಿಯಾ? ನಾನೊಂದು ಹೇಳುತ್ತೇನೆ..........." ಎಂದು ಸುಂದರಿಯ ಮುಖವನ್ನೇ ಶೀನು ದಿಟ್ಟಿಸಿ ನೋಡಿದನು.

"ಏನದು ಸ್ವಾಮಿ ? "

"ನಾನು ನಿನಗೆ ಮಹಾ ಅಪರಾಧವನ್ನು ಮಾಡಿದ್ದೇನೆ. ನನ್ನನ್ನು ಕ್ಷಮಿಸುವಿಯಾ?"

"ಹಾಗೆನ್ನಬೇಡ. ನೀವೇನೂ ಮಾಡಿಲ್ಲ. ಇದೆಲ್ಲಾ ಪೂರ್ವಾರ್ಜಿತ "

"ಸುಂದರೀ ! ನಾನೀಗ ಇದರ ಪರಿಮಾರ್ಜನೆ ಮಾಡಿಕೊಳ್ಳಬೇಕೆಂದು ನಿಶ್ಚಯಮಾಡಿದ್ದೇನೆ. ಇತ್ತೀಚೆಗೆ ನಿನ್ನ ಸುಗುಣ ಪರಿಮಳದ ಸುವಾಸನೆಯಿಂದಾಗಿ, ನನ್ನ ಮನಸ್ಸು ಹೂವಿನೆಡೆಗೆ ಹೋಗುವ ಭ್ರಮರದಂತೆ ನಿನ್ನೆಡೆಗೆ ಹೋಗಲಾರಂಭವಾಗಿದೆ. ನಿನ್ನ ಯೋಚನೆ ಹರಿಯಲಾರಂಭವಾಗಿದೆ. ಇದುವರೆಗೆ ಶಿಥಿಲ ಶಿಥಿಲವಾಗಿದ್ದ ಆ ಯೋಚನೆ, ಆ ಹಾರೈಕೆ, ಈಗ ನಿನ್ನನ್ನು ಕಂಡಮೇಲೆ ಸ್ಥಿರವಾಗಿ ಕೊನೆಮುಟ್ಟಿತು. ನಿಶ್ಚಯವನ್ನೇ ಮಾಡಿಬಿಟ್ಟಿದ್ದೇನೆ. ದೃಢನಿಶ್ಚಯವೆಂದೇ ತಿಳಿ ಸುಂದರೀ! ನಾನು ಸರಕಾರೀ ಬಂಧನದಿಂದ ಬಿಡುಗಡೆಯಾಗಿ ಬಂದೆನಾದರೆ,— ಹಾಗೆ ಬರುವೆನೆಂದೇ ನನ್ನ ಅಂತರಾತ್ಮವು ಹೇಳುತ್ತದೆ— ಆಗ ಸುಂದರೀ!— ನಿನ್ನನ್ನು ನಾನು ಸ್ವೀಕರಿಸಿಕೊಳ್ಳಬೇಕೆಂದಿದ್ದೇನೆ. ನಿನ್ನಂತಹ ಸುಗುಣಮಣಿ ಸ್ತ್ರೀರತ್ನವನ್ನು ಅರಿತುಕೊಳ್ಳಲಾರದೆ, ಪರದೇಶಿಯನ್ನಾಗಿ ಬಿಟ್ಟುಬಿಟ್ಟ ನಾನು ಎಂತಹ ಪಾಪಿ ! ಆದುದಾಯಿತು ! ಇನ್ನು ನಿನ್ನನ್ನು ನಾನು ಸ್ವೀಕರಿಸುವುದಾಗಿಯೇ ತೀರ್ಮಾನಿಸಿಬಿಟ್ಟಿದ್ದೇನೆ ಸುಂದರಿ!..........."

ಸುಂದರಿಗೆ ರೋಮಾಂಚಿತವಾಗುತ್ತಿತ್ತು. ಅವಳ ಇಷ್ಟು ವರ್ಷದ ಅಜ್ಞಾತ ತಪಸ್ಸಿಗೆ ಅವಳ ಇಷ್ಟದೇವನೀಗ ಒಲಿದು ಬರುತ್ತಿದ್ದಾನೆ.

"ನನ್ನನ್ನು ಪರದೇಶಿಯನ್ನಾಗಿ ಬಿಟ್ಟುದರಿಂದಲೇ ಈ ಪರಿವರ್ತನೆಗೆ ಕಾರಣವಾಯಿತಲ್ಲವೆ?" ಎಂದು ತನ್ನೊಳಗೇ ಅಂದುಕೊಂಡಳು

ಈಗ ಅವಳು ಆ ದೈವದೊಲ್ಮೆಯ ಹೊಂಸೊಗವನ್ನು ಪಡೆಯುವ ಸ್ಥಿತಿಯಲ್ಲಿದ್ದಾಳೆಯೆ? ಅದಕ್ಕಿಂತ ಹೆಚ್ಚಿನ ಸುಖ—ಶಾಂತಿಯನ್ನನುಭವಿಸುವಷ್ಟು ಪರಿಪಕ್ವವಾಗಿದೆ ಅವಳ ಮನಸ್ಸು ಆ ಪರಿಪಕ್ವತೆ, ಆನಂದ ರಸವನ್ನು ಒರಿಸಲಿಕ್ಕೆ ಆ ಇಷ್ಟದೈವದ ಒಲ್ಮೆಯು–ಹೃತ್ಪೂರ್ವಕ ಒಲ್ಮೆಯು, ಭಾವಪೂರ್ಣ ನುಡಿಯೊಂದೇ ಅವಳಿಗೀಗ ಬೇಕಾದುದು ಅದು ದೊರಕಿ ಬಿಟ್ಟಿತು ಅದುದರಿಂದಲೇ ಅವಳು ಹರ್ಷಪುಲಕಿತೆಯಾದಳು.

"ಆಹಾ! ಸ್ವಾಮಿ! ನನ್ನ ಈ ಜನ್ಮದಲ್ಲಿ ನಿಮ್ಮ ಹೃತ್ಪೂರ್ವಕವಾದ ಮೆಚ್ಚುಗೆಗೆ ನಾನು ತಕ್ಕವಳಾದುದನ್ನು ನೆನೆದು, ನನಗೆ ಅಮೃತಾನ್ನವುಂಡಂತಾಯಿತು. ನನಗೆ ಇದಕ್ಕಿಂತ ಹೆಚ್ಚಾದ ಕೋರಿಕೆಯೇನೂ ಇಲ್ಲ ಸ್ವಾಮಿ ನನ್ನನ್ನು ಕ್ಷಮಿಸಿರಿ ನಾನು ನಿಮ್ಮೊಂದಿಗೆ ಬಾಳುವೆಗೆ ಬರಲು ಇನ್ನು ಸಾಧ್ಯವಿಲ್ಲ ಕ್ಷಮಿಸುವಿರಾ?"

ಹೀಗನ್ನುವಳೆಂದು ಶೀನು ನೆನೆಯಲೇ ಇಲ್ಲ! ಅಚ್ಚರಿಯಿಂದ—"ಏಕೆ? ಏಕೆ ಸುಂದರಿ? ನೀನು ಮೊತ್ತಮೊದಲು ಬರೆದ ಪತ್ರದಲ್ಲಿ, ಅಂತಹ ಕೋರಿಕೆಯುಂಟೆಂಬ ದನ್ನೂ ಸೂಚಿಸಿದ್ದಿಯಲ್ಲವೆ?"

"ಆಗ ಹಾಗಿತ್ತು ಸ್ವಾಮಿ! ಅದಕ್ಕಿಂತ ಮೊದಲು ಇನ್ನೂ ಹೆಚ್ಚಾದ ಕೋರಿಕೆಯಿತ್ತು. ಆ ಮೇಲೆ ಯೋಚನೆ ಮಾಡಿದಂತೆ, ನಾನು ಆ ಬಗೆಯ ಕೋರಿಕೆಯನ್ನು ಇನ್ನೂ ಬಚ್ಚಿಟ್ಟುಕೊಂಡಿರುವುದಕ್ಕಾಗಿ ನನಗೆ ತುಂಬ ಪಶ್ಚಾತ್ತಾಪವಾಯಿತು."

"ಏಕೆ? ಹಾಗೇನಾಯಿತು?"

"ನಾನೇ ಹೇಳಬೇಕೆ?"

"ಹೇಳು ಸುಂದರಿ?—ಕಷ್ಟವಾಗುವುದಾದರೆ ಬೇಡ"

"ಕೇಳಿ ಸ್ವಾಮಿ! ನನಗೂ ನಿಮಗೂ ವರಸಾಮ್ಯವೆಂಬುದೇ ಇಲ್ಲ. ದೇವರು ನನ್ನನ್ನು ಆ ಬಗೆಯಾಗಿ ಸೃಷ್ಟಿಸಿದ್ದಾನೆ ಅದರಮೇಲೆ ನಾನು ಊರುಬಿಟ್ಟು, ಸಿನಿಮಾದಲ್ಲಿ 'ವಿಚಿತ್ರ ಸಿನಿಮಾ ನಟಿ' ಎಂದು ಪ್ರಸಿದ್ಧಳಾದೆ ಹೀಗಿದ್ದು ನನ್ನನ್ನು ಇನ್ನುಮೇಲೆ ನೀವು ಸ್ವೀಕರಿಸಿಕೊಂಡಿರಾದರೆ

ನೀವು ಖಂಡಿತವಾಗಿಯೂ ಜನರಾಡಿಕೆಗೆ ತುತ್ತಾಗುವಿರಿ ಆದರಿಂದ ನಿಮ್ಮ ನೆಮ್ಮದಿಗೆ ಭಂಗ; ನನಗೂ ಪರಮ ದುಃಖ ..........."

"ಸಾಕು ಸಾಕು. ಇನ್ನು ಹೇಳಬೇಡ. ಎಲ್ಲಾ ಗೊತ್ತಾಯಿತು. ಇದಾವುದನ್ನೂ ನಾನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲವೆಂದೇ ತೀರ್ಮಾನಿಸಿದ್ದೇನೆ ನೀನೂ ಹಾಗೆಯೇ ಗಟ್ಟಿಮಾಡಿಕೊಳ್ಳಲು ಸಾಧ್ಯವಿಲ್ಲವೆ?"

"ಇಲ್ಲ ಸ್ವಾಮಿ ನೀವು ಸಿಟ್ಟಾದರೂ ಚಿಂತಿಲ್ಲ ಇನ್ನು ಮೇಲೆ ನಾನು ನಿಮ್ಮೊಂದಿಗೆ ಬಾಳುವೆ ಮಾಡಲಾರೆ ಹಸಿವಾದಾಗ ಉಣ್ಣದೆ, ಹಸಿವು ಕೆಟ್ಟಮೇಲೆ ಉಂಡರೆ, ಆರೋಗ್ಯವು ಸಂಕಟಪಡುವ ಹಾಗೆಯೇ ಆದೀತು ಸ್ವಾಮಿ! ನಿಮ್ಮನ್ನು ನಾನು ಹೃತ್ಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುವುದೇನೆಂದರೆ, ನೀವು ನಿಮಗೆ ತಕ್ಕ ಕನ್ಯೆಯೊಬ್ಬಳನ್ನು ವಿವಾಹ ಮಾಡಿಕೊಳ್ಳಲೇಬೇಕು!"

ಶೀನು ನಕ್ಕು "ಅದು ನಡೆಯುವ ಮಾತಲ್ಲ," ಎಂಬ ಭಾವವನ್ನು ಸೂಚಿಸಿದನು "ಸರಿ ಈಗೇಕೆ ಈ ಮಾತ? ನನ್ನ ಭವಿಷ್ಯವು ಸದ್ಯ ಪೋಲೀಸರ ಕೈಯಲ್ಲಿದೆ" ಎಂದನು.

ಇವರು ಹೀಗೆ ಮಾತಾಡುತ್ತಿರುವಾಗಲೇ, ಅತ್ತ ಗೋಪಾಲನಿಗೂ ಎಚ್ಚರಿಕೆಯಾಗಿತ್ತು. ಗೌರಿಯೂ ಅವನೂ ಏನೇನೋ ಮಾತಾಡಿಕೊಂಡು ಭಾವಪರವಶರಾಗುತ್ತಿದ್ದರು ಅದರಲ್ಲಿ ನಾವು ಕೇಳಿ ತಿಳಿಯುವಂತಹ ವಿಶೇಷವೇನೂ ಇಲ್ಲವಷ್ಟೆ?

ಹೊರಗೆ ಪೋಲೀಸ ಇನ್ಸ್‌ಪೆಕ್ಟರೊಬ್ಬರು ಬಂದು, ಡಾಕ್ಟರರೊಡನೆಯೂ ಮೆನೇಜರೊಡನೆಯೂ ಮಾತಾಡುತ್ತಿದ್ದರು ಈ 'ಗೂಂಡಾ' ಖೈದಿಗಳು ಗುಣವಾಗುವವರೆಗೆ ಅಲ್ಲಿಯೇ ಇರಬಹುದೆಂದೂ ಅನಂತರ ಪೋಲೀಸರ ವಶಕ್ಕೆ ಒಪ್ಪಿಸಲ್ಪಡಬೇಕೆಂದೂ, ನಡೆದ ಮಾತುಕತೆಯದು. ಮುಖ್ಯವಾಗಿ ಗೋಪಾಲನಿಗೆ ಗುಣವಾಗಲು ಸುಮಾರು ಒಂದು ವಾರ ಬೇಕಾದೀತೆಂದು ಡಾಕ್ಟರು ಅಂದಾಜು ಹೇಳಿದ್ದರು

ನಾಲ್ಕೈದು ದಿನಗಳಲ್ಲಿಯೇ ಗೋಪಾಲನು ನಡೆಯುವಷ್ಟು ಶಕ್ತನಾಗಿದ್ದನು. ಆದರೂ ಅದನ್ನು ತೋರಿಸಿಕೊಳ್ಳದೆ ಇನ್ನೂ ಅಶಕ್ತದವನಾಗಿಯೇ ನಟಿಸಿಕೊಂಡು ಮಲಗಿದ್ದನು ಶೀನವೂ ಹಾಗೆಯೇ. ಅವರಿಬ್ಬರೂ ಗೌರೀ ಸುಂದರಿಯ ಸಾನ್ನಿಧ್ಯದಿಂದ ಹೋಗುವುದೆಲ್ಲಿಗೆ?—

ಸೆರೆಮನೆಗೆ ತಾನೆ? ಅಂತೆಯೇ ನಿಧಾನಿಸುತ್ತಿದ್ದರು. ಇಲ್ಲಿ ಕೂಡಾ ಹೊರಗೆ ಒಬ್ಬ ಪೋಲೀಸನು ಕಾಲದೂತನಂತೆ ಸದಾ ಕಾದುಕುಳಿತಿದ್ದನು.

ಶೀನುವಿನ ಕಣ್ಣು ಸುಂದರಿಯ ಸುತ್ತಲೂ ಬಟ್ಟವಿಡುತ್ತಿತ್ತು. ಗೋಪಾಲನ ಕಣ್ಣು ಗೌರಿಯ ಸುತ್ತಾ ತಿರುಗುತ್ತಿತ್ತು. ಹಗಲಲ್ಲಿ ಅವರಿಬ್ಬರೂ ಯಾವಾಗಲೂ ಅವರ ಬಳಿಯಲ್ಲಿರುತ್ತಿರಲಿಲ್ಲ. ಸುಂದರಿಗೆ ಬೇರೆ ಬೇರೆ ತುಂಬಾ ಕೆಲಸಗಳಿದ್ದುವು. ಗೌರಿಗೂ ಹಾಗೆಯೇ.

ಸುಂದರಿ ಅಲ್ಲಿ ಸಾಮಾನ್ಯ ತರಗತಿಯ ಬಡಹುಡುಗಿಯರಿಗೆ ಪ್ರಾಕೃತಿಕವಾದ ಸಂಗೀತ ನೃತ್ಯಗಳನ್ನು ಕಲಿಸಿಕೊಡುವ ಶಿಕ್ಷಕಿ. ಗೌರಿ ಪ್ರತ್ಯೇಕವಾದ ಮೇಲ್ತರಗತಿಯ ವಿದ್ಯಾರ್ಥಿನಿ. ಅವಳು ಅಲ್ಲಿ ಎಲ್ಲರಿಗೂ ಅಚ್ಚುಮೆಚ್ಚಿನ ಗೆಳತಿಯಂತಿರುವುದನ್ನು ನೋಡಿ ಶೀನೂ ಗೋಪಾಲರು ತುಂಬಾ ಆನಂದಪಟ್ಟರು.

ಗೌರಿ ಸಿನಿಮಾದಲ್ಲಿ ನಟಿಸಬೇಕಾಗಿ ಬಂದ ವೃತ್ತಾಂತವನ್ನು ಕೇಳಿ ಗೋಪಾಲನು— "ಒಳ್ಳೆಯದೇ ಆಯಿತು. ಆಗಲೇ ನೀನು ಐದು ಸಾವಿರ ರೂಪಾಯಿ ಬೆಲೆ ಬಾಳುವಷ್ಟು ಕಲಾವಿದೆಯಾಗಿರುವಿಯೆಂದಾಯಿತಲ್ಲವೆ? ಅದೊಂದು ಪ್ರಯೋಗವಾದದ್ದು ಒಳ್ಳೆಯದೇ ಮುಂದೆ ನಿನ್ನಿಂದ ಸಿನಿಮಾರಂಗದೊಳಗಿರುವ, ಬಾಹಿರಿಕ-ಆಂತರಿಕ ಕಲ್ಮಷಗಳೆಲ್ಲಾ ತೊಳೆದು ಹೋಗಿ, ಆ ವೈಜ್ಞಾನಿಕ ರಸಕಳೆ ಪರಿಶುಭ್ರವಾಗಿ ಬೆಳಗುವಂತಾಗಲಿ! ಅಷ್ಟೊಂದು ಶಕ್ತಿಯನ್ನು ಪಡೆಯುವ ಶಿಕ್ಷಣಹೊಂದಲು ಸ್ತ್ರೀಯರಿಗೆ ಇದೇ ತಕ್ಕ ಸ್ಥಳ" ಎಂದು ಪ್ರಸನ್ನ ಭಾವದಿಂದ ಹೇಳಿದನು. ಕೇಳಿ ಗೌರಿಯ ಹೃದಯದ ಇದೊಂದು ಶಂಕೆ ಅರಗಿಹೋಯಿತು.

ಒಂದು ವಾರವು ಕಳೆಯುತ್ತಿದ್ದಿತು. ಸುಂದರಿಗೆ ಪತಿಸೇವೆಯನ್ನು ಮನದಣಿಯೆ ಮಾಡುವ ಭಾಗ್ಯವು ಚೆನ್ನಾಗಿ ಲಭಿಸಿತ್ತು. ನಾಳೆ ನಾಡದಿನೊಳಗೆ ಈ ಸೌಭಾಗ್ಯವನ್ನು ಪೋಲೀಸರು ಕಸಿದುಕೊಂಡು ಹೋಗುತ್ತಾರೆ. ಅನಂತರ ಅವಳಿಗೆ ಪತಿಯ ದರ್ಶನವಾದೀತೆ?

ದರ್ಶನವಾದರೂ ಸೇವಾಸೌಭಾಗ್ಯ ಇನ್ನು ದೊರೆಯಲಾರದೆಂದು ಅವಳು ಚೆನ್ನಾಗಿ ಅರಿತಿದ್ದಾಳೆ. ಆ ಸೌಭಾಗ್ಯವನ್ನು ಅವಳು ಇನ್ನೊಬ್ಬಳಿಗೆ ಕೊಡಬೇಕೆಂದು ಸಿದ್ಧಳಾಗಿದ್ದಾಳೆ. ಅದಕ್ಕೊಪ್ಪುವ ಒಂದು

ಪಾತ್ರಕ್ಕೂ ಅವಳು ಕೈ ಹಾಕಿದ್ದಾಳೆ. ಶೀನು ಒಪ್ಪದಿದ್ದರೂ ವಿಧಿಗೆ ತಲೆವಾಗಿಯೇ ತೀರಬೇಕಾದ ಕಾರ್ಯವದು! ಅದೃಷ್ಟವು ಹೇಗಿದೆಯೊ! ಅವಳ ಈ ತ್ಯಾಗವನ್ನು ಕರ್ಣಾಟಕಾಂಬೆಯೇ ವಿಜಯಸಿದ್ಧಿಗೆ ಮುಟ್ಟಿಸ ಬೇಕು ಅದೇನೆಂದು ಅವಳು ಯಾರಿಗೂ ಬಾಯಿತೆರೆದು ಹೇಳಲೇ ಇಲ್ಲ. ಈಗಲೇ ಯಾರಿಗೂ ಹೇಳಬಾರದೆಂದು ನಮ್ಮ ಬಾಯಿಯನ್ನೂ ಬಿಗಿದಿದ್ದಾಳೆ ಸುಂದರಿ!

ಹಿಂದೆ ಶೀನು ಸುಂದರಿಯ ಕೋರಿಕೆಯಂತೆ "ಕಲೆಯ ಕಲ್ಯಾಣ" ಎಂಬೊಂದು ಕಾದಂಬರಿಯ ಹಸ್ತಪ್ರತಿಯನ್ನು ಸುಂದರಿಗೆ ಸಂಪೂರ್ಣ ಅಧಿಕಾರದೊಂದಿಗೆ ಕಳುಹಿಸಿದ್ದನಲ್ಲವೆ? ಅದನ್ನು ಅವಳು ಅದೇ ಮಹಿಳಾಭ್ಯುದಯ ಮಂಡಲಿಯಲ್ಲಿರುವ, ತಮಿಳು—ತೆಲುಗು, ಭಾಷೆಗಳಲ್ಲಿ ನುರಿತ ಅಧ್ಯಾಪಿಕೆಯರೂ, ಉತ್ತಮ ಸಾಹಿತಿಗಳೂ ಆಗಿರುವ, ಮಹಿಳಾಮಣಿಯರಿಂದ ಆ ಎರಡು ಭಾಷೆಗಳಲ್ಲಿಯೂ ಬರೆಯಿಸಿಟ್ಟಿದ್ದಾಳಂತೆ ಮತ್ತು ಈಗ ಹಿಂದಿಯಲ್ಲಿಯೂ ಅದನ್ನು ಬರೆಯಿಸಿದ್ದಾಳಂತೆ ಅವಕಾಶ ಸಿಕ್ಕಿದ ಕೂಡಲೇ ಅವುಗಳ ಮುದ್ರಣ ಕಾರ್ಯವು ಒಟ್ಟಿಗೇ ಸಾಗುವಂತೆ ಏರ್ಪಡಿಸಿಟ್ಟಿದ್ದಾಳಂತೆ. ಈ ರೀತಿಯಾಗಿ ಅವಳ ಪತಿಪರಾಯಣತೆ ನಡೆದಿರುವುದನ್ನು ಕೇಳಿ ಶೀನುವಿನ ಹೃದಯವು ಒಮ್ಮೆಲೆ ನೀರಿನಿಂದ ತುಂಬಿ ಬಂದುದರಲ್ಲಿ ಏನಾಶ್ಚರ್ಯ!

ಶ್ರೀಮಂತ ಸುಂದರಿಯ ಇನ್ನೊಂದು ಉದಾತ್ತ ತ್ಯಾಗವನ್ನು ಕೇಳಿ ಶೀನು ಇನ್ನಷ್ಟು ಮುಗ್ಧನಾದನು. ಗೌರಿಯೇ ಅದನ್ನು ಅವನಿಗೆ ಹೇಳಿದಳು ಯಾರಿಗೂ ಹೇಳಬಾರದೆಂದು ಸುಂದರಿಯ ಒತ್ತಾಯವಿದ್ದರೂ, ಅತ್ತಿಗೆಯ ಆ ದೊಡ್ಡ ಗುಣವನ್ನು ಅಣ್ಣನಿಗೆ ಹೇಳದೆ ಮುಚ್ಚಿಟ್ಟು ಕೊಳ್ಳಲು ಗೌರಿಯಿಂದಾಗಲಿಲ್ಲ ಹೇಳುವಂತೆ ಮಾಡಿದುದು, ಅಂದು ಊರಿನಿಂದ ಗೌರಿಯ ಹೆಸರಿಗೆ ಬಂದಿದ್ದ ಒಂದು ಪತ್ರ ಮಲ್ಲಿಕೆ ಗೌರಿಗೆ ಬರೆದ ಪತ್ರವದು. ಗೌರಿ ಓದಿನೋಡಿ, ಶೀನಣ್ಣನಿಗೆ ಕೊಟ್ಟಳು.



## ೪೩

ಆ ಪತ್ರದಲ್ಲಿ ಹೀಗಿತ್ತು.

"ಪ್ರಿಯ ಗೌರಿ;

ನಮ್ಮ ದುಃಖ ವೃತ್ತಾಂತವನ್ನು ಕೇಳಿ, ನೀನು ಮನಸ್ಸು ಕರಗಿ, ನನ್ನ ತಂದೆಯ ಹೆಸರಿಗೆ ಕಳಿಸಿರುವ ಸುಂದರಿಯ ಹೆಸರಿನ ೨೦೦೦ ರೂಪಾಯಿಯ ಚೆಕ್ಕು ತಲಪಿತು. ಸೌ. ಸುಂದರೀ ಅಕ್ಕನು ಮಾಡಿದ ಇಷ್ಟು ದೊಡ್ಡ ಉಪಕಾರದ ಋಣವನ್ನು ನಾನು ಹೇಗೆ ತೀರಿಸುವೆನೋ ಗೊತ್ತಾಗುವುದಿಲ್ಲ. ನೀನು ತಿಳಿಸಿದ ಸುಂದರಿ ಅಕ್ಕನ ಕೋರಿಕೆಯಂತೆಯೇ ಈ ಚೆಕ್ಕಿನ ವಿಷಯವನ್ನು ರಹಸ್ಯವಾಗಿಟ್ಟುಕೊಂಡಿರಬೇಕೆಂದು ನನ್ನ ತಂದೆಗೂ ಹೇಳಿದ್ದೆ. ನನ್ನ ತಂದೆ ತಾವೇ ಹಣವಾಡಿಕೊಟ್ಟಂತೆ, ಆ ೨೦೦೦ ವನ್ನು ಸರಕಾರಕ್ಕೆ ಕಟ್ಟಿ, ನನ್ನ ಪತಿಯನ್ನು ಬಿಡುಗಡೆ ಮಾಡಿಸಿರುತ್ತಾರೆ. ನನ್ನ ಪತಿಗೆ ಈ ರಹಸ್ಯವು ಗೊತ್ತಿಲ್ಲದ ಕಾರಣ, ನನ್ನ ತಂದೆಗೆ ತುಂಬಾ ಉಪಕಾರ ಹೇಳುತ್ತ, 'ಇದನ್ನು ಬೇಗನೇ ನೀವು ನನಗಾಗಿ ಕೊಟ್ಟ ೨೦೦೦ ದ ಋಣವನ್ನು ಹಿಂದಿರುಗಿಕೊಟ್ಟು ತೀರಿಸುವೆನೆಂ'ದೂ ಹೇಳಿದ್ದನ್ನು ನಾನು ಕೇಳಿದೆ. ಅದಕ್ಕೆ ನನ್ನ ತಂದೆಯೂ, ಸುಮ್ಮನಿದ್ದರು. ಈಗ ನನ್ನ ಪತಿಗೆ ಕೆಲಸವಿಲ್ಲದೆ ಮನೆಯಲ್ಲಿಯೇ ಇದ್ದಾರೆ. ಸ್ವಂತ ವ್ಯಾಪಾರ ಮಾಡಬೇಕೆಂದು ಅವರ ಮನಸ್ಸು. ಆದರೆ ಮೂಲಧನವೇನೂ ಇಲ್ಲದ್ದರಿಂದಲೂ, ನನ್ನ ತಂದೆಗೆ ೨೦೦೦ ಸಾಲ ಕೊಡಲಿಕ್ಕಿರುವುದೆಂಬ ಚಿಂತೆಯಿಂದಲೂ, ಸದ್ಯ ಕೆಲಸ ಹುಡುಕುತ್ತಾ ಇದ್ದಾರೆ.

ಇದರ ಚಿಂತೆಯ ಒಂದು ದೊಡ್ಡ ಭಾಗವನ್ನು ಕಡಮೆ ಮಾಡಬೇಕಾದುದು ನನಗೆ ಕರ್ತವ್ಯವಲ್ಲವೆ? ರಹಸ್ಯವನ್ನು ಬಯಲುಮಾಡಬಾರದೆಂದು ಸುಂದರಿ ಅಕ್ಕನ ಕಟ್ಟಾಜ್ಞೆಯನ್ನು ಪಾಲಿಸಲು ನನ್ನಿಂದಾಗದೆ ಹೋಯಿತು. ಎಷ್ಟು ಒಳ್ಳೆಯ ಗುಣ ಸುಂದರಿ ಅಕ್ಕನದು! ಬಲದ ಕೈಯಲ್ಲಿ ಕೊಟ್ಟದ್ದು ಎಡದ ಕೈಗೆ ತಿಳಿಯಬಾರದೆಂಬಂತಹ ದೊಡ್ಡ ಗಂಭೀರ ಮನಸ್ಸಿನವಳು ಅಕ್ಕ! ಅವಳ ಈ ಒಳ್ಳೇತನವು ನನ್ನ ಪತಿಗೆ ತಿಳಿಯಬೇಡವೆ? ಅವಳನ್ನು ಮೊತ್ತಮೊದಲು ಮನೆಯಿಂದ ಹೊರಗೆ ಹಾಕಿದವರು ನನ್ನ ಪತಿಯೇ ಅಲ್ಲವೆ? ಅವಳು ಎಂತಹಳೆಂದು

ಇವರಿಗೆ ಈಗಾದರೂ ತಿಳಿಯಲಿ, ಎಂದುಕೊಂಡು ನಾನು ರಹಸ್ಯವನ್ನು ಅವರಿಗೆ ಹೇಳಿಬಿಟ್ಟೆ.

ಆಶ್ಚರ್ಯದಿಂದ ಮೂಕರೇ ಆಗಿಹೋದರು. ಆ ಮೇಲೆ 'ನಿನ್ನ ತಂದೆ ಕೂಡ ಈ ಗುಟ್ಟು ಹೇಳಲೇ ಇಲ್ಲವಲ್ಲಾ' ಎಂದರು. 'ಹೇಳಕೂಡ ದೆಂದು ನಾನು ಹೇಳಿದ್ದೆ. ನೀವು ಸುಮ್ಮನೆ ಸಾಲದ ಚಿಂತೆ ಹಚ್ಚಿ ಕೊಂಡಿದ್ದೀರಲ್ಲಾ ಅಂತ ಈಗ ನಾನೇ ನಿಮಗೆ ಹೇಳಿದೆ' ಎಂದೆ ನಾನು. 'ಹಾಗಾದರೆ ಈ ಹಣ ಸುಂದರಿಗಾದರೂ ವಾಪಾಸು ಕೊಡಬೇಡವೆ?' ಎಂದು ಕೇಳಿದರು. 'ಅದನ್ನು ವಾಪಾಸು ತೆಗೆದುಕೊಳ್ಳಲಾರಳಂತೆ ನನಗೇ ಬಹುಮಾನವಾಗಿ ಕೊಟ್ಟಿದ್ದಾಳೆ' ಎಂದು ಹೇಳಿ ನಾನು, ನೀನು ಈ ಮೊದಲು ಬರೆದ ಕಾಗದವನ್ನೇ ಅವರಿಗೆ ತೋರಿಸಿದೆ.

ನನ್ನವರ ಹೃದಯವು ಮೆಚ್ಚುಗೆಯಿಂದ ತುಂಬಿಬಂತು. 'ಸುಂದರಿಗೆ ನಾನು ಬಹು ದೊಡ್ಡ ದ್ರೋಹಮಾಡಿದೆ. ಅಣ್ಣನಿಲ್ಲದ ವೇಳೆಯಲ್ಲಿ ಅವಳನ್ನು ಮನೆಯಿಂದ ಹೊರಡಿಸಿದವನೇ ನಾನು. ಅಂಥ ನನ್ನ ಅಪಕಾರವನ್ನು ಮರೆತು, ಇಂತಹ ಗುಟ್ಟಿನ ಉಪಕಾರ ಮಾಡಿದಳೆ! ಅದೇ ಇತ್ತೀಚೆಗೆ ಅಣ್ಣನಿಗೆ ಕೂಡಾ ಅವಳ ಮೇಲೆ ಮನಸ್ಸು ಹರಿಯು ಲಿಕ್ಕೆ ಕಾರಣ' ಎಂದು ಉದ್ಗಾರ ತೆಗೆದುಕೊಂಡರು.

'ಅವಳ ಉಪಕಾರವು ಎರಡು ಸಾವಿರವಲ್ಲ. ಬೆಲೆಯೇ ಇಲ್ಲದ್ದು.' ಎನ್ನುತ್ತಿದ್ದಾರೆ ಅವರು. ನಾನೂ ಹಾಗೆಯೇ ಹೇಳುತ್ತಿದ್ದೇನೆ ನಾಂ! ನನಗೆ 'ಪತಿಭಿಕ್ಷೆ'ಯನ್ನೇ ಕರುಣಿಸಿದ್ದಾಳೆ ಸುಂದರಿ. ಹೀಗೆ ನಾನು ಸತ್ಯ ವನ್ನು ಪತಿಯೊಡನೆ ಹೇಳಬೇಕಾಗಿ ಬಂದುದಕ್ಕೆ ಸುಂದರಿ ಅಕ್ಕನಿಗೆ ಬೇಸರವಾಗದಂತೆ ನೋಡಿಕೊಳ್ಳುವ ಭಾರವು ನಿನ್ನದು.

ನೀನೂ ಭಾವನಿಂದ ಕಾಗದಬಾರದೆ ಬಹಳ ಸಮಯವಾಯಿತು. ಬಳ್ಳಾರಿಯ ಜೈಲಿನಲ್ಲಿ ಸುಖವಾಗಿದ್ದಾರೆಂದು ನಂಬುತ್ತೇನೆ. ನನ್ನ ಪತಿ ಈಗ ಅವರ ಕ್ಷೇಮ ಸಮಾಚಾರವನ್ನು ಕುರಿತೇ ಹಂಬಲಿಸುತ್ತಿದ್ದಾರೆ. ಅವರ ಕುರಿತು ನಿನಗೇನಾದರೂ ಕಾಗದ ಬಂದಿದ್ದರೆ ನನಗೆ ತಿಳಿಸು. ನಾನು ಅವರನ್ನು ನೆನೆಯದ ದಿನವೇ ಇಲ್ಲ. ನೀನು ಎಷ್ಟು ವರ್ಷ ಅಲ್ಲಿ ಕಲಿಯುತ್ತಿ? ಯಾವಾಗ ಊರಿಗೆ ಬರುತ್ತಿ?

ಅತ್ತೆ ಕೂಡಾ ಕ್ಷೇಮ. ನಿನಗೆ ತುಂಬಾ ಆಶೀರ್ವಾದಗಳನ್ನು ಹೇಳಿದ್ದಾರೆ

ಇತಿ ನಿನ್ನ ಅಕ್ಕರೆಯ—ಮಲ್ಲಿಕಾ.

ಶೀನು ತುಂಬುಗಣ್ಣಿನಿಂದ ಸುಂದರಿಯನ್ನು ನೋಡಿ “ ಆಹಾ ! ಸುಂದರಿ ! ನಿನಗೆ ತುಂಬಾ ಕೆಡಕು ಮಾಡಿದ ಕೃಷ್ಣನನ್ನು ಇಷ್ಟೊಂದು ಅಕ್ಕರೆಯಿಂದ ವಿಚಾರಿಸಿ, ಇಷ್ಟು ದೊಡ್ಡ ಗುಪ್ತ ಸಹಾಯಮಾಡಿದ ನಿನ್ನ ಋಣವನ್ನು ನಾವು ಹೇಗೆ ತೀರಿಸುವೆವೋ!” ಎಂದನು

“ನೀವು ಹಾಗೆಲ್ಲ ಹೇಳಬೇಡಿ ನನಗೆ ನಿಮ್ಮ ಹೊರತು ಬೇರೆ ಯಾರಿದ್ದಾರೆ? ನೀವು ನನ್ನ ಪತಿ; ಇಹಪರ ಪತಿ ! ನನ್ನ ಸರ್ವಸ್ವಕ್ಕೂ ನೀವೇ ಅಧಿಕಾರಿಗಳು ! ಅದ್ದರಿಂದ ಇದಕ್ಕಾಗಿ ನೀವು ಋಣಿಗಳೆಂದು ಹೇಳಬಾರದು ” ಎಂದಳು.

ಹೀಗೆ ಒಂದು ವಾರವು ಆನಂದದಿಂದ ಕಳೆಯಿತು. ಡಾಕ್ಟರರು ಇವರನ್ನು ಸಾಗಿಸಬಹುದೆಂದು ಅಭಿಪ್ರಾಯಪಿತ್ತರು.

ಪೋಲೀಸು ವ್ಯಾನೊಂದು ಮಹಿಳಾಭ್ಯುದಯ ಮಂಡಲಿಯ ವಠಾರ ದೊಳಗೆ ಹೊಕ್ಕಿತು. ಶೀನೂ ಗೋಪಾಲರು ಪೋಲೀಸರ ವಶರಾಗಿ ವ್ಯಾನಿನೊಳಗೆ ಸೇರಿದರು ಕಟ್ಟಕಡೆಗೆ ಗೋಪಾಲನು ಗೌರಿಗೆ ತುಂಬಾ ಭರವಸೆ ಸಮಾಧಾನಗಳನ್ನು ಹೇಳಿ ಉತ್ಸಾಹಪೂರಿಸಿದ್ದನು. ಇವರಿಬ್ಬರೂ ಅವರನ್ನಗಲಿದಾಗ ಗೌರಿಯು ಕಣ್ಣುತುಂಬಿ ಕೊರಳು ಗದ್ಗದಿಸಿತ್ತು.

ಸುಂದರಿ ಮನವಾರೆ ಶೀನೂವಿನ ಪಾದಧೂಳಿಯನ್ನು ತಲೆಗೇರಿಸಿ ಕೊಂಡಿದ್ದಳು. ಅವಳ ಕೊರಳೂ ಬಿಗಿದಿತ್ತು. ಪೋಲೀಸು ವ್ಯಾನು ಹೊರಡುವಾಗ, ಅದರೊಳಗಿನವರು ಇವರನ್ನೆ ಅರ್ಥಪೂರ್ಣವಾಗಿ ನೋಡಿದರು. ಇವರೂ ಭಾವಪೂರ್ಣವಾಗಿ ನೋಡುತ್ತಿದ್ದರು. ವ್ಯಾನು ಕಣ್ಮರೆಯಾಗುವವರೆಗೂ ನೋಡುತ್ತಿದ್ದರು. ಅನಂತರ ಗೌರಿ ಮೂಲೆ ಸೇರಿ ಬಿಕ್ಕಿ ಬಿಕ್ಕಿ ಅಳತೊಡಗಿಬಿಟ್ಟಳು !

“ಇನ್ನು ಅವರು ಯಾವಾಗ ಬರುವರೊ ! ಬರುವರೋ ಅಥವಾ ಬಾರದೆಯೇ ಹೋಗುವರೋ ! ಅವರ ಗತಿ ಏನಾಗುವುದೋ............” ಎಂದುಕೊಂಡು ಗೌರಿ ತೀರ ಮುಗ್ಧಳಾಗಿ ತುಂಬಾ ಅತ್ತಳು. ಸುಂದರಿ

ಅವಳನ್ನು ಸಮಾಧಾನ ಮಾಡಿದಳು. "ಹುಚ್ಚು ಹುಡುಗಿ! ಹಾಗೇನೂ ಆಗಲಾರದೆ! ಈ ಸ್ವಾತಂತ್ರ್ಯಸಮರದಲ್ಲಿ ಸೇರಿ ದಸ್ತಗಿರಿಯಾದವರು ಇವರಿಬ್ಬರೇ ಅಲ್ಲ; ಸಾವಿರಾರು ಮಂದಿ! ಗೌರೀ! ಇಂಥ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸೇರುವುದೂ, ಅದರಲ್ಲಿ ಸಿಕ್ಕಿಬೀಳುವುದೂ, ಸಾಯುವುದೂ, ಸೋಲುವುದೂ, ಜಯಿಸುವುದೂ ಎಲ್ಲವೂ ಸಾರ್ಥಕ! ಯಶಸ್ಕರ! ಅಂತ ಹರಿಗೆಲ್ಲಾ ದೇವರು ಒಳ್ಳೆಯದೇ ಮಾಡುತ್ತಾನೆಂದು ದೃಢವಾಗಿ ನಂಬೋಣ................" ಎಂದಳು ಧೀರಳಾದ ಸುಂದರಿ.

---

## ೪೭

ಮುಂದೆ ಕೆಲವು ದಿನಗಳ ಮೇಲೆ ಒಂದು ದಿನ "ಮಹಿಳಾಭ್ಯುದಯ ಮಂಡಲಿ"ಯ ಟೆಲಿಫೋನ್‌ನಲ್ಲಿ ಗೌರಿಯನ್ನು ಯಾರೋ ಕರೆಯುತ್ತಿರುವರೆಂಬ ಸುದ್ದಿ ಬಂತು 'ವಸಂತಿಯಲ್ಲದೆ ಮತ್ತಾರಿದ್ದಾರು?' ಎಂದುಕೊಂಡು ಗೌರಿ ಅಲ್ಲಿಗೆ ಹೋಗಿ, 'ರಿಸೀವರನ್ನು' ಕಿವಿಗಿಟ್ಟು ಕೊಂಡು, 'ಯಾರ'ಂದು ವಿಚಾರಿಸಿದಳು.

"ಮಾತಾಡುವುದಾರು ಗೌರಿಯೆ?"

"ಹೌದು"

"ನಾನು ವಸಂತಿ........"

"ವಸಂತಿಯೆ? ಏನಮ್ಮಾ ವಿಶೇಷ?"

"ವಿಶೇಷವಿದೆ. ಗೌರಿ! ನಾನು ಮಹಿಳಾಭ್ಯುದಯ ಮಂಡಲಿಯ ವಿದ್ಯಾರ್ಥಿನಿಯಾಗಿ ಸೇರಬೇಕೆಂದಿದ್ದೇನೆ. ನಾನು ನಿನ್ನ ಬುದ್ಧಿ ಮಾತನ್ನು ಕೇಳದೆ, ಏನೇನೋ ಆಕಾಶಗೋಪುರ ಕಟ್ಟಲಿಕ್ಕೆ ಹೋದೆ. ಅದು ಏನೇನೋ ಆಗಿ ಬಿದ್ದು ಹೋಯಿತು. ತುಂಬಾ ಪಶ್ಚಾತ್ತಾಪದಲ್ಲಿದ್ದೇನೆ ಎಲ್ಲವನ್ನೂ ನಾನು ಅಲ್ಲಿಗೆ ಬಂದು ಹೇಳಿಕೊಳ್ಳುತ್ತೇನೆ ಅಲ್ಲಿಯ ಕ್ರಮ ನಿಯಮಗಳು ಹೇಗೆಂದು ಸ್ವಲ್ಪ ತಿಳಿಸುವಿಯಾ?"

"ಕ್ರಮ— ನಿಯಮಗಳೇನೂ ಕಷ್ಟವಿಲ್ಲ ವಸಂತಿ. ಇಲ್ಲಿ ಕೃಷಿ, ತೋಟಗಾರಿಕೆ, ಗೋಪಾಲನೆ, ಬಾಲಸಂಗೋಪನೆ, ಅನಾಥ ಸೇವೆ ಮೊದಲಾದ ಸೇವಾಭಾಗಗಳೂ ಉಂಟಷ್ಟೆ ! ಇದರಲ್ಲಿಯೂ ಸಾಧ್ಯವಾದಷ್ಟು ಕೆಲಸಮಾಡಲು ಒಪ್ಪಿಕೊಳ್ಳುವ ಹಾಗಿದ್ದರೆ, ಸಂಬಳ ತುಂಬಾ ಕಡಮೆಯಾಗುತ್ತದೆ. ಪಾಠದ ಹೊತ್ತಿಗೆ ಮಾತ್ರವೇ ಬಂದು, ಗೊತ್ತುಮಾಡಿದ ಪಾಠವನ್ನಷ್ಟೇ ಕಲಿಸಿಕೊಂಡು ಹೋಗುವ ಹಾಗಿದ್ದರೆ ತಕ್ಕ ಸಂಬಳ ಕೊಡಬೇಕಾಗುತ್ತದೆ. ಅದು ಹೇಗೂ ನಿನ್ನ ಇಷ್ಟದಂತೆ ಮಾಡಬಹುದು. ಯಾವುದಕ್ಕೂ ನೀನು ನನ್ನ ಜತೆಗೆ ಸೇರಬರುವುದನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಈಗಲೇ ಬರುತ್ತೀಯಾ ? ನಾನಿಲ್ಲಿ ಮ್ಯಾನೇಜರರೊಡನೆ ಕೇಳಿರುತ್ತೇನೆ."

"ಬಹಳ ಒಳ್ಳೆಯದು. ಈಗಲೇ ಬರುತ್ತೇನೆ. ಮಾವನೂ ಬರುತ್ತಾನೆ."

ಗೌರಿ ರಿಸೀವರನ್ನು **ಕೆಳಗಿಟ್ಟು** ಹೋಗಿ ಸುಂದರಿಗೆ ಈ ಸಮಾಚಾರವನ್ನು ತಿಳಿಸಿದಳು. ಅವರಿಬ್ಬರೂ ಇಲ್ಲಿಯ ಅಧಿಕಾರಿಣಿಯೊಡನೆ ಈ ಸಮಾಚಾರವನ್ನು ನಿವೇದಿಸಿದರು. ಸ್ವಲ್ಪ ಹೊತ್ತಿನ ಮೇಲೆ ಗಜಾನನರಾಯರೂ ವಸಂತಿಯು ಕಾರಿನಲ್ಲಿ ಅಲ್ಲಿಗೆ ಬಂದು ಸೇರಿದ್ದಾಯಿತು. ಗೌರಿ ಗೆಳತಿಯ ಕೈಯನ್ನು ಹಿಡಿದು ಅಕ್ಕರೆಯಿಂದ ಸ್ವಾಗತಮಾಡಿದಳು.

ಕಾರ್ಯದರ್ಶಿನಿ ಮೊದಲಾದ ಅಲ್ಲಿಯ ಅಧಿಕಾರಿಗಳ ಮುಂದೆ ವಸಂತಿಯನ್ನು ಕುರಿತು ಗೌರಿ ಹೀಗೆ ಪರಿಚಯಮಾಡಿಕೊಟ್ಟಳು:-- "ಇವಳು ನನ್ನ ಗೆಳತಿ. ಇವಳೂ ನಾನೂ ಒಟ್ಟಿಗೇ ಮಂಗಳೂರಿನ 'ಮಂಜುಳ ಕಲಾನಿಲಯ'ದಲ್ಲಿ ಕಲಿತೆವು. ನಾವಿಬ್ಬರೂ ಇಲ್ಲಿಗೆ ಸೇರಬೇಕೆಂದು ಒಟ್ಟಿಗೇ ಮದರಾಸಿಗೆ ಬಂದೆವು. ಆಗ ನಮ್ಮವರೇ ಆದ ಡೈರೆಕ್ಟರ್ ವರದರಾಯರ ಪ್ರೋತ್ಸಾಹದಿಂದ ನಾವು ಸಿನಿಮಾದಲ್ಲಿ ನಟಿಸುವ ಒಂದು ಸಣ್ಣ ಒಪ್ಪಂದಕ್ಕೆ ಒಪ್ಪಬೇಕಾಯಿತು. ನನ್ನ ಕಂಟ್ರಾಕ್ಟು ಬೇಗನೇ ಮುಗಿದುದರಿಂದ ನಾನು ಕೂಡಲೇ ಬಂದು ಸೇರಿದೆ. ನನ್ನ ಗೆಳತಿಯದು ಈಗ ತಾನೇ ಮುಗಿದಿದೆ................" ಇತ್ಯಾದಿ

ಬಳಿಕ ವಸಂತಿಯನ್ನು ಪ್ರಯೋಗ ಪರೀಕ್ಷೆಮಾಡಿ ಕಲಾಶಾಲೆಗೆ ಸೇರಿಕೊಳ್ಳುವ ಏರ್ಪಾಡಾಯಿತು. ವಸಂತಿಗೆ ಸಂಬಳ ಕೊಟ್ಟು ಕಲಿ

ಯುವ ಶಕ್ತಿ ಇದ್ದರೂ, ಈಗ ಅವಳಲ್ಲಿ ಸೇವಾಬುದ್ಧಿ ಜಾಗ್ರತವಾಗಿತ್ತು. ಅಲ್ಲಿಯೇ ಗೌರಿಯೊಂದಿಗಿದ್ದು ಅವಳು ಮಾಡುವ ಕೆಲಸಗಳನ್ನೆ ತಾನೂ ಮಾಡುವುದಾಗಿ ಹೇಳಿದಳು. ಇದರಿಂದ ಅವಳು ಕೊಡತಕ್ಕ ವೇತನದಲ್ಲಿ ಅರ್ಧಭಾಗ ಕಡಮೆಯಾಗುವಂತಿತ್ತು

ಹೇಳಿದಂತೆ ಮರುದಿನವೇ ಅವಳು ಹಾಸಿಗೆ ಪೆಟ್ಟಿಗೆಗಳೊಂದಿಗೆ ಬಂದು, ವಿದ್ಯಾರ್ಥಿನೀ ಬಿಡದಿಯಲ್ಲಿ ಇಳಿಯಲ್ಪಟ್ಟಳು ಒಂದೇ ದಿನದ ಪರಿಚಯದಿಂದ ಸುಂದರಿಯ ಮೇಲೆಯೂ ಅವಳ ವಿಶ್ವಾಸವು ಗಟ್ಟಿಯಾಗಿ ಕಾಣಿಸಿತು.

ಇಷ್ಟು ವೇಗದಲ್ಲಿ ವಸಂತಿ 'ಮಹಿಳಾಭ್ಯುದಯ ಮಂಡಲಿಗೆ' ಬರುವಂತೆ ಹೇಗಾಯಿತೆಂದು ಗೌರಿಗೆ ತುಂಬಾ ಆಶ್ಚರ್ಯವಾಗಿತ್ತು. ಮದನನಿಗೂ ಅವಳಿಗೂ ಇರುವ ಸಂಬಂಧವನ್ನು ವಸಂತಿಯೇ ಅವಳ ಮುಂದೆ ಕೊಂಚ ಹೇಳಿದ್ದಳಲ್ಲವೆ? ಮತ್ತೇನಾಯಿತೋ, ಅವಳ ಪಶ್ಚಾತ್ತಾಪಕ್ಕೆ ಕಾರಣವೇನೊ? ಇದನ್ನು ತಿಳಿಯಬೇಕೆಂದು ಗೌರಿಗೆ ಆತುರವಿದ್ದರೂ, ಕೇಳಿದರೆ ವಸಂತಿಗೆ ಕಷ್ಟವಾದೀತೇನೋ ಎಂದುಕೊಂಡು ಗೌರಿ ಕೇಳಲಿಲ್ಲ. ಆದರೆ ವಸಂತಿಗೆ ತನ್ನ ಹೃದಯದ ತಾಪವನ್ನು ಗೌರಿಯೊಡನೆ ಹೇಳಿಕೊಳ್ಳದೆ ಸಮಾಧಾನವೆನಿಸಲಿಲ್ಲ. ಏಕಾಂತದಲ್ಲಿ ವಸಂತಿ ಗೌರಿಯೊಡನೆ, ಏನೂ ಮುಚ್ಚುಮರೆಯಿಲ್ಲದೆ ಎಲ್ಲವನ್ನೂ ಹೇಳಲಾರಂಭಿಸಿದಳು

"ಗೆಳತಿ, ಗೌರಿ, ನಿನ್ನ ಹಾಗೂ ಶ್ರೀನಣ್ಣನ ಬುದ್ಧಿಮಾತುಗಳನ್ನು ದುರ್ಲಕ್ಷಿಸಿ ನಾನು ಕೆಟ್ಟೆ ನನ್ನ ತಂದೆ ನನ್ನ ದಾರಿಯನ್ನು ಖಂಡಿಸಿ ಕಾಗದ ಬರೆಯಲಿಲ್ಲ ಇಲ್ಲಿ ಯಾವನೂ ಏನೂ ಅಭ್ಯಂತರ ಹೇಳಲಿಲ್ಲ. ಆ ವರದರಾಯನ ನ್ಯಾಯನೀತಿ ಲೇಪನವಾದ ಮಾತುಗಳು ಅಷ್ಟು ಮೋಹಕವಿದ್ದುವು ಸಿನಿಮಾದಲ್ಲಿ ಮುಖ್ಯ ನಟಿಯಾಗಿ, ಧ್ರುವತಾರೆಯನ್ನಾಗಿಸುವೆನೆಂದು ಆತನು ಭರವಸೆ ಇತ್ತನು ಅದನ್ನೆಲ್ಲ ನಂಬಿ ನಾನು ಅವನ ಬಲೆಗೆ ಬಿದ್ದೆ ಗೌರೀ! ಸತ್ಯವಾಗಿ ಹೇಳುತ್ತೇನೆ. ಹಂಪೆಯಲ್ಲಿಯೇ ನಾನು ಅವನನ್ನು ಮೋಹಿಸಿದ್ದೆ. ಅದುವರೆಗೆ ಮೋಹವೆಂದರೇನೆಂದೇ ಅರಿಯದಿದ್ದ ನಾನು, ಅಂದು ಮೋಹಪರವಶಳಾಗಿ ಹೋದೆ ಅವನ ಪ್ರೋತ್ಸಾಹದಿಂದ ಸಿನಿಮಾ ಸೇರಿ ಹೆಸರು—ಹಣಗಳನ್ನು ತುಂಬಾ

ವಾಗಿ ಗಳಿಸುವೆನೆಂದು, ನನ್ನ ತಂದೆ ಒಪ್ಪುವ ಹಾಗೆ ಕಾಗದ ಬರೆದೆ. 'ಮಾನವತಿ'ಯಲ್ಲಿ ನಾನೂ ಒಂದು ಪಾತ್ರವಾದುದು ನನಗೆ ತುಂಬಾ ತೃಪ್ತಿಯನ್ನುಂಟು ಮಾಡಿತು

ಗೌರಿ ! ಮನಸ್ಸು ತೆರೆದೇ ನಿನ್ನೊಡನೆ ಹೇಳುತ್ತೇನೆ ವರದನೂ ನಾನೂ ಎಷ್ಟೋ ಬಾರಿ ಏಕಾಂತದಲ್ಲಿ ಸಂಧಿಸಿದ್ದೆವು 'ನೀವಿನ್ನೂ ಮದುವೆ ಮಾಡಿಕೊಂಡಿಲ್ಲವೇಕೆ ? ಎಂದು ನಾನು ಕೇಳಿದೆ. 'ನಿನ್ನಂತಹ ಕುಲೀನ ವಧು ಸಿಕ್ಕಲಿಲ್ಲ.' ಎಂದು ನುಡಿದನು. ಅವನನ್ನು ಮದುವೆಯಾಗಲು ನನ್ನ ಸಮ್ಮತಿಯನ್ನು ಕೇಳಿದನು ನಾನೂ ನನ್ನ ಹೃದಯವನ್ನು ತೆರೆದು ಅವನಿಗೆ ತಿಳಿಸಿದೆ. ಅವನೂ ಮೆಚ್ಚಿದ ಅವನ ಆತುರವು ನನ್ನನ್ನು ನೀತಿಯ ಎಲ್ಲೆಯಿಂದಲೂ ದಾಟಿಸಿ ಬಿಟ್ಟಿತು ! ಹೆಚ್ಚೇನು ಹೇಳಲಿ ಗೌರಿ ? ದುಡುಕಿದೆ ಮನಸ್ಸನ್ನೂ ಮೈಯನ್ನೂ ಅವನಿಗೆ ಬಲಿ ಕೊಟ್ಟುಬಿಟ್ಟೆ ಅವನನ್ನು ಪೂರ್ಣ ನಂಬಿದ್ದ ನಾನು, ತಂದೆಗೆ ಕಾಗದ ಬರೆದು ಮಂಗಳ ಕಾರ್ಯವನ್ನು ಮುಗಿಸಬೇಕು, ಎಂಬಷ್ಟು ಉತ್ಸಾಹ ತಾಳಿದ್ದೆ. ಅದಕ್ಕೆ ಅವನು 'ನೀನು ಬರೆಯುವುದು ಸರಿಯಲ್ಲ; ನಾನೇ ನಿನ್ನ ಹಿರಿಯರಿಗೆ ಬರೆದು ನಿನ್ನನ್ನು ಕೇಳುತ್ತೇನೆ' ಎಂದು ಭರವಸೆ ಕೊಟ್ಟಿದ್ದ

ಗೌರಿ ! ಈ ಸಂದರ್ಭದಲ್ಲಿಯೇ ಅವನು ನಿನ್ನನ್ನು ಅಡಗಿಸಿಟ್ಟಿರುವ ಸಂಗತಿ ನನಗೆ ತಿಳಿದದ್ದು. ನಾನು ನಿನ್ನನ್ನು ಅಲ್ಲಿಂದ ಜಾರಿಸಿದ ಮೇಲೆ, ಅವನು ನನ್ನನ್ನು ಉಪಾಯದಿಂದ ಸಮಾಧಾನಪಡಿಸಿ, ಈವರೆಗೂ ಕಾಲ ದೂಡಿಕೊಂಡು ಬಂದ. 'ಮಾನವತಿ' ಚಿತ್ರಪಟವು ಪೂರ್ಣ ತಯಾರಾದ ಮೇಲೆ ಮದುವೆ ಮಾಡಿಕೊಳ್ಳೋಣ' ಎಂದು ಅವನು ಹೇಳಿಟ್ಟ ಗಡುವೂ ದಾಟಿಹೋಯಿತು.

ಮೊನ್ನೆ ನಾನು ಅವನೊಡನೆ ಖಂಡಿತವಾಗಿಯೇ ಕೇಳಿದೆ 'ಎಷ್ಟು ಕಾಲ ಈ ಗುಟ್ಟು ? ಇದರಿಂದ ವಿಪರೀತ ಫಲಪ್ರಾಪ್ತಿಯಾದರೆ ಯಾರು ಹೊಣೆ ? ಬೇಗನೇ ನಡೆಯಬೇಕು ನಮ್ಮ ಮದುವೆ' ಎಂದು ಒತ್ತಾಯಪಡಿಸಿದೆ. 'ಹಾಗೇನಾಯಿತು?' ಎಂದು ಕೇಳಿದ. 'ಆಗುವಂಥಾದ್ದೇ ಆಗಿದೆ. ಇನ್ನು ತಡಮಾಡಲು ಸಾಧ್ಯವೇ ಇಲ್ಲ' ಎಂದು ನಾನು ಸುಳ್ಳೇ ಹೇಳಿದೆ.

ಆಗ ತಾನೇ ಆ ಧೂರ್ತನ ನಿಜಸ್ವರೂಪಹೊರಗಾಯಿತು. 'ನಿನ್ನನ್ನು ಮದುವೆ ಮಾಡಿಕೊಳ್ಳುತ್ತಿದ್ದೆನಾದರೆ ಎಂದೋ ಮಾಡಿಕೊಂಡಿರುತ್ತಿದ್ದೆ. ನೀನು ಯಾವಾಗ ಗೌರಿಯನ್ನು ಜಾರಿಸಿದೆಯೋ ಅಂದೇ ನನ್ನ ಮನಸ್ಸು ಮುರಿಯಿತು. ಹೋಗು' ಎಂದು ಬಿಟ್ಟ ಖಂಡಿತ ಸ್ವರದಿಂದ.

ಬೆಪ್ಪುಬೆರಗಾದೆ. 'ಏನು? ನಿಜವಾಗಿಯೂ ಗೌರಿಯನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದಿರಾ?' ಎಂದು ಕೇಳಿದೆ 'ಹೌದು' ಎಂದ. 'ಹಾಗಾದರೆ ನನಗೆ ಕೊಟ್ಟ ಮಾತಿನ ಅರ್ಥವೇನು?' ಎಂದು ನಾನು ಬಿಡದೆ ಕೇಳಿದೆ ನಿರಾಶೆಯಿಂದ ನನಗೊಂದು ಆವೇಶವೇ ಬಂದು ಬಿಟ್ಟಿತ್ತು. 'ಅರ್ಥವೇ? ನಿನ್ನನ್ನೂ ಗೌರಿಯನ್ನೂ, ಇಬ್ಬರನ್ನೂ ಮದುವೆ ಮಾಡಿಕೊಳ್ಳಬೇಕೆಂದಿದ್ದೇನೆಂದೇ ಅದರ ಅರ್ಥ. ಮೊದಲೇ ನಿಮ್ಮೊಳಗೆ ಸವತಿಮತ್ಸರವು ಬರಬಾರದೆಂದೇ ಅವಳನ್ನು ನಿನಗೆ ಗೊತ್ತಾಗದ ಹಾಗೆ ಇಟ್ಟಿದ್ದೆ ನೀನು ಮತ್ಸರದಲ್ಲಿಯೂ ಬಹಳ ಕೆಟ್ಟ ಮತ್ಸರವುಳ್ಳವಳು. ನಿನ್ನ ಸಹವಾಸ ನನಗಿನ್ನು ಬೇಡ ಸಾಕು" ಎಂದು ಸ್ಪಷ್ಟವಾಗಿ ಹೇಳಿ ಬಿಟ್ಟನಾ ಪಾಪಿ.

ಅವನನ್ನು ಕೊಲೆ ಮಾಡಿಬಿಡಬೇಕೆಂಬಷ್ಟು ಕೋಪ ಬಂತು ನನಗೆ. ಏನು ಮಾಡಲಿ? ದುಡುಕಿ ಹೊಂಡಕ್ಕೆ ಬಿದ್ದದ್ದು ನನ್ನದೇ ತಪ್ಪು. ಅವನು ಹೇಳಿದಂತೆ ನಾನು ಮತ್ಸರಗ್ರಸ್ತೆಯೂ ಹೌದು! ಏನು ಮಾಡಲಿ? ಹೆಚ್ಚು ಗಲಾಟೆ ಮಾಡಿದರೆ ನನ್ನ ಮಾನವಲ್ಲವೇ ಸೂರೆ ಹೋಗುವುದು? ಮನಸ್ಸಿನಿಂದಲೇ ಅವನನ್ನು ಶಪಿಸುತ್ತಾ ಬಂದುಬಿಟ್ಟೆ.

ಆ ಚಾಂಡಾಲ ನನ್ನನ್ನು ಅಷ್ಟರಿಂದಲೇ ಬಿಟ್ಟನೆಂದು ತಿಳಿದಿಯಾ ಗೌರಿ? ಮರುದಿನ ಇನ್ನೊಬ್ಬ ಸಿನಿಮಾ ಉದ್ಯೋಗಿ,— ಅವನನ್ನೂ ನಾನು ಆ ಸ್ಟೂಡಿಯೋದಲ್ಲಿ ಕಂಡಿದ್ದೆ, ವರದನ ಗೆಳೆಯನಂತಿದ್ದ, ಅವನು ನನ್ನನ್ನು ವಿಚಾರಿಸಿಕೊಂಡು ಬಂದು,— 'ನನ್ನನ್ನು ವರದರಾಯರೇ ನಿಮ್ಮನ್ನು ಶಿಫಾರಸುಮಾಡಿ ಕಳಿಸಿದ್ದಾರೆ ನೀವು ಮಾನವತಿಯಲ್ಲಿ ಅತ್ಯುತ್ತಮವಾಗಿ ನಟಿಸಿರುವುದನ್ನು ನಾನು ನೋಡಿದ್ದೇನೆ. ಈಗ ನಾನು ತಯಾರಿಸುವ ಒಂದು ಹೊಸ ಚಿತ್ರಕ್ಕೆ ಮುಖ್ಯ ನಾಯಕಿಯಾಗಿ ನಿಮ್ಮನ್ನು ಆರಿಸಿದ್ದೇನೆ. ಒಪ್ಪಂದ ಮಾಡೋಣವೆ?' ಎಂದು ಸಿಹಿಯಾಗಿ ಕೇಳಿದ. ಅವನು ಬೇರೆ ಕಂಪೆನಿಯವನಂತೆ. 'ಇಲ್ಲ ಇಲ್ಲ! ಇನ್ನು

ಮೇಲೆ ನಾನು ಯಾವ ಸಿನೆಮಾದಲ್ಲಿಯೂ ನಟಿಸುವುದಿಲ್ಲ. ತುಂಬ ಥ್ಯಾಂಕ್ಸ್. ಹೋಗಿಬನ್ನಿ' ಎಂದು ಹೇಳಿ ಅವನನ್ನು ಕಳುಹಿಸಿಬಿಟ್ಟೆ.

ಕೇಳಿದಿಯಾ ಗೌರಿ ನನ್ನ ದುರಂತ ಕಥೆಯನ್ನು ? ಇದರೊಳಗೆ ಅಡಗಿರುವ ದಾರುಣರಹಸ್ಯವು ನನ್ನ-ಅವನ ಈಗ ನಿನ್ನ ಹೊರತು ಬೇರೆ ಯಾರಿಗೂ ಗೊತ್ತಿಲ್ಲ. ನಿನಗೆ ಅವನ ಮತ್ತು ನನ್ನ ಹೆಚ್ಚಿನ ಕತೆಗೊತ್ತಿ ರುವುದರಿಂದಲೇ, ನಿನ್ನೊಡನೆ ಎಲ್ಲವನ್ನೂ ಮನಬಿಚ್ಚಿ ಹೇಳಿ ನನ್ನ ಹೃದಯವನ್ನು ಸ್ವಲ್ಪ ಹಗುರುಮಾಡಿಕೊಂಡೆ ಇಂಥಾ ನಾನು ಇನ್ನು ಮೇಲೆ ಇನ್ನೊಬ್ಬನ ಮಡದಿಯಾಗಲಾರೆ ಗೌರಿ. ನಿನ್ನೆ ನಾನು ತಂದೆಗೂ ಕಾಗದ ಬರೆದು ಹಾಕಿದೆ. 'ಸಿನಿಮಾದಲ್ಲಿ ನಾನು ನಟಿಸಬೇಕಾದರೆ ಇನ್ನೂ ನಾನು ಕಲಿಯಬೇಕಾದುದು ತುಂಬಾ ಇದೆ ಮಾನವತಿ ಎಂಬ ಒಂದು ಚಿತ್ರದಲ್ಲಿ ನನ್ನ ಒಪ್ಪಂದದ ಭಾಗ ಮುಗಿಯಿತು ಇನ್ನು ನಾನು ಮಹಿಳಾಭ್ಯುದಯ ಮಂಡಲಿಗೇ ಸೇರಿ ಕಲಿಯಬೇಕೆಂದಿದ್ದೇನೆ. ಡೈರೆಕ್ಟರ್ ವರದರಾಯರು ನನ್ನ ಭವಿಷ್ಯಕ್ಕೆ ತುಂಬ ಭರವಸೆಕೊಟ್ಟಿದ್ದಾರೆ.' ಎಂದು ಅಪಾರ್ಥಕ್ಕೆ ಎಡೆಯಾಗದಂತೆಯೇ ಬರೆದಿದ್ದೆ. ನನ್ನ ಮಾವನಿಗೂ ಹಾಗೆಯೇ ಹೇಳಿದೆ ಅವರೂ 'ನಿನ್ನಿಷ್ಟದಂತೆಯೇ ಮಾಡಮ್ಮ' ಎಂದು ನನ್ನನ್ನು ಇಲ್ಲಿ ಬಿಟ್ಟು ಹೋದರಷ್ಟೆ ?

ಇನ್ನು ನಾನು ನಿರ್ಮಲ ಮನಸ್ಸಿನಿಂದ, ದೃಢಚಿತ್ತದಿಂದ, ಪೂಜ್ಯ ಭಾವನೆಯಿಂದ ಕಲೆಯನ್ನೆ ಆರಾಧಿಸಬೇಕೆಂದಿದ್ದೇನೆ. ಈ ನನ್ನ ಹಾಳು ದೇಹವು ಕಲೋಪಾಸನೆಗೇ ಮೀಸಲು ! ಹೀಗಾದರೂ ನನ್ನ ಜನ್ಮವು ಸಾರ್ಥಕವಾದೀತೇ ಗೌರಿ?" ಎಂದು ವಸಂತಿ ತನ್ನ ಅಲ್ಪಕಾಲದ ಕತೆಯ ದೀರ್ಘ ವ್ಯಥೆಯನ್ನು ಹೇಳಿ ದೀರ್ಘ ಶ್ವಾಸವನ್ನು ಬಿಟ್ಟಳು

ಗೌರಿ ಏನು ತಾನೇ ಹೇಳಿ ಅವಳನ್ನು ಸಮಾಧಾನಪಡಿಸುವಳು ? ಅವಳ ದುರಂತ ಕಥೆಯನ್ನು ಕೇಳುತ್ತಾ ಹಲವು ಬಾರಿ " ಅಯ್ಯೋ ! ಪಾಪ!" ಎಂದುಕೊಂಡಳು ಬಳಿಕ ಏನೋ ಯೋಚನೆ ಮಾಡುತ್ತ—

" ಕಳೆದು ಹೋದುದಕ್ಕೆ ವ್ಯಸನಪಟ್ಟು ಪ್ರಯೋಜನವಿಲ್ಲ ವಸಂತಿ, ಇಷ್ಟೊಂದರಿಂದಲೇ ನೀನು ಬುದ್ಧಿ ಕಲಿತು, ಸರಿಯಾದ ದಾರಿಗೆ ತಿರುಗಿದಿಯಲ್ಲಾ! ಅದೇ ನಿನ್ನ ಸುಕೃತ ವಿಶೇಷ ಸಾಮಾನ್ಯವಾಗಿ ಅಡ್ಡದಾರಿಗೆ ಬಿದ್ದವರು ಮತ್ತಷ್ಟು ಅಡ್ಡಾದಿಡ್ಡಾಗಿ ಭ್ರಮಿಸುವದನ್ನೆ ನಾವು ಕಾಣು

ತ್ತೇವೆ. ಅಂತಹ ಪ್ರೋತ್ಸಾಹದಿಂದ ನೀನು ಇನ್ನೊಬ್ಬ ಸಿನೆಮಾ ಉದ್ಯೋಗಿಯ ಕೈಯೊಳಗೆ ಬೀಳದೆ ಪಾರಾದೆಯಲ್ಲಾ! 'ಉದ್ಧರೇದಾತ್ಮನಾತ್ಮಾನಂ' ಎಂಬ ಗೀತಾವಾಕ್ಯವನ್ನೇ ನೀನು ಪಾಲಿಸಿದಂತಾಯಿತು. ವಸಂತಿ ಈಗ ನನಗೊಂದು ಯೋಚನೆ ತೋರುತ್ತದೆ; ಹೇಳಲೆ?''

''ಹೇಳು ಅಗತ್ಯವಾಗಿ ಹೇಳು.''

''ನನ್ನ ಅತ್ತಿಗೆ ಇದ್ದಾರಲ್ಲ; ಅವರು ವರದನಿಗೆ ಸ್ವಂತ ತಂಗಿ. ಇವರ ಮೂಲಕವಾಗಿ ವರದರಾಯನಿಗೆ ಬುದ್ಧಿ ಹೇಳಿಸಿದರೆ, ಅವನು ನಿನ್ನನ್ನು ಮದುವೆ ಮಾಡಿಕೊಳ್ಳಲು ಒಪ್ಪಿಯಾನು. ಅಥವಾ ಅತ್ತಿಗೆಯೇ ಅವನನ್ನು ಒಪ್ಪಿಸಿಯಾರು ..........''

''ಬೇಡ ಗೌರಿ, ಇದನ್ನು ಅವರ ಕಿವಿಗೆ ಹಾಕುವುದು ಬೇಡ. ಆತ ಬಹಳ ಕಠಿನಾತ್ಮ ಯಾರು ಏನು ಹೇಳಿದರೂ ಕೇಳುವ ಪಾಪ-ಪುಣ್ಯ ವಿಚಾರದವನಲ್ಲ.''

''ಹಾಗೆ ನಿರಾಶಳಾಗಬೇಡ ವಸಂತಿ ವರದನೂ ಮನುಷ್ಯನು. ಎಲ್ಲಾ ಮನಸ್ಸಿನಲ್ಲಿ ಒಳ್ಳೇತನವೂ--ಕೆಟ್ಟತನವೂ ಸಂಮಿಶ್ರಣವಾಗಿಯೇ ಇದೆ. ವರದನಲ್ಲಿ ಹೆಚ್ಚಾಗಿರುವ ಕೆಟ್ಟತನವನ್ನು ಹೋಗಲಾಡಿಸುವ ಶಕ್ತಿ ಸುಂದರಿ ಅತ್ತಿಗೆಗಿದೆ ಎಂದು ನಾನು ನಂಬುತ್ತೇನೆ ಸುಂದರಿ ಅತ್ತಿಗೆ ಇಂತಹುದರಲ್ಲೆಲ್ಲಾ ಅನುಭವಪಟ್ಟು ಮಾಗಿ ಎದ್ದು ಬಂದವಳು. ಇದನ್ನು ಅವರಿಗೆ ಹೇಳುವುದರಿಂದ ಕೆಡುಕಂತೂ ಖಂಡಿತ ಇಲ್ಲ. ನಿನಗೆ ಇನ್ನು ಹೆಚ್ಚಿನ ಮನಸ್ಸಮಾಧಾನವಾದರೂ ಆದೀತು. ಎಷ್ಟಾದರೂ ಅವನು ಇವರ ಸ್ವಂತ ಅಣ್ಣ. ಮೊದಲು ಇಬ್ಬರೂ ಒಂದೇ ಕಡೆ ಇದ್ದು ಆಕ್ಟುಮಾಡಿದವರು ಒಂದು ವೇಳೆ ಅವನು ಒಪ್ಪದೆ ಹೋದರೂ, ಅವನಿಗೆ ತಕ್ಕಂತೆ ಛೀ ಗೊಡಲಿಕ್ಕಾದರೂ ಸುಂದರಿ ಅತ್ತಿಗೆ ತಕ್ಕವರು. ಆದರೆ ಒಂದು ವೇಳೆ ವರದನು ನಿನ್ನನ್ನು ವಿವಾಹಮಾಡಿಕೊಳ್ಳಲು ಒಪ್ಪಿದರೆ, ನಿನ್ನಿಂದೇನೂ ಆತಂಕವಿಲ್ಲವಷ್ಟೆ?............''

''ಆತಂಕವಿರಲು ಸಾಧ್ಯವಿಲ್ಲ ಗೌರಿ! ಅವನ ಹೊರತು ಇನ್ನಾರಿಗೂ ನಾನು ಈ ಅಪವಿತ್ರ ದೇಹವನ್ನು ಸಮರ್ಪಿಸಲ್ಲು ಸಾಧ್ಯವಿಲ್ಲ.''

''ಹಾಗಾದರೆ ಚಿಂತಿಸಬೇಡ. ದೇವಾನುಗ್ರಹದಿಂದ ಹಾಗಾಗಲೆಂದೇ ನಾನು ಭಾವಿಸುತ್ತೇನೆ.''

ಅನಂತರ ಗೌರಿ ರಹಸ್ಯವಾಗಿ ಈ ದಾರುಣ್ಯ ವೃತ್ತಾಂತವನ್ನು ಸುಂದರಿಗೆ ತಿಳಿಸಿದಳು. ಕೇಳಿ ಸುಂದರಿಗೆ ಬಹಳ ಪರಿತಾಪವಾಯಿತು.

"................ನನ್ನ ಅಣ್ಣ ಇಷ್ಟು ಕೆಟ್ಟ ಮನುಷ್ಯನಾದನೆ? ತಾನು ಮದುವೆಯೇ ಮಾಡಿಕೊಳ್ಳುವುದಿಲ್ಲವೆಂದು ಹಟ ಹಿಡಿದು ಕುಳಿತದ್ದು ಇದಕ್ಕೇ ಏನು ? ಹೆಣ್ಣನ್ನು ಹೀಗೆ ಹಾಳುಮಾಡಬಹುದೆ ? ವಸಂತಿಗೇನಾಗಿದೆ ? ಅವನ ರೂಪಕ್ಕೆ ತಕ್ಕ ಹಾಗೆಯೇ ಇದ್ದಾಳೆ. ನಾನು ಹೋಗಿ ಗುಟ್ಟಿನಲ್ಲಿ ಅವನೊಡನೆ ಮಾತಾಡುವೆನು. ಹೇಗಾದರೂ ಮಾಡಿ ಈ ಮದುವೆಯಾಗುವಂತೆ ಮಾಡುವೆನು. ಇಷ್ಟು ಲಾವಣ್ಯವತಿಯಾದ ಹುಡುಗಿಯನ್ನು ಒರೆಸಿ ಹಾಳುಮಾಡುವವರೂ ಇದ್ದಾರೆಯೆ ? ಅಬ್ಬ ! ಪುರುಷರು ಪುರುಷ ಹೃದಯಿಗಳೇ ಸರಿ !"

---

## ೪೮

'ಪ್ರಕೃತಿ ಕಳೋದ್ಧಾರಕ ಕಂಪೆನಿ'ಯ ಸಿನಿಮಾಗಳಲ್ಲಿ ಕೀರ್ತಿವೆತ್ತ ಸುಂದರಿ, ಆ ಕಂಪೆನಿಯೊಳಗೆ ನಡೆಯುವ ದುರಾಚಾರಗಳನ್ನು ಸೈಸದೆ, ಅದನ್ನು ತ್ಯಜಿಸಿ ಹೋದಮೇಲೆ ಇದೇ ಮೊದಲನೆಯ ಬಾರಿಯಾಗಿ ಪುನಃ ಅಲ್ಲಿಗೆ ಬಂದಿದ್ದಳು.

ವರದನು ತಂಗಿಯನ್ನು ಪ್ರೀತ್ಯಾದರಗಳಿಂದ ಬರಮಾಡಿಕೊಂಡು, ಕ್ಷೇಮಲಾಭಾದಿಗಳನ್ನು ವಿಚಾರಿಸಿದನು ಅನಂತರ— "ನಿಮ್ಮ ಮಹಿಳಾಭ್ಯುದಯ ಮಂಡಲಿಯಲ್ಲಿರುವ ಗೌರಿ ಕ್ಷೇಮವಾಗಿದ್ದಾಳೆಯೆ ? ಅವಳ ಕಳಾಭ್ಯಾಸವು ಚೆನ್ನಾಗಿ ಸಾಗುತ್ತದೆಯೆ ? ಅಹಾಹಾ ! ಗೌರಿಯಂತಹಳನ್ನು ನಾನೆಲ್ಲಿಯೂ ನೋಡಿಲ್ಲ. ನಾಟ್ಯ-ಸಂಗೀತಗಳಿಗಾಗಿಯೇ ಹುಟ್ಟಿದ ದೇವಿಯವಳು. ಒಂದೇ ಒಂದು ಪ್ರಯೋಗದಲ್ಲಿ ಅದೆಷ್ಟು ಪ್ರಶಂಸೆ ಪಡೆದಿರುತ್ತಾಳೆ !................" ಎಂದು ಗೌರಿಯನ್ನು ಬಾಯಿ ತುಂಬಾ ಹೊಗಳತೊಡಗಿ— "ನಾನೇ ಅಲ್ಲಿಗೆ ಬಂದು ಅವಳನ್ನು ವಿಚಾ

ರಿಸಬೇಕೆಂದಿದ್ದೆ'' ಎಂದು ನಿಲ್ಲಿಸಿದನು. ಅವನು ಗೌರಿಯ ಧ್ಯಾನ ದಲ್ಲಿಯೇ ಇದ್ದಂತಿತ್ತು !

ಅದಕ್ಕೆ ಸುಂದರಿ ಯಥಾರ್ಥವಾದ ಉತ್ತರವನ್ನು ಕೊಟ್ಟ ವೇಳೆ ವರದನೆಂದ:— ''ಹೌದು. ಅವಳಿಗೆ ಇನ್ನೂ ಕಲಿಯಬೇಕೆಂಬ ಆಸಕ್ತಿ ತುಂಬಾ ಇದೆ. ಅದಕ್ಕೇ ನಾನು ಅವಳನ್ನು ಇಲ್ಲಿಂದ ಕಳುಹಿಸಿದೆ. ಮುಂದೆ ನಾಟ್ಯಕಲೆಯೂ, ಸಂಗೀತಕಲೆಯೂ ಅವಳಿಂದಲೇ ಬೆಳಗಲಿ ಕ್ಕುಂಟು ಸಿನಿಮಾವು ಅವಳಿಂದಲೇ ಹೊಸ ಬೆಳಕನ್ನು ಕಾಣಬೇಕು ಸುಂದರಿ, ಕಲಿತಾದ ಮೇಲೆ ಅವಳನ್ನು ಮತ್ತೆ ನಮ್ಮ ಕಂಪೆನಿಗೇ ಸೇರು ವಂತೆ ನೀನು ಸಹಾಯಮಾಡಬೇಕು ..............''

''ಏನೋ ನೋಡುವ. ಮೂರು ವರ್ಷ ಕಲಿತು ಮುಗಿಯಲಿ...."

''ಮುಗಿಯಲಿ ನೀನು ಹೇಳಿದರೆ ಅವಳು ಬಂದಾಳು ''

''ಹೇಳುವೆನು. ಅದಕ್ಕೇನು ? ಒಳ್ಳೆಯ ಹುಡುಗಿಯವಳು. ನಿನ್ನನ್ನು ಕುರಿತು ಕೂಡಾ ಅವಳು ತುಂಬಾ ಶ್ಲಾಘನೆಮಾಡಿ ಹೇಳು ತ್ತಾಳೆ. ನೀನು ಅವಳನ್ನು ಸ್ವಂತ ತಂಗಿಯಂತೆ ನೋಡಿದಿಯಂತೆ; ನೀನು ಅವಳನ್ನು ಮಿಲಿಟರೀ ಗಂಡಾಂತರದಿಂದ ತಪ್ಪಿಸಿ ಉಳಿಸಿದ ಉಪಕಾರ ಕ್ಕಾಗಿ ಅವಳು ಎಷ್ಟೋ ಕೃತಜ್ಞಳಾಗಿದ್ದಾಳೆ. ಆ ಕೃತಜ್ಞತೆಯಿಂದಲೇ ನಿನ್ನ ಕೋರಿಕೆಗೆ ಒಪ್ಪಿ ಒಂದು ಸಿನಿಮಾದಲ್ಲಿ ಆಕ್ಟ್ ಕೊಟ್ಟಳಂತೆ ಈ ಫಿಲಿಂ ವಾತಾವರಣದಲ್ಲಿ ತುಂಬಾ ಕೊಳೆಗಳುಂಟು; ವಿಷವುಂಟು ಇದ ರಿಂದ ಕುಲಸ್ತ್ರೀಯರಿಗೆ ಕೆಟ್ಟ ಹೆಸರು ಬರುತ್ತದಲ್ಲವೆ ? ಇದೇ ಅಂಜಿಕೆ ಅವಳಿಗೆ."

ವರದನು ಗೌರಿಯ ಸುಹೃದಯತೆಗೂ, ಕ್ಷಮಾಭಾವನೆಗೂ ತುಂಬಾ ಆಶ್ಚರ್ಯಪಟ್ಟನು. ಕೆಡುಕೆಳಸಿದ ತನ್ನನ್ನು ಎಷ್ಟು ಒಳ್ಳೆಯವನನ್ನಾಗಿ ಚಿತ್ರಿಸಿದ್ದಾಳೆ ! ವರದನು ಮನಸ್ಸಿನಲ್ಲಿಯೇ ನಾಚಿಕೊಂಡನು. ಹೇಳಿದ,

''ಅದನ್ನು ಹೋಗಲಾಡಿಸಲು ಅವಳಂತಹ ಕುಲಸ್ತ್ರೀಯರು ಮುಂದೆ ಬಂದರಲ್ಲವೇ ಸಾಧ್ಯ ? ಅದಕ್ಕಾಗಿಯೇ ನಾನು ಅವಳಿಗೊಂದು ಯೋಚನೆ ಹೇಳಿ ನೋಡಿದೆ; ನನ್ನ ಮುಂದೆ ಒಪ್ಪಲಿಲ್ಲ ಅವಳು. ನೀನು ಹೇಳಿ ನೋಡಿದರೆ ಒಪ್ಪಿಯಾಳು. ಹೇಳಿ ನೋಡುವಿಯಾ ? "

''ಏನದು ?"

“ಮತ್ತೇನಿಲ್ಲ. ಅವಳನ್ನು ನಾನೇ ಮದುವೆ ಮಾಡಿಕೊಂಡು ಬಿಡಬೇಕೆಂದು ಮನಸ್ಸು ಈ ವಿಷಯದಲ್ಲಿ ಮೆಲ್ಲನೆ ಅವಳನ್ನು ಒಪ್ಪಿಸುವ ಭಾರವು ನಿನಗೆ ಸೇರಿದ್ದು. ಇಷ್ಟೊಂದು ಉಪಕಾರ ನೀನು ಮಾಡುವಿಯಾ ? ”

“ಓಹೊ!—” ಮುಗುಳುನಗುತ್ತ ಸುಂದರಿಯೆಂದಳು, “ಆಗುವುದಿಲ್ಲಣ್ಣ ! ”

“ಏಕೆ?”

“ಅವಳಿಗೆ ತಕ್ಕ ವರನನ್ನು ಅವಳೇ ನಿಶ್ಚಯ ಮಾಡಿಕೊಂಡೇ ಇದ್ದಾಳೆ............”

“ಹಾ!........”

“ಅದಕ್ಕೆ ಅವಳ ಅಣ್ಣ ಮೊದಲಾದೆಲ್ಲರ ಒಪ್ಪಿಗೆಯು ಬೆಂಬಲವೂ ಅವಳಿಗೆ ಸಿಕ್ಕಿದೆ. ಇನ್ನು ವಿವಾಹವಾಗುವುದೊಂದೇ ಉಳಿದಿದೆ ”

“ಅಯ್ಯಯ್ಯೋ ! ನನ್ನ ಆಶೆಯ ಗೋಪುರವೆಲ್ಲಾ ಕಳಚಿತೆ ? ಯಾವಾಗ ಇದೆಲ್ಲಾ ಆದುದು?”

“ಬಹಳಕಾಲವಾಯಿತು ನೀನು ಅವಳನ್ನು ಕಾಣುವುದಕ್ಕಿಂತಲೂ ಮೊದಲು. ಅವಳ ಆ ನಿಶ್ಚಿತ ವರನು ಈಗ ಜೈಲಿನಲ್ಲಿದ್ದಾನೆ ದೇಶ ಭಕ್ತ ಗೋಪಾಲನ ಹೆಸರನ್ನು ನೀನು ಕೇಳಿಂಬಹುದಲ್ಲವೆ?”

“ಓ ! ಆ ಉಗ್ರವಾದಿ ಗೋಪಾಲನೆ? ಓಹೊ!”

“ಹೌದಣ್ಣ. ಜಮೀನುದಾರರ ಮಗ ಅವನು. ದೇವರ ದಯೆಯಿಂದ ಬೇಗನೇ ಅವನು ಬಿಡುಗಡೆಯಾಗಿ ಬಂದಾನು ನಂತರ ಗೌರಿಯೊಡನೆ ಅವನ ವಿವಾಹ ನಡೆಯಲಿಕ್ಕಿದೆ ”

“ಹಾಗೇನು ! ಅಯ್ಯೋ ! ಇದು ನನಗೆ ಗೊತ್ತೇ ಇರಲಿಲ್ಲ. ಗೌರಿಯ ನಾಟ್ಯಕಲೆ ನಿಷ್ಪ್ರಯೋಜನವಾದಂತಾಯಿತು. ಅನಾವಶ್ಯಕವಾಗಿ ಅವಳೇಕೆ ಕಲಿಯಬೇಕಿನ್ನು ? ”

“ಕಲೆಯನ್ನು ಕಲೆಯುವುದೇಕೆಂದರೆ ಏನರ್ಥವಣ್ಣ ? ”

“ಅವಳು ವಿವಾಹ ಮಾಡಿಕೊಂಡರೆ, ಅದೂ ಆ ಗೋಪಾಲನಂತಹ ಹೋರಟನನ್ನು ವಿವಾಹಮಾಡಿಕೊಂಡರೆ, ಮತ್ತೆ ಅವಳ ಕಲೆಗಳು ಬೆಳಗಲು ಸಾಧ್ಯವುಂಟೆ ? ”

"ಯಾಕಿಲ್ಲ? ನೀನು ಆ ಗೋಪಾಲನನ್ನು ನೋಡಿ, ಮಾತಾಡಿ ಒಲ್ಲೆಯಾ ? "

"ಇಲ್ಲ ಪತ್ರಿಕೆಯ ಮುಖಾಂತರ ಕೇಳಿದ್ದೇನೆ ಅಷ್ಟೇ"

"ಹಾಗನ್ನು ಮತ್ತೆ ಆತನು ಉಚ್ಚ ದೇಶಭಕ್ತನಿರುವಂತೆಯೇ, ಒಳ್ಳೇ ಕಲಾರಸಿಕನೂ ಇದ್ದಾನೆ ಅವನ ಹೃತ್ಪೂರ್ವಕವಾದ ಒತ್ತಾಯದ ಕೋರಿಕೆಯಂತೆಯೇ, ಗೌರಿ ಕಲೆಯನ್ನು ಅಭ್ಯಾಸಮಾಡುತ್ತಿದ್ದಾಳೆ. ಈಗವಳು ಮಾನವತಿಯಲ್ಲಿ ನಟಿಸಿರುವುದನ್ನು ತಿಳಿದು ಗೋಪಾಲನು ಸಂತೋಷವೇ ಪಟ್ಟಿರುತ್ತಾನೆ."

"ಹಾಗಾದರೆ ನನ್ನ ಕೋರಿಕೆ ವ್ಯರ್ಥ "

"ನೀನೇ ಅವಳನ್ನು ಮದುವೆಮಾಡಿಕೊಳ್ಳಬೇಕೆಂಬ ನಿನ್ನ ಕೋರಿಕೆ ವ್ಯರ್ಥವೇ ಸರಿ. ಆದರೆ ಅವಳಿಂದ ಸಿನಿಮಾ ಕಲೆಯನ್ನು ಬೆಳಗಿಸಬಹುದೆಂಬ ನಿನ್ನ ಕೋರಿಕೆ ಮಾತ್ರ ವ್ಯರ್ಥವಾಗಲಿಕ್ಕಿಲ್ಲ... ........"

"ಅದು ಹೇಗೆ?"

"ಹೇಗೆಂದರೆ, ಗೌರಿ ನಿನ್ನನ್ನು ಒಡಹುಟ್ಟಿದ ಅಣ್ಣನಂತೆಯೇ ತಿಳಿಯುತ್ತಾಳೆ. ನಿನ್ನ ನಟನಾಕೌಶಲವನ್ನು ಯಾವಾಗಲೂ ಶ್ಲಾಘಿಸುತ್ತಿದ್ದಾಳೆ. ಆದರೆ ಅಣ್ಣಾ ಸಿನಿಮಾದಲ್ಲಿ ಸೇರುವ ಕುಲಸ್ತ್ರೀಯರಿಗೆ ಕೆಟ್ಟ ಹೆಸರು ಬರುವುದೆಂಬುದಕ್ಕೆ ನೀನೇ ಪ್ರತ್ಯಕ್ಷ ಉದಾಹರಣೆಯನ್ನು ಸೃಷ್ಟಿಸಿಬಿಟ್ಟಿರುತ್ತಿಯಲ್ಲಾ?............"

"ಅಂದರೆ?"

"ಅಂದರೇನು ? ವಸಂತಿಯೆಂಬ ಗೌರಿಯ ಪ್ರಾಣಸ್ನೇಹಿತೆಯನ್ನು ನೀನು ಸಿನಿಮಾದಲ್ಲಿ ನಟಿಸಲಿಕ್ಕೆ ಹಚ್ಚಿ, ಅವಳ ಲಾವಣ್ಯಕ್ಕೆ ಮೋಹಿಸಿದಿ!............"

"ನಾನೇ?"

"ಹೌದು—ನೀನೇ ! ನಿನ್ನನ್ನೆ ಮದುವೆಮಾಡಿಕೊಳ್ಳುತ್ತೇನೆಂದು ಅವಳಿಗೆ ಭರವಸೆ ಕೊಟ್ಟು ನಂಬಿಸಿ, ಆ ಸಾಧು ಹುಡುಗಿಯನ್ನು ಭಗ್ನಪಡಿಸಿದಿ............"

"ಯಾರಂದರು?"

"ಪ್ರತ್ಯಕ್ಷ ವಸಂತಿಯೋ! ಕಡೆಗೆ ನೀನು ಅವಳನ್ನು ಕಠಿನವಾಗಿ ನಿರಾಕರಿಸಿ ಬಿಟ್ಟುಬಿಟ್ಟೆಯಂತೆ! ಪಾಪ! ಅವಳು ದುಡುಕಿ, ನಿನ್ನ ಮಾಯದ ಬಲೆಗೆ ಬಿದ್ದುದಕ್ಕಾಗಿ ತುಂಬಾ ಪಶ್ಚಾತ್ತಾಪದಿಂದ ಬೇಯು ತ್ತಿದ್ದಾಳೆ! ಹೀಗೆಯೇ ಬಿಟ್ಟರೆ ಅವಳ ಸಂತಾಪದ ಬೇಗೆಯಿಂದ ನಿನ್ನ ಜೀವನವೇ ಸುಟ್ಟುಹೋದೀತು ಅಣ್ಣಾ! ಆದರೂ ಅವಳು ನಿನ್ನ ಮೇಲೆ ಎಷ್ಟು ಶ್ರದ್ಧೆಯಿಟ್ಟಿದ್ದಾಳೆ ಗೊತ್ತೆ?

"ಇದೆಲ್ಲ ಅವಳೇ ನಿನ್ನ ಮುಂದೆ ಹೇಳಿದಳೆ?"

"ನನ್ನ ಮುಂದೆ ಹೇಳುವಳೆ? ಇನ್ನೊಬ್ಬರ ಮುಂದೆ ಹೇಳು ಹಂಥಾದ್ದೇ? ಅವಳ ಆತ್ಮೀಯ ಗೆಳತಿ ಗೌರಿ, ಅವಳೇನೋ ದೊಡ್ಡ ವ್ಯಸನವನ್ನು ಹೃದಯದೊಳಗೆ ಬಚ್ಚಿಟ್ಟುಕೊಂಡಂತೆ ಕಾಣುವ ಅವಳ ಮುಖವನ್ನು ನೋಡಿ, ಒತ್ತಾಯಮಾಡಿ ಕೇಳಿದಳು ಆಗ ಬಾಯಿ ಬಿಟ್ಟು ಹೇಳಿದಳು. ಗೌರಿಯೇ ನನಗೆ ಇದನ್ನು ತಿಳಿಸಿ ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾಳೆ."

"ಯಾಕೆ?"

"ನೀನು ನನ್ನ ಅಣ್ಣನಾದುದರಿಂದ, ಕೇಳಣ್ಣ. ನಿನಗೆ ಸಂಪೂರ್ಣ ವಾಗಿ ತನ್ನ ಹೃದಯವನ್ನು ಸಮರ್ಪಿಸಿದ ವಸಂತಿ, ನಿನ್ನ ಹೊರತು ಅನ್ಯ ನನ್ನು ಮದುವೆಮಾಡಿಕೊಳ್ಳಲಾರೆನೆಂದು ಹೇಳಿಕೊಂಡು ನಿನ್ನನ್ನೆ ನೆನೆನೆನೆದು ಅಳುತ್ತ ಕೊರಗಿಹೋಗುತ್ತಿದ್ದಾಳೆ. ನೀನು ಅವಳನ್ನು ಸಾಮಾನ್ಯ ವೇಶ್ಯೆಯಂತೆ ತಿಳಿದುಕೊಳ್ಳಬಹುದೆ? ಒಳ್ಳೆಯ ಕುಲೀನ ಹುಡುಗಿ ಒಂದು ಸಾಧು ಹುಡುಗಿಯನ್ನು ಆಜನ್ಮ ದುಃಖದಲ್ಲಿ ಬೇಯಿ ಸುವಂತಹ ನಿನ್ನ ಈ ದಾರುಣ್ಯಕೃತಿ ಎಷ್ಟು ದೊಡ್ಡ ಪಾಪವೋ ಯೋಚಿಸಿ ನೋಡಣ್ಣ. ನೀನು ಸಿನಿಮಾವಲ್ಲಿ ನಟಿಸುವ ವೇಶ್ಯೆಯರೊಂದಿಗೆ ಲೋಲಾ ಡುತ್ತ, ಅವಿವಾಹಿತನಾಗಿ ಹೀಗೆಯೇ ಇರಬೇಕೆ? ಆ ವಸಂತಿಯನ್ನೆ ವಿವಾಹವಾಗಿ ಅವಳನ್ನು ಉದ್ಧರಿಸಬಾರದೆ? ನಿನಗೆ ಒಪ್ಪುತಕ್ಕ ರೂಪ ವಂತೆಯಾಗಿಯೂ ಇದ್ದಾಳೆ. ಸಂಗೀತದಲ್ಲಿಯೂ ನಾಟ್ಯದಲ್ಲಿಯೂ ಅಭಿರುಚಿಯುಳ್ಳವಳು. ಏನು ಹೇಳುತ್ತೀಯಣ್ಣ?"

ವರದನು ಏನೋ ಯೋಚನೆ ಮಾಡುತ್ತಿದ್ದನು.

“ಅಣ್ಣಾ! ಗೌರಿ ನಿನ್ನ ಜತೆಯಲ್ಲಿ ನಟಿಸಬೇಕೆಂಬ ಇಚ್ಛೆ ನಿನಗುಂಟೆ?...............”

ವರದನ ಕಣ್ಣು ಪ್ರಕಾಶವಾಯಿತು: “ಇದ್ದರೆ?”

“ಇದ್ದರೆ ನೀನು ಅವಳ ಪ್ರಾಣಸಖಿಯಾದ ವಸಂತಿಯನ್ನು ವಿವಾಹ ಮಾಡಿಕೊಳ್ಳಲೇಬೇಕು ನೀನು ಒಳ್ಳೇ ನಾಟ್ಯಕುಶಲನಿದ್ದೀ, ನಾಟ್ಯ ಪ್ರದರ್ಶಕನಿದ್ದೀ! ನಿನಗೆ ಸರಿಸಮಾನವಾಗಿ ಜತೆಗೊಪ್ಪುವ ನಾಟ್ಯಗಾರಿಣಿ ಗೌರಿ ಎಂಬುದೇನೋ ನಿಜವೇ ನೀನು ಅವಳ ಜತೆಯನ್ನು ಪಡೆಯಬೇಕಾದರೆ, ನಿನ್ನ ದೃಷ್ಟಿಯಲ್ಲಿ ಸೋದರೀಭಾವವು ಮೂಡಿರಬೇಕು. ಸ್ವಹಿತವು ಮಾಯವಾಗಬೇಕು. ವಸಂತಿಯನ್ನು ನೀನು ವಿವಾಹಮಾಡಿಕೊಂಡು, ನಿನ್ನ ಒಳ್ಳೆಯತನಕ್ಕೊಂದು ಸರಿಯಾದ ನಿದರ್ಶನವನ್ನು ಗೌರಿಗೆ ಮಾಡಿಕೊಡಬೇಕು. ಆಗ ತಾನೇ ಅವಳು ನಿನ್ನ ಜತೆಯಲ್ಲಿ ಕಲಾರಾಧನೆಗೆ ಬಂದಾಳು. ಕಲಾರಸಿಕನಾದ ಗೋಪಾಲನೂ ಸಮ್ಮತಿಸಿಯಾನು. ಅಣ್ಣಾ! ನೀನು ಎಲ್ಲಾ ಬಲ್ಲವನು ನಾನೇನು ಹೇಳಲಿ? ಕಲಾರಂಗ ಭೂಮಿಯಲ್ಲಿ ಯಾವಾಗಲೂ ಸಹೋದರ ಭಾವದ ಶುದ್ಧವಾದ ಗಾಳಿಯೇ ಬೀಸಿಕೊಂಡಿರಬೇಕು. ಅದರಲ್ಲಿ ಏನಾದರೂ ಹಾಳು ಮನೋವಿಕಾರದ ವಿಷ ತಗಲಿತೆಂದರೆ, ಕಲೆಯ ದೈವಿಕ ಪಾವಿತ್ರ್ಯತೆಗೆ ಕಳಂಕವಲ್ಲವೇ ಅಣ್ಣಾ?”

ವರದನು ಎಲ್ಲಿಯೋ ನೋಡುತ್ತ, ತಂಗಿ ಹೇಳಿದುದೆಲ್ಲಾ ಕೇಳಿದನು ಗೌರಿಯ ನಟನಾಂಗವು ಅವನ ಕಣ್ಣ ಮುಂದೆ ನರ್ತಿಸಿಕೊಂಡೇ ಇತ್ತು. ಅವಳ ನಟನೆಯ ಜೋಡಿಯನ್ನು ಬಿಡಲು ಅವನಿಗೆ ಮನಸ್ಸಿಲ್ಲ ಅವಳು ಅವನನ್ನಗಲಿ ಜಾರಿಹೋದಂದಿನಿಂದಲೂ, ಅವನ ಮನಸ್ಸಿನ ಸ್ತಿಮಿತವೇ ಕೆಟ್ಟುಹೋಗಿತ್ತು. ಅವಳನ್ನು “ಮಹಿಳಾಭ್ಯುದಯ ಮಂಡಲಿ”ಯಲ್ಲಿ ಕಲಿಯುವುದನ್ನು ಮುಗಿಸಿ ಹೊರಗೆ ಬರುವಾಗ, ಬೇರೆಯಾರಾದರೂ ಅವಳನ್ನು ವಿವಾಹಮಾಡಿಕೊಂಡೋ, ಅಥವಾ ಸಿನೆಮಾಕ್ಕೆ ಕಂಟ್ರಾಕ್ಟು ಒಪ್ಪಂದಮಾಡಿಸಿಕೊಂಡೋ, ಹೋಗಲಿಕ್ಕೆ ಬಿಡದೆ ತನ್ನ ಪಾಲಿಗೇ ಅವಳು ದಕ್ಕಿರುವಂತೆ ಹೇಗೆ ಮಾಡುವುದೆಂದು ಅವನು ಯೋಚನೆ ಮಾಡಿಕೊಂಡೇ ಇದ್ದನು ಅದುವರೆಗೂ. ಈಗ ಗೌರಿಯ ಭವಿಷ್ಯವು ಸ್ಥಿರವಾಗಿ ರೂಪಿಸಲ್ಪಟ್ಟಿರುವುದನ್ನು ತಿಳಿದು, ಒಮ್ಮೆಗೇ ಅವನು ನಿರಾಶನಾದನು.

ಅಂತರ ಸುಂದರಿಯ ಮಾತನ್ನು ಕೇಳುತ್ತಿದ್ದಂತೆ, ಅವನ ಹೃದಯ ತಂತಿ 'ಹೌದು ಹೌದೆಂದು ಮಿಡಿಯತೊಡಗಿತ್ತು. ಹೌದು. ಸೋದರೀಭಾವ ಇದ್ದರೆ, ನಿರಂತರವೂ ಗೌರೀ ನಟೀಮಣಿಯ ಅನುಗ್ರಹವನ್ನು ಪಡೆಯಬಹುದು. ಸಿನಿಮಾ ಕಲೆಯನ್ನೂ ಬೆಳಗಿಸಬಹುದು. ಆದರೊಂದಿಗೆ ಅವನೂ ಜಗತ್ಪ್ರಖ್ಯಾತನಾಗಬಹುದು. ಇದೇ ಅಲ್ಲವೇ ಅವನ ಲಕ್ಷ್ಯ? ಹಾಗಾಗಬೇಕಾದರೆ ಗೌರಿಯ ಗೆಳತಿ ವಸಂತಿಯನ್ನು ಅವನು ಮದುವೆಯಾಗಲೇಬೇಕು.

ಯೋಚನೆಗೆ ಅಂತ್ಯಬಂದಂತೆ ಅವನೊಂದು ಸಣ್ಣ ನಿಟ್ಟುಸಿರನ್ನು ಎಳೆದು— "ಸತ್ಯವಾಗಿಯೇ ಹೇಳುತ್ತೇನೆ ತಂಗಿ, ನನಗೆ ವಿವಾಹಮಾಡಿಕೊಳ್ಳಬೇಕೆಂಬ ಬಯಕೆಯೇ ಇಲ್ಲ. ಗೌರಿ ಅನ್ಯರ ವಶಳಾಗಿ ಹೋಗಬಾರದೆಂದೇ ನಾನು ಅವಳನ್ನು ವಿವಾಹಮಾಡಿಕೊಳ್ಳಬೇಕೆಂದು ಬಯಸಿದ್ದು, ಈಗ ಗೌರಿಗಾಗಿ ವಸಂತಿಯನ್ನು ವಿವಾಹಮಾಡಿಕೊಳ್ಳಲು ಒಪ್ಪಬೇಕಾಯಿತು, ಒಪ್ಪುತ್ತೇನೆ. ಆದರೆ ಗೌರಿ, ಅಣ್ಣನೊಡನೆ ಆಡಲು ಬರುವಂತೆ, ನನ್ನೊಂದಿಗೆ ಆಡಲು ಬರುವುದಾಗಿ ಒಪ್ಪಿಕೊಂಡರೆ ಮಾತ್ರವೇ ಇದು ಸಾಧ್ಯ..........."

"ಆಗಲಣ್ಣಾ ಗೌರಿ ಖಂಡಿತವಾಗಿ ಒಪ್ಪುವಳು. ಅವಳ ಬಾಯಿಯಿಂದಲೇ ಹೇಳಿಸಿದರೆ ನಿನಗೆ ನಂಬುಗೆಯಾದೀತಷ್ಟೆ?"

"ಓ! ಹಾಗಾದರೆ ಸಂದೇಹಕ್ಕೇ ಎಡೆ ಇಲ್ಲ. ಗೌರಿಯ ಗುಣವನ್ನು ನಾನು ಚೆನ್ನಾಗಿ ಬಲ್ಲೆ. ಹೇಳಿದ ಮಾತಿಗೆ ತಪ್ಪುವವಳಲ್ಲ."

ಸುಂದರಿ ಮುಗುಳ್ನಗುತ್ತ— "ಸರಿ. ನಿನ್ನ ಹಾಗಿದ್ದವಳಲ್ಲ ಅಂತನ್ನು. ಒಳ್ಳೇದು ನೀನು ನಾಳೆ ಅಲ್ಲಿಗೆ ಬರುತ್ತೀಯಾ? ಗೌರಿಗೂ ವಸಂತಿಗೂ ಹೇಳಿಟ್ಟಿರುತ್ತೇನೆ"

"ಒಳ್ಳೇದು. ನಾಳೆ ಸಂಜೆಗೆ ನಾನು ಅಲ್ಲಿಗೆ ಬರುತ್ತೇನೆ."

ಹೀಗೆ ಸುಂದರಿಯ ಪೌರೋಹಿತ್ಯವು ನಿರರ್ಥಕವಾಗಲಿಲ್ಲ. ಮರುದಿನ ಹೇಳಿದಂತೆಯೇ ವರದನು ಸರಳಭಾವದಿಂದಲೇ "ಮಹಿಳಾಭ್ಯುದಯ ಮಂಡಲಿ"ಗೆ ಬಂದು ಸುಂದರಿ ಮೊದಲಾದವರನ್ನು ಸಂಧಿಸಿದನು. ಆ ಡೈರೆಕ್ಟರ್ ಮಹಾನುಭಾವನನ್ನು ಗೌರಿ ಕೃತಜ್ಞತಾಭಾವದಿಂದ ಗೌರವಿಸಿ ಮಾತಾಡಿಸಿದಳು. "ನನ್ನಿಂದ ಹಿಂದೆ ನಡೆದ ಅಚಾತುರ್ಯಗಳನ್ನೆಲ್ಲ,

ಮರೆತುಬಿಡುತ್ತೀಯಷ್ಟೆ ತಂಗಿ?" ಎಂದು ಹೃತ್ಪೂರ್ವಕವಾಗಿಯೇ ವರದನು ಕೇಳಿದನು

"ಮರೆತು ಬಿಡುವುದೇನು? ಎಂದೋ ಮರೆತುಬಿಟ್ಟಿದ್ದೇನೆ. ಅಣ್ಣಾ! ಅದನ್ನೆಲ್ಲ ಈಗ ನೀವೇಕೆ ನೆನೆಯಬೇಕು? ಆದರೆ ನಿಜವಾಗಿ ಎಲ್ಲವನ್ನೂ ಮರೆತು ನಿಮ್ಮೊಡನೆ ಸರಿಯಾಗಿ ನಡೆದುಕೊಂಡಿರಬೇಕಾದವಳು ವಸಂತಿ ಏನೇ ವಸಂತಿ! ನಿನಗೇನೂ ಇವರ ಮೇಲೆ ಕೋಪವಿಲ್ಲವಷ್ಟೆ?"

"ದೇವರು ಏನೋ ಕೋಪಿಸಿದರೆಂದು ಭಕ್ತೆಯೂ ಕೋಪಿಸಿದರೆ ಹೇಗೆ?" ಮುಗುಳ್ನಗುತ್ತಾ ವಸಂತಿಯೆಂದಳು.

ವರದನು ಗೌರಿಯನ್ನು ಕುರಿತು,— "ಆದರೆ ಗೌರಿ! ನನಗೆ ನಿನ್ನಿಂದೊಂದು ಅವ್ಯಕ್ತ ವಚನವು ಬೇಕಾಗಿದೆ. ಸುಂದರಿ ನಿನಗೆ ಹೇಳಿಲ್ಲವೆ?"

"ಹೌದು. ಹೇಳಿದ್ದಾಳೆ. ಅಣ್ಣಾ! ಸಂಕ್ಷೇಪವಾಗಿ ನಿಮಗೀಗ ನಾನು ಆ ಬಗೆಯ ವಚನವನ್ನು ಕೊಡಬಲ್ಲೆ. ಸಿನೆಮಾ ಎಂದರೆ ಎಲ್ಲಾ ವಿಧ ಕಲೆಗಳನ್ನೂ ತುಂಬಿಸಿಕೊಳ್ಳುವಂತಹ ಒಂದು ನೆಲೆವೀಡಿದ್ದಂತೆ. ನಾನು ನನ್ನ ಕಲಾರಾಧನೆಯನ್ನು ಅಲ್ಲಿ ನಡೆಸಬೇಕಾದರೆ, ಅಲ್ಲಿ ಪರಿಶುದ್ಧ ಭಾವನೆಯು ಗಾಳಿಬೀಸಿಕೊಂಡಿರಬೇಕು. ಫಿಲಿಂ ಸ್ಟುಡಿಯೋ ಎಂದರೆ ಒಂದು ಕಲೆಯ ದೇವಾಲಯವೆಂದು ಎಲ್ಲರೂ ಭಾವಿಸುವಂತೆ ಮಾಡಬೇಕು. ಹಾಗೆ ಮಾಡಲು ನೀನು ಶಕ್ತನಾಗಿರುತ್ತೀಯಣ್ಣಾ. ನಾವು ಇಲ್ಲಿ ಕಲಿತು ಮುಗಿಸುವ ಅವಧಿಯಲ್ಲಿ, ನೀವು ನಾನು ಹೇಳುವಂತಹ ಮಾರ್ಪಾಟುಗಳನ್ನು ಮಾಡಿದಿರಾದರೆ, ನಾನು ನಿಶ್ಚಯವಾಗಿ ನಿಮ್ಮೊಂದಿಗೆ ನಟಿಸುವೆನು. ನಿಮ್ಮ ಸ್ಟುಡಿಯೋ ಒಂದು ಆದರ್ಶ ಸ್ಟುಡಿಯೋವಾಗಿರಬೇಕೆಂದು ನಾನು ಬಯಸುತ್ತೇನೆ. ಹಾಗಾದರೆ ಅದು 'ನಮ್ಮ ಸ್ಟುಡಿಯೋ' ಎಂದು ನಾನು ಹೇಳಿಯೇನು. ನನ್ನ ಭಾವೀಪತಿಯ ಲಕ್ಷ್ಯವಾದರೂ ಹೀಗೆಯೇ ಇದೆ ಅಣ್ಣಾ! ಆದುದರಿಂದ ಅವರೂ ಇದಕ್ಕೆ ಒಪ್ಪಿ ನನಗೆ ಅನುಜ್ಞೆಕೊಡುವರೆಂದು ನಾನು ಭರವಸೆ ಹೇಳಬಲ್ಲೆ. ಈಗ ನಿಮ್ಮನ್ನು ನಾನು ನಂಬುತ್ತೇನೆ. ನೀವು ನನ್ನ ಗೆಳತಿ ವಸಂತಿಯನ್ನು ವಿವಾಹಮಾಡಿಕೊಳ್ಳಲು ಒಪ್ಪಿದ್ದೇ ನನ್ನ ಈ ನಂಬುಗೆಗೆ ನಿದರ್ಶನವಾಗಿದೆ."

ಗೌರಿಯು ಈ ಮಾತನ್ನು ಕೇಳಿ ವರದನು ತುಂಬ ಸಂತುಷ್ಟನಾದನು.

"ಹಾಗಾದರೆ ಅಣ್ಣಾ!--- ಶುಭಸ್ಯ ಶೀಘ್ರಂ ಅನ್ನುತ್ತಾರಲ್ಲಾ, ಈ ಮದುವೆ ಬೇಗನೆ ಆಗಿ ಹೋಗಲಿ! ಮದುವೆಯಾದ ಮೇಲೂ ವಸಂತಿ ಇಲ್ಲಿ ಕಲಿಯಬಹುದು" ಎಂದು ಸುಂದರಿ ಅವಸರವನ್ನು ವ್ಯಕ್ತಪಡಿಸಿದಳು.

ವರದನು ಸಮ್ಮತಿಸಿದನು. ಸುಂದರಿಯೇ ಈ ವಿವಾಹದ ಮುಂದಾಳತನವನ್ನು ಕೈಗೊಂಡು ಬಿಟ್ಟಳು. ಅವಳು ವಸಂತಿಯ ಮಾವ ಗಜವದನರಾಯರಲ್ಲಿಗೆ ಹೋಗಿ ಈ ವಿವಾಹದ ವಿಷಯವನ್ನು ಬಹಿರಂಗಪಡಿಸಿ ಕಾರ್ಯ ಹೂಡಿದಳು. ವಸಂತಿಯೇ ಮೆಚ್ಚಿ ಈಡೇರುವಂತಹ ವಿವಾಹವಾದುದರಿಂದ ಅವರೂ ಸಂತೋಷಪಟ್ಟರು. ಈ ಕುರಿತು ವಸಂತಿಯ ತಂದೆಗೆ ಕಾಗದ ಬರೆದರು. ವಸಂತಿಯೂ ತನ್ನ ಸಮ್ಮತಿಯ ಕಾಗದವನ್ನು ಅದರೊಂದಿಗಿಟ್ಟಿದ್ದಳು. ಪ್ರೇಮ ವಿವಾಹಕ್ಕೆ ಸಾಧಕಮನೋಭಾವವುಳ್ಳ ಶ್ಯಾಮಸುಂದರರು, ಗಜವದನರಾಯರು ವಿವರಿಸಿದ ವರಯೋಗ್ಯತೆಯನ್ನು ತಿಳಿದು ಕುತೂಹಲಗೊಂಡರು. ಆನಂದಪಟ್ಟರು. ಈ ಮದುವೆ ಗಜವದನರಾಯರಲ್ಲಿಯೇ ನಡೆಯುವುದಾದುದರಿಂದ, ಶ್ಯಾಮಸುಂದರರು, ಪತ್ನೀ ಪುತ್ರ ಪರಿವಾರದೊಂದಿಗೆ ಮದರಾಸಿಗೆ ಹೊರಟು ಬಂದರು.

ಇಟ್ಟ ಮುಹೂರ್ತಕ್ಕೆ ಸರಿಯಾಗಿ ಡೈರೆಕ್ಟರ್ ವರದನ್‌ನ ಮದುವೆ, ವಸಂತಿಯೊಂದಿಗೆ ಬಹು ವಿಜೃಂಭಣೆಯಿಂದ ನೆರವೇರಿತು. ಮದುವೆಯಲ್ಲಿ ಗೌರೀ-ಸುಂದರಿಯರು ಪ್ರಾಮುಖ್ಯವಾದ ಭಾಗಗಳನ್ನು ವಹಿಸಿಕೊಂಡು ಓಡಾಡಿದರು. ನಗರದ ದೊಡ್ಡ ದೊಡ್ಡ ಶ್ರೀಮಂತರಿಗೂ, ಸರಕಾರೀ ಉದ್ಯೋಗಸ್ಥರಿಗೂ ಆಮಂತ್ರಣವಿತ್ತು. ಪತ್ರಿಕೆಗಳಲ್ಲಿ ವಧೂ-ವರರ ಫೋಟೋಗಳೊಂದಿಗೆ ಈ ವಿವಾಹ ವೃತ್ತಾಂತವು ಪ್ರಕಟವಾಯಿತು.

---

## ೪೯

ಇಲ್ಲಿ ಹೀಗೆ ವಿವಾಹದ ಸಂರಂಭಣೆ ನಡೆಯುತ್ತಿದ್ದಾಗ, ಅಲ್ಲಿ—ದೂರ ದಿಲ್ಲಿಯಲ್ಲಿ—ಕೆಂಪು ಕೋಟೆಯ ಸ್ಥಾನದಲ್ಲಿ "ಆಗೋಸ್ತು ಹೋರಾಟದ ಖೈದಿ''ಗಳ ವಿಚಾರಣೆ ನಡೆಯಲಾರಂಭವಾಗಿತ್ತು

ಕೆಲವೇ ದಿನ ಮಾತ್ರ ನಡೆದು ನಿಂತ ಆ ಹೋರಾಟವು "ಆಗೋಸ್ತು ಹೋರಾಟ"ವೆಂದು ಪ್ರಖ್ಯಾತವಾಗಿತ್ತು. ಅಷ್ಟೊಂದು ಚಳವಳಿಯಿಂದಲೇ ಭಾರತದಲ್ಲಿ ನೆಲೆಯೂರಿದ್ದ ಬ್ರಿಟಿಷ್ ಚಕ್ರಾಧಿಪತ್ಯವು ನೆಲೆಸಿದಲ್ಲಿ ಶಿಥಿಲವಾಗಿತ್ತು. ಇನ್ನು ಸುಪರಿಣಾಮವೇ ಸರಿಯೆಂದು ರಾಜಕೀಯ ಧುರೀಣರು ನಂಬುವಷ್ಟು ಬಲವಾಗಿ ನಡೆದಿತ್ತು ಆ ಹೋರಾಟ. ಅದರಲ್ಲಿ ಪಾಲುಗೊಂಡು ಖೈದಿಗಳಾದವರ ವಿಚಾರಣೆ, ಇತಿಹಾಸ ಪ್ರಸಿದ್ಧವೂ, ಭಾರತದ ಕೇಂದ್ರ ಸ್ಥಾನವೂ ಆದ ದಿಲ್ಲೀ ನಗರದ ಕೆಂಪುಕೋಟೆಯಲ್ಲಿ ನಡೆಯಲಾರಂಭಿಸಿತ್ತು ಅಸಮಾನತ್ಯಾಗಿಗಳೂ, ಮಹಾಮೇಧಾವಿಗಳೂ ಆದ ನೆಹ್ರೂ............ ಮೊದಲಾದ ಮಹಾನುಭಾವರು, " ಆಗೋಸ್ತು ಹೋರಾಟ"ದ ತ್ಯಾಗಿಗಳನ್ನು ನಿರಪರಾಧಿಗಳೆಂದು ಬಿಡುಗಡೆಪಡಿಸಲು ನ್ಯಾಯಾಸ್ಥಾನದಲ್ಲಿ ವಾದಸಾಧನೆಗಳನ್ನು ಮಾಡುತ್ತಿದ್ದರು. ಇದರ ವಿವರಣೆಗಳು ಆಗಾಗ ಪತ್ರಿಕೆಗಳಲ್ಲಿ ಬರುತ್ತಿದ್ದುವು. ಗೌರೀ ಸುಂದರಿಯರು, ತಪ್ಪದೆ ಓದಿ ತಿಳಿದುಕೊಳ್ಳುತ್ತಿದ್ದರು ''ಆ ತ್ಯಾಗಿಗಳಿಗೆ ಬಿಡುಗಡೆಯಾಗಲಿ'' ಎಂದು ಸದಾ ದೇವರನ್ನು ಪ್ರಾರ್ಥಿಸುತ್ತಿದ್ದರು

ಆ ವರ್ಷವು ಹೊರಳಿತು ಮರುವರ್ಷವು ಬಂದಿತು. ಅದರಲ್ಲಿಯೂ ಕೆಲವು ತಿಂಗಳುಗಳುರುಳಿದುವು ಕಟ್ಟ ಕಡೆಗೆ 'ಕೆಂಪುಕೋಟೆಯ ತೀರ್ಪು' ನಾಡುನಾಡುಗಳಲ್ಲೆಲ್ಲಾ ಪ್ರತಿಧ್ವನಿಸಿತು. ಆಹಾ! "ಆಗೋಸ್ತು ವೀರ'ರಿಗೆ ಬಿಡುಗಡೆಯಾಗಿತ್ತು.

ಈ ಸಂತೋಷ ವಾರ್ತೆಯನ್ನು ಕೇಳುತ್ತಲೇ ಗೌರೀ ಸುಂದರಿಯರು ಆನಂದ ಪರವಶರಾಗಿ ಹೋದರು. ಸುಂದರಿ ಮಂಡಲಿಯ ಮಕ್ಕಳಿಗೆಲ್ಲಾ ಅಪರೂಪವಾದ ಸಕ್ಕರೆಯನ್ನು ಹಂಚಿದಳು! ಹೌದು. ಆಗ ಸಕ್ಕರೆ ಅತ್ಯಂತ ಸಿಹಿ! ಅದು ಎಲ್ಲರಿಗೂ ಧಾರಾಳವಾಗಿ ಸಿಕ್ಕದಿರುವ ಅಪೂರ್ವ ವಸ್ತು. ಅಂತಹ ದಿವ್ಯ ಸಕ್ಕರೆಯನ್ನು ಮಕ್ಕಳು ತಿಂದು ನಕ್ಕುನಲಿದರು!

ಅಂದಿನ ನೃತ್ಯ ಪಾಠದಲ್ಲಿ ಗೌರಿ ನಲಿದು ತೋರಿದ ‘ ಭರತನಾಟ್ಯವು ’ “ ಅಪೂರ್ವ! ಅದ್ಭುತ!” ಎಂದು ಅವಳ ಶಿಕ್ಷಕರು ಹರ್ಷೋದ್ಗಾರ ತೆಗೆಯುವಷ್ಟು ಸೊಗಸಾಗಿತ್ತು !

ಮುಂದೆ ಕೆಲವು ದಿನಗಳಲ್ಲಿ ಶೀನೂ-ಗೋಪಾಲರ ಪತ್ರವೂ ಇವರಿಗೆ ಸಿಕ್ಕಿ ಇನ್ನಷ್ಟು ಸಂತೋಷವನ್ನುಮಾಡಿತು. “ದೇವರ ದಯೆಯಿಂದ ಮುಖಂಡರ ವಾದ ಸಾಧನೆಗೆ ವಿಜಯವಾಗಿ ನಮಗೆ ಬಿಡುಗಡೆಯಾಯಿತು. ಹೊರಟು ಬರುತ್ತಿದ್ದೇವೆ.” ಎಂದು ಬರೆದಿದ್ದರು

ಸುಂದರಿ ಅಂದು ಮೈಲಾಪುರ, ಪಾರ್ಥಸಾರಥಿ ಮೊದಲಾದ ಮದರಾಸಿನೊಳಗಿನ ಮುಖ್ಯ ಮುಖ್ಯ ದೇವಾಲಯಗಳಲ್ಲಿ, ವಿಶೇಷ ಅರ್ಚನಾಭಿಷೇಕಗಳನ್ನು ಮಾಡಿಸಿದಳು ದೇವರ ಕರುಣಾ ಕಟಾಕ್ಷದ ಬೆಂಬಲ ಇಲ್ಲದಿದ್ದರೆ ಹೀಗೆಲ್ಲಾ ಆದೀತೆ?

ಶೀನು ಬಂಧವಿಮುಕ್ತನಾಗಿ ಹಿಂದಿರುಗಿ ಬರುವಾಗ ಅವನಿಗೊಂದು ಅಪೂರ್ವವಾದ ಕಾಣಿಕೆ ಕಾದಿತ್ತು! ಅವನು ಒಂದಿಷ್ಟು ದೇಶಮಾತೆಯನ್ನು ಕೂಡಾ ಸೇವಿಸಿದ್ದಕ್ಕಾಗಿಯೋ ಎಂಬಂತೆ, ಕನ್ನಡ ಭಾಷಾದೇವಿ ಅವನಿಗೊಪ್ಪಿಸಲು, ಒಂದು ದಿವ್ಯ ಕಾಣಿಕೆಯನ್ನು ಸಿದ್ಧಪಡಿಸಿಟ್ಟಿದ್ದಳು ಕನ್ನಡ ಕುಮಾರಿಯೊಬ್ಬಳು ವರಮಾಲಿಕೆಯನ್ನು ಹಿಡಿದು, ಅವನಿಗಾಗಿ ಕಾದಿದ್ದಳು !

ಇದಕ್ಕೆ ಮೂಲಕಾರಣ ಕರ್ತ್ರಿಣಿಯಾದವಳು ನಮ್ಮ ಸುಂದರಿ!

ಹಿಂದೆ ಶೀನು ದೇಶಸೇವೆಗಿಳಿದು, ಪ್ರಚಾರ ಕಾರ್ಯವನ್ನು ಕೈಗೊಂಡು, ಮಂಗಳೂರಿನಿಂದ ಹೊರಟ ಕಾಲದಲ್ಲಿ ಬಳ್ಳಾರಿಯ “ಕನ್ನಡ ಕಲಾಸಂಘ”ದಿಂದ ಹೊರಡುವ “ಹೊಸ ಬಸಗೆ” ಎಂಬೊಂದು ಪತ್ರಿಕೆಯಲ್ಲಿ ವಿಚಿತ್ರವಾದೊಂದು ಸ್ಪರ್ಧೆ ಪ್ರಕಟನೆ ಪ್ರಕಟವಾಗಿತ್ತು. ಈವರೆಗೂ ಎಂದೂ ಆ ಬಗೆಯ ಪ್ರಕಟನೆ ಪ್ರಕಟವಾಗಿಲ್ಲ ನಮ್ಮ ಸಾಹಿತಿ ಶೀನುವಿನ ಮನೆಯ ವಿಳಾಸಕ್ಕೂ ಆ ಸಂಚಿಕೆ ಬಂದಿತ್ತು. ಅದನ್ನು ಮಲ್ಲಿಕಾ ಓದಿ ನೋಡಿ, “ ಆಹಾ ! ಇದನ್ನು ಶೀನೂ ಭಾವ ಅಗತ್ಯವಾಗಿ ಓದಿ ನೋಡಬೇಕು. ಇದನ್ನು ಅವರಿಗೆ ಕಳುಹಿಸಿರಿ ” ಎಂದು ಕೃಷ್ಣನಿಗೆ ಒತ್ತಾಯಮಾಡಿದ್ದಳು. ಅದಕ್ಕೆ ಕೃಷ್ಣ:— “ ಅಣ್ಣನ ಮನಸ್ಸು ಈಗ ಬದಲಾಗಿ ಹೋಗಿದೆ. ಅವನು ಇದಕ್ಕೆಲ್ಲಾ ಈಗ ತಲೆಕೊಡುವ

ಸ್ಥಿತಿಯಲ್ಲೇ ಇಲ್ಲ. ಎಲ್ಲಿ ಯಾವ ಮೂಲೆಯಲ್ಲಿ ಊರುಸುತ್ತುತ್ತಿದ್ದಾನೋ ಯಾರು ಕಂಡಾರು?" ಎಂದಂದು ಅಲಕ್ಷ್ಯವಾಗಿ, ಆ ಸಂಚಿಕೆಯನ್ನು ಶ್ರೀನುವಿನ ಬೀರುವಿನೊಳಗಿಟ್ಟು ಬಿಟ್ಟಿದ್ದ.

ಆಗಿನ ಸ್ಥಿತಿಯಲ್ಲಿ ಎಣಿಕೆ ನಿಜವೇ ಆಗಿತ್ತು. ಶ್ರೀನು ಅದನ್ನು ನೋಡಿದ್ದರೂ ಅದಕ್ಕೆ ಮನಸ್ಸು ಕೊಡುತ್ತಲೇ ಇರಲಿಲ್ಲ ಆದುದರಿಂದ ನಾವು ಕೂಡ ಆ ವಿಚಿತ್ರ ಪ್ರಕಟನೆಯನ್ನು ನೋಡಿದ್ದರೂ ತಿಳಿಸುವ ಗೊಡವೆಗೆ ಹೋಗಲಿಲ್ಲ ಆದರೆ ಈಗ ನಿಮಗೆ ತಿಳಿಸಬೇಕಾಗಿಯೇ ಬಂದುದರಿಂದ, ಇದೋ ಆ ಹಳೆಯ "ಹೊಸ ಒಸಗೆ"ಯ ಹಾಳೆಯನ್ನು ತೆರೆದ. ನಿಮ್ಮ ಮುಂದಿಡುತ್ತೇವೆ

"ಕಲ್ಯಾಣ ಕಾದಂಬರೀ ಸ್ಪರ್ಧೆ"

"ಬಳ್ಳಾರಿಯ ಕನ್ನಡ ಕಲಾಸಂಘದ ಅಂಗವಾಗಿ ಈ ಸ್ಪರ್ಧೆ ಜರುಗುವುದು.

ಈ ಸ್ಪರ್ಧೆಗೆ ಕಳುಹಿಸತಕ್ಕ ಕಾದಂಬರಿ, ಸಾಮಾಜಿಕ ವಿಷಯವನ್ನೊಳಗೊಂಡ, ಸಾಮಾಜಿಕ ಕನ್ನಡ ಕಾದಂಬರಿಯಾಗಿರಬೇಕು. ೨೦೦ ಪುಟಗಳಿಂದ ೪೦೦ ಪುಟಗಳವರೆಗೂ ಇರಬಹುದು ಈ ಪ್ರಕಟನೆಗಿಂತ ಮೊದಲೇ ಬರೆದಿಟ್ಟುದಾಗಿರಬೇಕು ಕೃತಿಕರ್ತರು ೨೨ ವಯಸ್ಸಿನಿಂದ ೨೮ ವರ್ಷ ವಯಸ್ಸಿನೊಳಗಿನ, ಹಿಂದೂ ಜಾತಿಯ ಕನ್ನಡಿಗ ಯುವಕರಷ್ಟೇ ಭಾಗವಹಿಸತಕ್ಕದ್ದು.

ಇದು ವಿವಾಹ ಸ್ಪರ್ಧೆಯಾದುದರಿಂದ ವಿವಾಹಕ್ಕೆ ಹಕ್ಕುಳ್ಳವರಿಗಷ್ಟೇ ಮೀಸಲಾದ ಸ್ಪರ್ಧೆ.

ಈ ಸ್ಪರ್ಧೆಯಲ್ಲಿ ಉತ್ತಮ ಕಾದಂಬರಿಕಾರರೆಂದು ನಿರ್ಣಯಿಸಲ್ಪಡುವವರಿಗೆ, ಬಳ್ಳಾರಿಯಲ್ಲಿ ನ್ಯಾಯವಾದಿಗಳಾಗಿರುವ ಶ್ರೀ. ವ್ಯಾ. ವೆಂಕೋಬರಾಯರ ಮಗಳು ೨೦ ವಯಸ್ಸಿನ 'ವೀಣಾ' ಎಂದು ಸಂಕೇತಾಂಕಿತದಿಂದ, ಕನ್ನಡನಾಡಿಗೆ ಸುಪರಿಚಿತಳಾದ, ಚಿತ್ರಕಲಾನಿಪುಣೆ 'ವಾಣೀಕುಮಾರಿ' ಎಂಬ ವಧೂಮಣಿಯನ್ನು ವಿವಾಹಮಾಡಿಕೊಳ್ಳಲ್ಪಡುವುದು. ಇದಕ್ಕೆ ಒಪ್ಪಿಗೆಯುಳ್ಳ ವರಕಲಾವಿದ ಸಾಹಿತಿಗಳಷ್ಟೇ ಈ ಸ್ಪರ್ಧೆಗೆ ಭಾಗವಹಿಸತಕ್ಕದ್ದು.

ಈ ಸ್ಪರ್ಧೆಯ ನಿರ್ಣಾಯಕರಾಗಿ, ಮಂಗಳೂರು, ಮೈಸೂರು, ಧಾರವಾಡ ಪ್ರಾಂತಗಳ ಮೂರು ಅನುಭವವೃದ್ಧ ಸಾಹಿತಿಗಳೂ, ಏತತ್ಪ್ರಾಂತಗಳ ಮೂವರು ಗ್ರಾಮನಿವಾಸಿಗಳಾದ ವಿದ್ಯಾಸಮನ್ವಿತ ಮಹಿಳೆಯರೂ, ನಿಯಮಿಸಲ್ಪಟ್ಟಿರುತ್ತಾರೆ ಅವರ ಅಭಿಪ್ರಾಯದ ಮೇರೆಗೆ, ಸಂಘದ ಅಧ್ಯಕ್ಷಿಣಿ, ಶ್ರೀ ಕಮಲಾಬಾಯಿಯವರ ತೀರ್ಪು ಕೊನೆಯದು

ಕಾದಂಬರಿಯ ಹಸ್ತಪತ್ರಿಕೆಯಲ್ಲೆಲ್ಲಿಯೂ ಗ್ರಂಥಕರ್ತರ ಹೆಸರನ್ನು ಬರೆಯಬಾರದು. ಅದನ್ನು ಪ್ರತ್ಯೇಕವಾದ ಕಾಗದದಲ್ಲಿ ಬರೆದಿರತಕ್ಕದ್ದು.

ಒಪ್ಪಿತವಾದ ಕಾದಂಬರಿಯ ಪ್ರಕಟನೆಯ ಅಧಿಕಾರವು ಕಲಾಸಂಘಕ್ಕೆ ಸೇರಿದುದು. ಹಸ್ತಪ್ರತಿಯನ್ನು ೧೯೪೨ ಜುಲೈ ೩೦ ನೇ ತಾರೀಖಿನೊಳಗೆ ಸಂಘಕ್ಕೆ ಸೇರುವಂತೆ ಕಳುಹಿಸಬೇಕು

ಸೋದರಿ ಕಮಲಾಬಾಯಿ
ಕನ್ನಡ ಕಲಾಸಂಘದ ಅಧ್ಯಕ್ಷಿಣಿ
ಬಳ್ಳಾರಿ”

ಇದು ಹೊಚ್ಚ ಹೊಸ ಪ್ರಕಟನೆಯಲ್ಲವೆ? ಆಗ ಪತ್ರಿಕೆಗಳಲ್ಲಿ ಬರುವ ಹೊಸಹೊಸ ಸುದ್ದಿಗಳೆಂದರೆ, ಪೂರಾ ಯುದ್ಧಕ್ಕೆ ಸಂಬಂಧಪಟ್ಟ ಸುದ್ದಿಗಳು ಇರುಳು-ಹಗಲೆಂಬ ಭೇದವಿಲ್ಲದೆ ನಡೆಯುವ ಆ ವಿಲಕ್ಷಣ ಪ್ರಪಂಚ ಯುದ್ಧದಲ್ಲಿ, ಯಾವಾಗ ಯಾವ ಕಾಲಕ್ಕೆ ಯಾವ ಸಮುದ್ರ ಪಡಿಯ ಪಟ್ಟಣವು ಭಸ್ಮವಾಗುವುದೋ, ಎಲ್ಲಿ ಬಾಂಬು ಬಿದ್ದು ಸಿಡಿಯುವುದೋ ಎಂದು ಜನರು ಭೀತೇಕ್ಷಣರಾಗಿ ಗುಂಪುಗೂಡಿ ಪತ್ರಿಕೆಯನ್ನು ನೋಡುತ್ತಿದ್ದರು. ಅದನ್ನು ತಿಳಿಯುವುದರಲ್ಲಿಯೇ ಎಲ್ಲ ಸಾಹಿತಿಗಳ, ನಾನಾಬಗೆಯ ವೃತ್ತಿ-ಪ್ರವೃತ್ತಿಗಳ ಎಲ್ಲ ಜನರ ಲಕ್ಷ್ಯಗಳೂ ಏಕೀಕೃತವಾಗಿ ನೋಡುತ್ತಿದ್ದುವು. ಆ ಎಲ್ಲ ಕೌತುಕ ವಾರ್ತೆಗಳಿಗಿಂತಲೂ ಮೇಲಾದ ಕೌತುಕಜನ್ಯವಾಗಿತ್ತು “ಹೊಸ ಬಸಗೆ”ಯಲ್ಲಿ ಬಂದ ಆ ಪ್ರಕಟನೆ.

ಸುಂದರಿಯೂ ಅದನ್ನು ನೋಡಿದಳು. ಶೀನುವಿನ ನೆನಪು ಅವಳ ಮನಸ್ಸಿಗೆ ಒತ್ತೊತ್ತಿಕೊಂಡು ಬಂದಿತು. ಅವನ ಒಪ್ಪಿಗೆಯಿಲ್ಲದೆಯೇ,

ಗಟ್ಟಿ-ದಿಟ್ಟ ಮನಸ್ಸುಮಾಡಿ, ''ಕಲೆಯ ಕಲ್ಯಾಣ'' ಎಂಬ ಆ ಕಾದಂಬರಿಯನ್ನು ಆ ಸ್ಪರ್ಧೆಗೆ ಕಳುಹಿಸಿಬಿಟ್ಟಿದ್ದಳು

''ಕನ್ನಡ ಕಲಾಸಂಘದ'' ಅಧ್ಯಕ್ಷಿಣಿ ಕಮಲಾಬಾಯಿಯೆಂದರೆ ಬೇರೆ ಯಾರೂ ಅಲ್ಲ; ಸುಂದರಿಯ ತಂದೆಯಾದ ಮುಕುಂದರಾಯರ ದ್ವಿತೀಯ ಪತ್ನಿಯೇ ಅವಳು ಶೀನುವಿನ ಪ್ರಾರಂಭದ ಪ್ರಣಯಿನಿ ಕಮಲೆಯೇ ಅವಳು. ಮುಕುಂದರಾಯರು ಶೀನುವಿಗೆ ದೊಡ್ಡ 'ಅಕ್ಷರ ದ್ರೋಹ' ಮಾಡಿ, ಪಶ್ಚಾತ್ತಾಪದಿಂದ ಸತ್ತುಹೋದ ಮೇಲೆ ಅವರ ಭಾರೀ ಐಸಿರಿಗೆಲ್ಲ ವರದನೇ ಯಜಮಾನನಾದನಷ್ಟೇ? ಪತ್ನಿ ಕಮಲೆಯ ಹೆಸರಿನಲ್ಲಿ ಮುಕುಂದರಾಯರು ೫೦,೦೦೦ ರೂಪಾಯಿಯನ್ನು ಮಾಡಿಟ್ಟಿದ್ದರು.

ವರದನು ಸಿನಿಮಾವೃತ್ತಿಯಲ್ಲಿ ಮುನ್ನಡೆದು ಮದರಾಸಿನಲ್ಲಿಯೇ ತಳವೂರಿಬಿಟ್ಟಿದ್ದ. ಕಮಲೆ ತನ್ನ ಹಣವನ್ನೆಲ್ಲ ಕಲಾಸೇವೆಗೆ ವಿನಿಯೋಗಿಸಲಾಗಿಟ್ಟು, ಅಲ್ಲಿಯ ವಿದ್ವಾಂಸರ ಸಹಾಯದಿಂದ, "ಕನ್ನಡ ಕಲಾಸಂಘ"ವನ್ನು ಸ್ಥಾಪಿಸಿದಳು.

ಅಲ್ಲಿ ಸುಪ್ರಸಿದ್ಧ ದೇಶಭಕ್ತರೂ, ವಕೀಲರೂ ಆದ ವೆಂಕೋಬರಾಯರ ಮನೆಯಲ್ಲಿ, ನಮ್ಮ ಶೀನು ಮೊದಲು ಅಡುಗೆಯ ಕೆಲಸದಲ್ಲಿದ್ದನು ಆ ವೆಂಕೋಬರಾಯರ ಮಗಳೆ ಚಿತ್ರಕಲಾ ನಿಪುಣೆಯಾದ ವೀಣಾ. ಅಲ್ಲಿಯೇ ಇದ್ದ ಶೀನುವಿನ ಸಾಹಿತ್ಯ ವಿಲಾಸಗಳನ್ನು ಕಣ್ಣಾರೆ ಕಂಡು ಕಂಡೋ ಏನೋ, ವೀಣಾಕುಮಾರಿಯ ಮಾನಸದಲ್ಲಿ ಸಾಹಿತ್ಯಶ್ರೀ ಒಂದು ಮುದ್ರೆಯಂತೆ ಒತ್ತಿಹೋಗಿತ್ತು. ಅವಳು ಮುಂದೆ ಮುಂದೆ ಒಳ್ಳೆಯ ವಿದ್ಯಾವತಿಯೂ ಬುದ್ಧಿಮತಿಯೂ ಆದಂತೆ ಆ ಮುದ್ರೆ ವಿಕಸನವಾಗುತ್ತಾ ಹೋಯಿತು. ತಾನು ಮದುವೆಮಾಡಿಕೊಂಡರೆ ಒಳ್ಳೆಯ ಸಾಹಿತಿಯನ್ನೆ ಮದುವೆಮಾಡಿಕೊಳ್ಳಬೇಕೆಂದು ಕನಸು ಕಾಣಲಾರಂಭಿಸಿದಳು ಅದರ ಪರಿಣಾಮವಾಗಿ ಅವಳ ತಂದೆ ಮೊದಲಾದ ಹಿರಿಯರ ಯೋಜನೆಯ ಮೇರೆಗೆ, ಆ ಕಲ್ಯಾಣ ಕಾದಂಬರೀ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು ಆದುದರಿಂದ ವೀಣಾಕುಮಾರಿಯೂ ಶೀನು ಸ್ವಲ್ಪಮಟ್ಟಿಗೆ— ಅಲ್ಲಲ್ಲಿ ತುಂಬಾ ಪರಿಚಿತರೇ ಆಗಿದ್ದರು.

ಇದನ್ನೆಲ್ಲ ಮನದಂದು ನಮ್ಮ ಸುಂದರಿ, ಈ ಸ್ಪರ್ಧೆಯಲ್ಲಿ ಒಂದು ವೇಳೆ ಶೀನುವಿಗೆ ವಿಜಯ ಪ್ರಾಪ್ತಿಯಾದರೆ, ಅವನನ್ನು ಒಪ್ಪಿಸುವು

ದೊಂದು ದೊಡ್ಡ ಕೆಲಸವಲ್ಲವೆಂದು ನಿಶ್ಚಯುಮಾಡಿಕೊಂಡೇ, ಹಾಗೆ ಕುಣಿದುಬಿಟ್ಟಿದ್ದಳು.

"ಹೊಸ ಒಸಗೆ" ಪತ್ರಿಕೆಯಲ್ಲಿ ಕಾದಂಬರೀ ಸ್ಪರ್ಧೆಯ ತೀರ್ಪು ಈ ರೀತಿಯಾಗಿ ದಪ್ಪ ಅಕ್ಷರಗಳಲ್ಲಿ ಮುದ್ರಿತವಾಗಿತ್ತು !

'ಕಲ್ಯಾಣ ಕಾದಂಬರೀ ಸ್ಪರ್ಧೆ'ಯಲ್ಲಿ ಉತ್ತೀರ್ಣಗೊಂಡ ಕಾದಂಬರಿ "ಕಲಿಯ ಕಲ್ಯಾಣ"

ಕೃತಿಕರ್ತರು "ಕನ್ನಡ ಗೆಳೆಯ" (ಕೆ ಶ್ರೀನಿವಾಸರಾಯರು) ಇವರಿಗೆ ವೀಣಾಕುಮಾರಿಯನ್ನು ಪಾಣಿಗ್ರಹಣ ಮಾಡಿಕೊಡಲು ಆನಂದದಿಂದ ನಿರ್ಧರಿಸಲಾಗಿದೆ.

---

# ೫೦

"ಮಹಿಳಾಭ್ಯುದಯ ಮಂಡಲಿ"ಗೂ "ಹೊಸ ಒಸಗೆ" ಪತ್ರಿಕೆ ಬರುತ್ತಿತ್ತು ಈ ಬಾರಿ ಬಂದ ಪತ್ರಿಕೆಯನ್ನು ಬಿಡಿಸಿ ನೋಡಿದ ಗೌರಿ, ಅತಿಶಯವಾದ ಕೌತುಕಾಶ್ಚರ್ಯಾನಂದಗಳಿಂದ ಚೀರ್ದನಿದೆಗೆದಳು.

ನಂಬುವುದೇ ಸಾಧ್ಯವಿಲ್ಲದೆ ಎರಡು ಮೂರು ಬಾರಿ ಅದನ್ನು ಓದಿ ಓದಿ ನೋಡಿದಳು. ಅವಳಿಗೆ ಆ ಸಮಸ್ಯೆಯೇ ಬಗೆಹರಿಯದೆ, ಸುಂದರಿಯ ಬಳಿಗೆ ಓಡಿ, ಆ ವಿಚಿತ್ರ ತೀರ್ಪನ್ನು ತೋರಿಸಿದಳು !

ಆದನ್ನು ಓದಿ ನೋಡಿದ್ದೇ ತಡ; ಸುಂದರಿ ಉಕ್ಕಿ ಬರುವ ಭಾವನೆಗಳನ್ನು ತಾಳಲಾರದೆ ಬಾಯಿಮುಚ್ಚಿ ಕಣ್ಣುಮುಚ್ಚಿ, ಗೌರಿಯನ್ನು ಬಿಗಿಯಾಗಿ ಅಪ್ಪಿಕೊಂಡು ಹಾಗೆಯೇ ಸ್ವಲ್ಪಹೊತ್ತು ನಿಶ್ಚಲಳಾಗಿಬಿಟ್ಟಳು.

ಭಾವಾವೇಗವು ಕಡಮೆಯಾದ ಮೇಲೆ ಗೌರಿ,—"ಅತ್ತಿಗೆ! ನೋಡಿದಿರಾ? ಅಣ್ಣನು ಯಾರಿಗೂ ತಿಳಿಸದೆ ಒಳಗಿಂದೊಳಗೇ ಎಂತಹ ಕೆಲಸ ಮಾಡಿದ್ದಾನೆ? ನಿಮಗೆ ಹೀಗೂ ದ್ರೋಹಮಾಡಬಹುದೇ ಆ ಅಣ್ಣ!...."

ಎನ್ನುವಾಗ ಸುಂದರಿ ತಟ್ಟನೆ ಅವಳ ಬಾಯಿಯನ್ನು ಬಿಗಿದು,—"ಹಾಗೆಲ್ಲ ಹೇಳಬೇಡ ಗೌರಿ. ಇದೊಂದೂ ಅವರಿಗೆ ಗೊತ್ತಿಲ್ಲ. ಸ್ಪರ್ಧೆಗೆ

ಅವರ ಕಾದಂಬರಿಯನ್ನು ಕಳುಹಿಸಿದವಳು ನಾನು. ಫಲಿತಾಂಶವು ಹೊರಟ ಮೇಲೆಯೇ ಈ ರಹಸ್ಯವನ್ನು ಬಯಲುಪಡಿಸೋಣವೆಂದು ನಾನೂ ಯಾರಿಗೂ ಹೇಳಲಿಲ್ಲ ನಾನು ಹೀಗೆ ಮಾಡಿದ್ದಕ್ಕೆ ನನ್ನಮೇಲೆ ಅವರು ಸಿಟ್ಟಾಗುವರೋ ಏನೊ! ಹಾಗೆ ಅವರಿಗೆ ಸಿಟ್ಟು ಬಂದರೆ ನೀನೇ ಹೇಗಾದರೂ ಸಮಾಧಾನ ಮಾಡಬೇಕು ಗೌರಿ.—" ಎಂದಂದು, ಆ ವಿವರವೆಲ್ಲವನ್ನೂ ಗೌರಿಗೆ ವಿಶದೀಕರಿಸಿದಳು.

ಸುಂದರಿಯ ಈ ಬಗೆಯ ತ್ಯಾಗಬುದ್ಧಿಗೆ ಏನು ಹೇಳಬೇಕೆಂದೇ ಗೌರಿಗೇ ತೋರಲಿಲ್ಲ.

"ಹೊಸ ಒಸಗೆ"ಯಲ್ಲಿ ಆ ಸ್ಪರ್ಧೆಯ ವಿವರಣೆ ಹೀಗಿತ್ತು:

"................ಬಟ್ಟು ಬಂದ ಕಾದಂಬರಿಗಳು ಆರು. ವಿವಾಹ ಸ್ಪರ್ಧೆಯಾದುದರಿಂದ ಹೆಚ್ಚು ಪುಸ್ತಕಗಳು ಬರುವಂತಿಲ್ಲವಷ್ಟೆ? ಈ ಆರು ಕಾದಂಬರಿಗಳೂ ಉತ್ತಮವಾಗಿವೆ; ಪ್ರಕಟನೆಗೆ ಯೋಗ್ಯವು ಆಗಿವೆ. ಅವುಗಳಲ್ಲಿ ದೊಡ್ಡ ಲಕ್ಷ್ಯದಿಂದಲೂ, ಉತ್ತಮವಾದ ಶೈಲಿಯಿಂದಲೂ ಪಂಡಿತರಿಗೂ ಪಾಮರರಿಗೂ ರಂಜಕವಾಗುವಂತೆ, ಸುಲಭವಾದ ನಿರಾಡಂಬರವಾದ ತಿಳಿಯಾದ ಭಾಷೆಯಿಂದಲೂ ಸಂಘವು ನಿಯಮಿಸಿದ ಬೇರೆ ಬೇರೆ ಪರೀಕ್ಷಕರ, ಅಡ್ಡಗೆರೆಯೊಂದಾದರೂ ಬೀಳದೆ ಪೂರ್ಣೋತ್ತೀರ್ಣವಾದ ಕೃತಿ "ಕಲೆಯ ಕಲ್ಯಾಣ............"

ಅನಂತರ ಅದೇ ಪತ್ರಿಕೆಯಲ್ಲಿ ಗ್ರಂಥಕರ್ತನ ಸಂಕ್ಷೇಪ ಪರಿಚಯವು ಹೀಗಿತ್ತು:

"................ಇವರು 'ಕನ್ನಡ ಗೆಳೆಯ' ಎಂಬ ಸಂಕೇತ ನಾಮದಿಂದ, ಅಖಿಲ ಕನ್ನಡ ನಾಡಿಗೇ ಪರಿಚಿತರಾಗಿದ್ದಾರೆ 'ಅವ್ಯಕ್ತ ಭೂಜ,' 'ತ್ಯಾಗಿ,' 'ವಿಧಿಯಬಲೆ' ಮುಂತಾದ ಕೃತಿಗಳಿಂದ ಈಗಾಗಲೇ ಕನ್ನಡಿಗರ ಪ್ರೀತಿಗೆ ಪಾತ್ರರಾಗಿದ್ದಾರೆ ಇತ್ತೀಚೆಗೆ ಇವರು ದೇಶಸೇವೆಗೂ ಇಳಿದು, ಆಗೋಸ್ತು ಹೋರಾಟದಲ್ಲಿ ಜೈಲಿನ ಕಾಣಿಕೆಯನ್ನೂ ಪಡೆದು, ಧನ್ಯರಾಗಿದ್ದಾರೆ.

ಪ್ರತಿಭಾವಂತ ಕಲ್ಪನಾವಿಲಾಸಿಗಳಾದ ಇವರ ಈ ಅಪೂರ್ವ ವಿವಾಹವು-ನಿರ್ವಿಘ್ನವಾಗಿ ನೆರವೇರಲೆಂದು ಹಾರೈಸುತ್ತೇವೆ

ಸುಂದರಿ ಕಾದಂಬರಿಯನ್ನು ಕಳುಹಿಸುವಾಗ, ಶೀನುವಿನ ಊರಿನ ವಿಳಾಸವನ್ನೆ ಬರೆದು ಕಳುಹಿಸಿದ್ದಳು. ಸಂಘದಿಂದ ಈ ಸಂಬಂಧವಾದ ಶುಭಪತ್ರವು ಊರಿಗೆ ಹೋಗಿ ಕೃಷ್ಣನಿಗೆ ಸಿಕ್ಕಿತ್ತು. ಕೃಷ್ಣನು ಅದನ್ನು ನೋಡಿ, ಸಂತೋಷವನ್ನೂ ಆಶ್ಚರ್ಯವನ್ನೂ ಒಟ್ಟಿಗೇ ಅನುಭವಿಸಿದನು. ಹಾಗು ಶೀನಣ್ಣನು ಊರಿನಲ್ಲಿಲ್ಲವೆಂದೂ, ಕೆಂಪುಕೋಟೆಯ ವಿಚಾರಣೆಗೆ ಗುರಿಯಾಗಿರುವನೇದೂ, ಬೇಗನೇ ಬರುವ ಸಂಭವವಿದೆಯೆಂದೂ ಪ್ರತ್ಯುತ್ತರ ಬರೆದನು.

ಇದನ್ನು ತಿಳಿದು, ಶೀನಣ್ಣನ ಏಕಾಂಗಿತ್ವಕ್ಕಾಗಿ ತನ್ನೊಳಗೇ ನೋಯುತ್ತಿರುವ ಮುಗ್ಧ ಹುಡುಗಿ ಮಲ್ಲಿಕೆಗೆ ಆದ ಸಂತೋಷವನ್ನು ನಮ್ಮಿಂದ ವರ್ಣಿಸಲುಸದಳವೆ? ಅವಳು ಕೂಡಲೇ ತನ್ನ ಆನಂದವನ್ನೆಲ್ಲಾ ಒಂದು ಪತ್ರದಲ್ಲಿ ಬರೆದು ಗೌರಿಗೆ ಕಳುಹಿಸಿದಳು ಗೌರಿ ಪ್ರತ್ಯಾನಂದದ ಪ್ರತ್ಯುತ್ತರವನ್ನು ಬರೆದಳು. ಕ್ರಮಕ್ರಮವಾಗಿ ನಾಡಿನೊಳಗೆಲ್ಲಾ ಈ ವಿಚಿತ್ರ ಸುದ್ದಿ ಹರಡಿತು ಶೀನೂ-ಗೋಪಾಲರು ಬಿಡುಗಡೆಹೊಂದಿ 'ಢೆಲ್ಲೀ ಎಕ್ಸ್‌ಪ್ರೆಸ್'ನಲ್ಲಿ ಮದರಾಸಿಗೆ ಬಂದು ಸೇರಿದಾಗ ಈ ಸುದ್ದಿ ಜನಜನಿತವಾಗಿ ಹೋಗಿತ್ತು !

ಶೀನೂ-ಗೋಪಾಲರು "ಮಹಿಳಾಭ್ಯುದಯ ಮಂಡಲಿ"ಗೆ ಬಂದು ಗೌರೀ-ಸುಂದರಿಯರಿಗೆ ದರ್ಶನವಿತ್ತರು. ಅದೊಂದು ವಿಚಿತ್ರ ಕಾಣಿಕೆ ತನಗೆ ಸಿದ್ಧವಾಗಿರುವುದನ್ನರಿತು ಶೀನು ಅವಾಕ್ಕಾಗಿ ಹೋದನು !

ತನ್ನನ್ನು ಕೇಳದೆ ಹೀಗೆ ಮಾಡಿದ ಸುಂದರಿಯಮೇಲೆ ಅವನಿಗೆ ಸಿಟ್ಟು ಬಂತು — "ಇದೇನು ಕೆಲಸ ಮಾಡಿಬಿಟ್ಟೆ ಸುಂದರಿ ! ನಾನು ನಿನ್ನ ವಿಷಯದಲ್ಲಿ ಏನೋ ಯೋಚಿಸಿ ನಿಶ್ಚಯ ಮಾಡಿಟ್ಟಿದ್ದರೆ, ನೀನು ಎಲ್ಲವನ್ನೂ ಪುಡಿಪುಡಿಮಾಡಿ ಬಿಟ್ಟೆಯಲ್ಲ!........" ಎಂದನು.

"ಕ್ಷಮಿಸಿರಿ ಸ್ವಾಮಿ! ನಾನು ಮಾಡಿದ್ದು ತಪ್ಪಾಗಿರುತ್ತಿದ್ದರೆ ಅದಕ್ಕೆ ದೈವ ಸಹಾಯವಾಗುತ್ತಿದ್ದಿಲ್ಲ; ಸ್ಪರ್ಧೆಯ ಪರಿಣಾಮವು ಹೀಗಾಗುತ್ತಿದ್ದಿಲ್ಲ ಆದುದರಿಂದ ನೀವು ಅಸಮಾಧಾನಪಟ್ಟುಕೊಳ್ಳದೆ, ಈ ಕಾಣಿಕೆಯನ್ನು ಸ್ವೀಕರಿಸಲೇಬೇಕು ನಾಡೆಲ್ಲಾ ನಿಮ್ಮ ಈ ವಿಜಯ ವಿವಾಹವನ್ನೆ ಇದಿರುನೋಡಿಕೊಂಡಿದೆ! ಎಲ್ಲಾ ತಿಳಿದವರು ನೀವು; ಈ ಸಂದರ್ಭದಲ್ಲಿ ಏನಾದರೂ ತಡೆ ನುಡಿಯುವುದು ಸಮಂಜಸವಲ್ಲ. ಸ್ವಾಮಿ,

ನಿಮಗೆ ಕಾನೂನಿನ ತಡೆಯಾಗಬಾರದೆಂದು ನಿಮ್ಮ ಮೊದಲನೇ ವಿವಾಹ ವನ್ನು ರದ್ದುಪಡಿಸಿಕೊಂಡುದಕ್ಕೆ ಗುರುತಾಗಿ ಈ ಪತ್ರವನ್ನು ಸ್ವೀಕರಿಸಿ ಕೊಳ್ಳಿ!'' ಎಂದು ಪ್ರಾರ್ಥಿಸಿಕೊಂಡು ಸುಂದರಿ ಒಂದು ಮುದ್ರಾಪತ್ರ ವನ್ನು ತೆಗೆದು ಶೀನುವಿನ ಪಾದದ ಬದಿಯಲ್ಲಿಟ್ಟಳು

ಶೀನ ಏನೋ ಹೇಳಲಿಕ್ಕಿರಲು, ಗೋಪಾಲನು,— '' ಇನ್ನೇನೂ ಅಮಂಗಲ ಮಾತಾಡಬೇಡಯ್ಯ ಹಾಗೆ ನಿನಗೆ ಸುಂದರಿಯೂ ಬೇಕಾಗಿ ದ್ದರೆ ಇವಳೂ ನಿನ್ನೊಂದಿಗೆ ಇರುತ್ತಾಳೆ ಏನಮ್ಮ ಸುಂದರಿಬಾಯಿ?...."

ಸುಂದರಿ '' ಬೇಡ ಬೇಡ ! ನಾನು ಹೊರಟಿರುವ ಮಾರ್ಗದಲ್ಲಿ ಬಹಳ ದೂರ ವ ಎಂದುವರಿದು ಬಿಟ್ಟಿದ್ದೇನೆ ನನ್ನ ಈ ಸೇವಾಮಾರ್ಗವು ಸ್ಥಿರವಾಗಿದೆ ನಿಮ್ಮ ಈ ಗೆಳೆಯರನ್ನು ಒಪ್ಪಿಸುವ ಭಾರವು ನಿಮಗೆ ಬಿಟ್ಟಿದ್ದೇನೆ '' ಎಂದಳು.

''ಶೀನು ! ಇನ್ನು ನೀನು ಏನಾದರೂ ಕುಂಟು ಮಾತು ಆಡಿದಿ ಯೆಂದರೆ, ನಾನೂ ಸುಂದರೀಬಾಯಿಯಂತೆ, ದೇಶಮಾತೆಯೊಂದಿಗೆ ಐಕ್ಯ ನಾಗಿ ಹೋದೇನು!'' ಎಂದು ಗೌರಿಯ ಮುಖವನ್ನು ನೋಡಿ, ಶೀನು ವಿನ ಬೆನ್ನನ್ನು ತಟ್ಟಿದನು.

ಶೀನುವಿಗೆ ಮಾತಿಗೇ ಮಾರ್ಗವಿಲ್ಲದಂತಾಗಿ ಬಿಟ್ಟಿತ್ತು.

''ಸರಿ ಕಾಣಿಕೆ ಬರುವಾಗ ಬೇಡೆನ್ನಬಾರದು" ಎಂದು ಸುಪ್ರಸನ್ನ ನಾದನು

ಇನ್ನು ನಾವು ಕೊಂಚ ಮಾತ್ರವೇ ಹೇಳಿ ಈ ಪುಸ್ತಕವನ್ನು ಮುಗಿ ಸುತ್ತೇವೆ ಅದನ್ನು ಊಹನೆಯಿಂದಲೇ ತಿಳಿದುಕೊಳ್ಳಬಲ್ಲ ಓದುಗರು ಬೇಕಾದರೆ ಇಲ್ಲಿಯೇ ಈ ಪುಸ್ತಕವನ್ನು ಮುಚ್ಚಬಹುದು. ಊಹನೆಗೆ ಬಂದರೂ ನಮ್ಮ ಲೇಖನಿಯಿಂದಲೇ ತಿಳಿಯಬೇಕೆಂಬ ಓದುಗರಿಗೆ ಮಾತ್ರ ಮುಂದಿನ ನುಡಿಗಳು.

ಮುಂದೇನು? ಮದರಾಸಿನಿಂದ ಕೃಷ್ಣನಿಗೂ, ಬಳ್ಳಾರಿಗೂ ತಂತಿ ಗಳು ಹೋದವು. ಶೀನು ಕೆಂಪುಕೋಟೆಯೊಳಗಿನಿಂದ ಆಗಮಿಸಿದ ವಾರ್ತೆಯನ್ನು ಕೇಳಿ, ಬಳ್ಳಾರಿಯಿಂದ ವೆಂಕೋಬರಾಯರೇ ಸ್ವತಃ ಮದರಾಸಿಗೆ ಬಂದು, ಶೀನುವಿಗೆ ಭೇಟಿಕೊಟ್ಟರು.

ಏನು ದೈವದ ಲೀಲೆ! ಅಂದು ಶೀನು ಅವರ ಮನೆಯಲ್ಲಿಯೇ ಅಡುಗೇ ಭಟ್ಟ! ಇಂದು ಅವರ ಅಳಿಯನಾಗುತ್ತಾನೆ!

ಸುಂದರಿ, ಶೀನು, ಗೋಪಾಲ, ಗೌರಿ, ವಸಂತಿ, ಎಲ್ಲರೂ ವೆಂಕೋಬರಾಯರೊಂದಿಗೆ ಬಳ್ಳಾರಿಗೆ ಹೊರಟರು ವಧೂ-ವರರು ಪರಸ್ಪರ ಮುಖದರ್ಶನಮಾಡಿಕೊಂಡದ್ದಾಯಿತು. ಸಂವಾದನವೂ ನಡೆಯಿತು. ಶೀನುವಿನಂತಹ ಮಹಾ ಸಾಹಿತಿಯೇ ತನಗೆ ವರನಾಗಿ ದೊರೆತನೆಂದು, ವೀಣಾಕುಮಾರಿಯ ಮುಖವು ಹರ್ಷಪ್ರಫುಲ್ಲಿತವಾಗಿತ್ತು.

ನಿರ್ವಿಘ್ನವಾಗಿ ನೆರವೇರಿತು ಶೀನೂ-ವೀಣಾಕುಮಾರಿಯರ ವಿವಾಹ ಮಹೋತ್ಸವ. ಕನ್ನಡನಾಡಿಗೆಲ್ಲಾ ಕುತೂಹಲಕಾರಿಯಾದ ವಿವಾಹವದು. ನಾಡಿಗೆ ಪರಿಚಿತರಾದ ಎಲ್ಲಾ ಸಾಹಿತಿಗಳಿಗೂ ನಿಮಂತ್ರಣವಿತ್ತು ಈ ಮದುವೆಗೆ ಊರಿನಿಂದ ಕೃಷ್ಣನೂ ಮಲ್ಲಿಕೆಯೂ ದೊಡ್ಡಮ್ಮನೂ ಬಂದಿದ್ದರು

ವಿವಾಹ ಸಂರಂಭಣವೆಲ್ಲ ಮುಗಿಯುವವರೆಗೂ ಸುಂದರಿ ಅಲ್ಲಿಯೇ ಇದ್ದು. ವಧೂ-ವರರನ್ನು ಮನವಾರೆ ಹರಸಿ "ಮಹಿಳಾಭ್ಯುದಯ ಮಂಡಲಿ"ಗೆ ಹೊರಟುಹೋದಳು.

ಹಲವು ಮಹನೀಯರ ಪ್ರೇರೆಪಣೆಯಿಂದ ಬಳ್ಳಾರಿಯ "ಕನ್ನಡ ಕಲಾಸಂಘ"ದ ಕಾರ್ಯದರ್ಶಿತ್ವವೂ, "ಹೊಸ ಒಸಗೆ" ಪತ್ರಿಕೆಯ ಸಂಪಾದಕತ್ವವೂ ಶೀನುವಿನ ಕಡೆಗೆ ಒಲಿದು ಬಂದವು. ಅವುಗಳನ್ನು ಕೈಗೊಂಡು, ವೆಂಕೋಬರಾಯರ ಕೇಳಿಕೆಯಂತೆ ಅವನು ಅವರ ಮನೆಯಲ್ಲಿಯೇ ತಂಗಬೇಕಾಯಿತು.

ಸುಂದರಿಯ ೨೫೦೦೦ ರೂಪಾಯಿ ಮೂಲಧನದ ಅಡಿಗಟ್ಟಿನ ಮೇಲೆ "ಸಾಹಿತ್ಯ ಸುಂದರೀ ವಿಮರ್ಶಾ ಸಮಿತಿ" ಎಂಬೊಂದು ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಈಗ ಶೀನು ಕಾರ್ಯೋನ್ಮುಖನಾದನು. ಈ ಸಂಬಂಧವಾದ ತೀವ್ರ ಪ್ರಚಾರಕಾರಿಯಾದ ಲೇಖನಗಳು. 'ಹೊಸ ಒಸಗೆ"ಯಲ್ಲಿ ಬರಲಾರಂಭಿಸಿದುವು. ಅಖಿಳ ಕನ್ನಡನಾಡಿನ ಒಮ್ಮತದ ಸಹಕಾರದಿಂದ ಅದು ನಡೆಯಬೇಕಾಗಿತ್ತು

ಈ ಮಧ್ಯೆ ರಜಾಕಾಲದಲ್ಲಿ ಗೌರೀ ಗೋಪಾಲರ ವಿವಾಹವೂ ಜರುಗಿಹೋಯಿತು. ಆಗೋಸ್ತು ಹೋರಾಟದ ಪರಿಣಾಮವಾಗಿ, ಭಾರತ

ದಲ್ಲಿ ಸ್ವಾತಂತ್ರ್ಯದ ಅರುಣೋದಯವಾದೊಡನೆ ಗೋಪಾಲನು ವಿವಾಹಕ್ಕೆ ಸಮ್ಮತಿಗೊಟ್ಟನು ಗುರುಹಿರಿಯರ ಸಮ್ಮತಿಯಿಂದ, ಊರಿನಲ್ಲಿಯ ಅವನ ಮನೆಯಲ್ಲಿಯೇ ವಿವಾಹವು ವೈಭವದಿಂದ ನೆರವೇರಿತು. ವಸಂತಿಯೂ ವರದನೂ ಈ ಮದುವೆಗೆ ಆಗಮಿಸಿದ್ದರು

ಶೀನಣ್ಣನ ಹೊಸ ಮದುವೆಯ ಕಾಲದಲ್ಲಿಯೇ ಗೌರಿ ಗೋಪಾಲನಿಗೆ, ಡೈರೆಕ್ಟರ ವರದನ ಪರಿಚಯಮಾಡಿಸಿ, ಸ್ನೇಹಪಡಿಸಿದ್ದಳು ಅದರಿಂದ ಗೋಪಾಲನೂ ವರದನೂ ಅನ್ಯೋನ್ಯ ಮಿತ್ರರಾಗಿ ಹೋಗಿದ್ದರು. ಗೌರಿಯ ಮದುವೆಗೆ ಬಂದಿದ್ದ ವರದನು ಅವಳ ಆತ್ಮೀಯ ಸಹೋದರನಂತೆಯೇ ಆಗಿದ್ದನು

ಗೌರಿಯ ನೃತ್ಯ-ಗೀತ ಕಲಾಶಿಕ್ಷಣಾವಧಿ ಇನ್ನೂ ಮುಗಿದಿಲ್ಲ. ಅವಳಿಗಾಗಿ ವರದನು ಸ್ಟುಡಿಯೋ ವಾತಾವರಣವನ್ನು ಪರಿಶುದ್ಧಪಡಿಸುತ್ತಿದ್ದಾನೆ ಗೌರೀ-ವರದರಿಂದ ಸಿನಿಮಾ ಪ್ರಪಂಚದಲ್ಲೊಂದು ಮಹತ್ವದ ಸುಂದರ ಕ್ರಾಂತಿಯಾಗಲಿಕ್ಕಿದೆ. ದೇಶಭಕ್ತರ ಕನಸು-ನೆನೆಸುಗಳು ಪ್ರತ್ಯಕ್ಷವಾಗಿ ಕಂಗೊಳಿಸುವ ಸ್ವಾತಂತ್ರ್ಯದ ಶುಭೋದಯವು ಕಾಣುತ್ತಿದೆ ಸಪರಿವರ್ತನೆಗೊಂಡ ವರದನು, ಸಿನೆಮಾಕಲೆ ಬೆಳಗುವ ದಿವ್ಯ ಕನಸು ನೆನೆಸುಗಳು ಕಣ್ಣೆದಿರು ಕಂಗೊಳಿಸುವ ಯೋಗವನ್ನು ಕಾಯುತ್ತಿದ್ದಾನೆ. ಶೀನುವಾದರೊ ಪ್ರತ್ಯಕ್ಷ ಕನಸನ್ನೆ ಕಾಣುತ್ತಿದ್ದಾನೆ !—ಅಲ್ಲಲ್ಲ ಕವಿಯ ಕನಸಿನಂತಹ ಕಲಾದೇವಿಯೊಡನೆ ಅವನ ಮದುವೆ ಪ್ರತ್ಯಕ್ಷವೇ ಆಗಿತ್ತು !

ವಿದ್ಯಾವಿನಯ ವಿಧೇಯತಾದಿ ಸುಗುಣಮಣಿಯೂ, ಸುಂದರಿಯೂ ಶ್ರೀಮಂತಿನಿಯೂ ಆದ ಕನ್ಯಾಮಣಿಯನ್ನು ಭಾಷಾದೇವಿ ಶೀನುವಿಗೆ ಕಾಣಿಕೆ ಕೊಟ್ಟಿದ್ದಾಳೆ. ಶೀನುವಿನ ಸಾಹಿತ್ಯವು ಅವನ ಸಂಗಾತಿನಿಯ ಕುಂಚವಿನ್ಯಾಸಗಳಿಂದ ತೊಳಗಲಾರಂಭವಾಗಿದೆ.

ಈ ನಲ್ಲನಸಿನ ಕಂಗೊಳಿಕೆಗೆ ಕಾರಣಕರ್ತ್ರಿಣಿಯಾದ ತ್ಯಾಗಿ ಸುಂದರಿಯನ್ನು ಕನಸು—ನೆನೆಸುಗಳೆರಡರಲ್ಲಿಯೂ ಮರೆಯಲಾರ ಶೀನು. ಅವಳು ಪ್ರತ್ಯಕ್ಷಳಾಗಿ ವರವನ್ನು ಕೊಟ್ಟು; ಮತ್ತೆ ಮಾಯವಾಗಿ ಹೋದ ಕನಸಿನ ದೇವಿಯೆಂದು ಅವನು ಭಾವಿಸುತ್ತಿದ್ದನು.

**“ ಕನ್ನಡ ಚೆಲ್ನುಡಿ ಉನ್ನತಿಗೇರಲಿ ! ”**